

# ಡಿ.ವಿ.ಹಾಲಭಾವಿಯವರ

## ಬದುಕು ಮತ್ತು ಕಲಾಕೃತಿಗಳು

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಕಿರು ಸಂಶೋಧನ ಮಹಾಪ್ರಬಂಧ


ಸಂಶೋಧಕ
ಶಂಕರಪ್ಪ ಎಂ. ಕುಂದಗೋಳ

ಮಾರ್ಗದರ್ಶಕರು
ಡಾ.ಎಸ್.ಸಿ.ಪಾಟೀಲ
ಪ್ರವಾಚಕರು ಮತ್ತು ಮುಖ್ಯಸ್ಥರು





ಮತ್ತು ವರ್ಣಚಿತ್ರಕಲಾ ವಿಭಾಗ
ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೫

# ಚಿತ್ರಕಲಾವಿದ ಡಿ.ವಿ.ಹಾಲಭಾವಿಯವರ
# ಬದುಕು ಮತ್ತು ಕಲಾಕೃತಿಗಳು

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಲಘುಸಂಶೋಧನ ಪ್ರಬಂಧ

ಸಂಶೋಧಕರು
**ಶಂಕರಪ್ಪ ಎಂ. ಕುಂದಗೋಳ**

ಮಾರ್ಗದರ್ಶಕರು
**ಡಾ.ಎಸ್.ಸಿ.ಪಾಟೀಲ**
ಪ್ರವಾಚಕರು ಮತ್ತು ಮುಖ್ಯಸ್ಥರು

ಲಲಿತಕಲಾ ನಿಕಾಯ
**ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಬನಶಂಕರಿ, ಬಾದಾಮಿ
೨೦೦೫

# ಪ್ರಮಾಣ ಪತ್ರ

**ಚಿತ್ರಕಲಾವಿದ ಡಿ.ವಿ.ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು** ಎಂಬ ಶೀರ್ಷಿಕೆಯ ಲಘು ಸಂಶೋಧನ ಪ್ರಬಂಧವನ್ನು ಡಾ.ಎಸ್.ಸಿ.ಪಾಟೀಲ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಈ ಪ್ರಬಂಧವನ್ನು ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**(ಶಂಕರಪ್ಪ ಎಂ. ಕುಂದಗೋಳ)**
ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಬನಶಂಕರಿ, ಬಾದಾಮಿ

ದಿನಾಂಕ : ೩೦ ಎಪ್ರಿಲ್ ೨೦೦೫
ಸ್ಥಳ : ಬನಶಂಕರಿ ಬಾದಾಮಿ

## ಪ್ರಮಾಣ ಪತ್ರ

**ಶಂಕರಪ್ಪ ಎಂ. ಕುಂದಗೋಳ** ಇವರು ಬರೆದು ಸಾದರಪಡಿಸಿದ **ಚಿತ್ರಕಲಾವಿದ ಡಿ.ವಿ.ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು** ಎಂಬ ಶೀರ್ಷಿಕೆಯ ಲಘು ಸಂಶೋಧನ ಪ್ರಬಂಧವು ಮೂಲ ಸಂಶೋಧನ ಕೃತಿಯಾಗಿದ್ದು ಅವರು ನನ್ನ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿದ್ದಾರೆ.

ಪ್ರಸ್ತುತ ಪ್ರಬಂಧ ಇಡಿಯಾಗಿ, ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**(ಡಾ.ಎಸ್.ಸಿ.ಪಾಟೀಲ)**
ಪ್ರವಾಚಕರು ಮತ್ತು ಮುಖ್ಯಸ್ಥರು
ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಬನಶಂಕರಿ, ಬಾದಾಮಿ

ದಿನಾಂಕ : ೩೦ ಏಪ್ರಿಲ್ ೨೦೦೫
ಸ್ಥಳ : ಬನಶಂಕರಿ ಬಾದಾಮಿ

## ಪರಿವಿಡಿ



ಪ್ರಕೃತಿಯ ಅನೇಕ ಜೀವಗಳಲ್ಲಿ ಮಾನವ ಜೀವನವೂ ಒಂದು. ನಿಸರ್ಗದೊಡನೆ ನಿಸರ್ಗವಾಗಿ ಮನುಷ್ಯ ಬದುಕತೊಡಗಿದಾಗ ಉಂಟಾದ ಆಯಾಸ, ಭಯ, ಆನಂದ, ಉತ್ಸಾಹದ ಪ್ರತೀಕವಾಗಿ ನೂರಾರು ಚಟುವಟಿಕೆಗಳು ಕಾಲಕ್ರಮೇಣ ಕಾಣಿಸಿಕೊಂಡವು. ಆ ಒಟ್ಟು ಚಟುವಟಿಕೆಗಳನ್ನು 'ಕಲೆ' ಎಂಬ ಪದದ ವ್ಯಾಪ್ತಿಯಲ್ಲಿ ವಿದ್ವಾಂಸರು ಗಮನಿಸುತ್ತಾರೆ. ಸಮಾಜಶಾಸ್ತ್ರಜ್ಞರು ಕಲೆಯ ಉಗಮವನ್ನು ಮಾನವನ ಸಾಮಾಜಿಕ ಜೀವನದ ವಿಕಾಸದಲ್ಲಿ ಕಾಣುತ್ತಾರೆ. ಸಮಾಜಕ್ಕಾಗಿ ಕಲೆಯು ಒದಗಿಸುವ ಕಲ್ಯಾಣ ಪರಿವರ್ತನೆ ಶಕ್ತಿ ಬಹು ಅಂಶದಲ್ಲಿ ಅವನ ಕಣ್ಣೆದುರು ಕಟ್ಟುತ್ತದೆ. ಮನಃಶಾಸ್ತ್ರಜ್ಞನು ಕಲೆಯ ಉಗಮವನ್ನು ಮಾನವನ ಮನಸ್ಸಿನಲ್ಲಿ ಕಂಡುಹಿಡಿಯುತ್ತಾನೆ. ಮನಸ್ಸಿನ ಸೂಕ್ಷ್ಮ ಚಲನವಲನಗಳ ಅಭಿವ್ಯಕ್ತಿಯೇ ಕಲೆಯೆಂದು ಅದನ್ನು ಅಳೆಯತೊಡಗುತ್ತಾನೆ. ಒಂದು ಮನಸ್ಸಿನಲ್ಲಿ ಅದು ಉಗಮಿಸಿ. ಇನ್ನೊಂದು ಮನಸ್ಸನ್ನು ಅದು ತುಂಬುವುದು. ಹಾಗೆಯೇ ಇತಿಹಾಸಕಾರರು, ತಾತ್ವಿಕರು, ತಾರ್ಕಿಕರು, ರಾಜಕಾರಣಿಗಳು ಇವರೆಲ್ಲರೂ ತಮ್ಮ ತಮ್ಮ ದೃಷ್ಟಿಯಿಂದ ಕಲೆಯ ಒಂದೊಂದು ಪರಿಯನ್ನು ಕಂಡುಹಿಡಿಯುತ್ತಾರೆ. ಈ ಅಭಿಪ್ರಾಯ ಮನುಕುಲದ ವಿವಿಧ ರಂಗದ ಇತಿಹಾಸದ ಇಂದಿನ ಸ್ಥಿತಿಯಲ್ಲಿ ನಿಂತು ನೋಡಿದಾಗ ಮನುಷ್ಯ ಜನ್ಮದ ರಹಸ್ಯದಷ್ಟೇ ಅವನು ಹುಟ್ಟು ಹಾಕಿರುವ ಈ ಕಲೆಯ ರಹಸ್ಯ ಕೂಡ ಇದೆ. ಇಲ್ಲಿ ಕಲೆಯ ಉಗಮ ವಿಕಾಸದ ಬಗೆಗೆ ಸ್ವಲ್ಪ ಸಮೀಪ ಹೋಗಿ ನಿಲ್ಲುವ ಸಾಹಸ ಮಾಡಬಹುದೇ ಹೊರತು, ಖಚಿತತೆ ಸಾಧ್ಯವಾಗದು.[೧]

ಮಾನವನ ಪ್ರಾಚೀನತೆಯನ್ನು ಆದಿಮಾನವನ ಹಂತದ್ದೆಂದು ಗಮನಿಸಿದಾಗ ಅವನ ಬದುಕಿನ ಊಹಾಚಿತ್ರವನ್ನು ಕಲ್ಪಿಸಿದಾಗ ಅವನ ಭಯ, ಆತಂಕ, ರೋಗರುಜಿನ, ಭೂಕಂಪನ ಪ್ರವಾಹಗಳಿಗೆ ಅವನು ತೋರುತ್ತಿದ್ದ ಪ್ರತಿಕ್ರಿಯೆ ಹೇಗಿರಬಹುದಿತ್ತು? ಬುದ್ಧಿ ಬೆಳೆದ ನಂತರ ಅವನ ಪ್ರತಿಕ್ರಿಯೆ ದೇವರು ದೈವದೊಡನೆ, ಆಚಾರ ವಿಚಾರದೊಡನೆ ಹೇಗಿರಬಹುದಿತ್ತು? ಇಂತಹ ಪ್ರಶ್ನೆ ಹಾಕಿಕೊಂಡಾಗ ತನ್ನ ಸಮಾಧಾನಕ್ಕಾಗಿ ದುಃಖದ ಪ್ರತೀಕಾರಕ್ಕಾಗಿ ಹುಟ್ಟಿಸಿಕೊಂಡ ಚಟುವಟಿಕೆಗಳೇ ಬಹುಶಃ ಚಿತ್ರಕಲೆಗಳಾಗಿರಬಹುದೆನಿಸುತ್ತದೆ.

ಚಿತ್ರಕಲೆಗೆ ಅನೇಕ ದಿಕ್ಕುಗಳಿವೆ. ಅನೇಕ ಉದ್ದೇಶ ಹಾಗೂ ವೈಶಿಷ್ಟ್ಯತೆಗಳಿವೆ. ಈ ವೈವಿಧ್ಯತೆಗಳಲ್ಲಿ ಕಲೆ ಎಂದರೇನು? ಇದು ಜೀವನದ ಅರ್ಥವೇನು? ಎನ್ನುವಷ್ಟೇ ಮಹತ್ವದ ಪ್ರಶ್ನೆಯಾಗಿದೆ. ಕಲೆಯ ಕುರಿತಾಗಿ

೧. ಡಾ. ಎಸ್.ಸಿ.ಪಾಟೀಲ, ಜನಪದ ಚಿತ್ರಕಲೆ, ಪುಟ ೪

ಮುಖ್ಯವಾಗಿ ಎರಡು ಪ್ರಶ್ನೆಗಳಿವೆ. ಕಲೆಗಾಗಿ ಕಲೆಯೇ? ಜೀವನಕ್ಕಾಗಿ ಕಲೆಯೇ? ಎಂದು ಕಲೆ ಹಾಗು ಜೀವನಗಳನ್ನು ಭಿನ್ನ ಭಿನ್ನವಾಗಿ ನೋಡಲಾಗುವುದಿಲ್ಲ. ಕಲೆಯಲ್ಲಿ ಪ್ರತಿಯೊಂದು ನೆಲೆ ಹಾಗು ಕಾಲಘಟ್ಟದಲ್ಲಿ ಜೀವನದ ಮಹತ್ವವಾದ ಚರಿತ್ರೆ ಅಡಗಿದೆ.

ಪ್ರಾಚೀನ ಕಾಲದಿಂದಲೂ ಕನ್ನಡ ಅರಸರು ಕನ್ನಡ ಪ್ರಜೆಗಳು ಲಲಿತ ಕಲೆಗಳ ಬಗೆಗೆ ಉದಾತ್ತವಾದ ಧೋರಣೆಯನ್ನು ತಳೆದು, ಉನ್ನತವಾದ ಅಭಿರುಚಿಯನ್ನು ಬೆಳೆಸಿಕೊಂಡು ಬಂದಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಇದರಿಂದಾಗಿ ಕರ್ನಾಟಕದ ಕಲೆಗಳು ಭರತ ಖಂಡದ ಎಲ್ಲ ಭಾಗಗಳ ಉತ್ತಮ ಅಂಶಗಳನ್ನು ಕಾಪಾಡಿಕೊಂಡು ಬಂದಿವೆ. ಒಟ್ಟಿನಲ್ಲಿ ನೋಡುವುದಾದರೆ, ಕನ್ನಡ ನಾಡಿನ ಕಲಾ ಪರಂಪರೆಯು ಅಪೂರ್ವವಾದದು ಕನ್ನಡಿಗರ ಎದೆಯಲ್ಲಿ ಸದಭಿಮಾನವನ್ನು ಮೂಡಿಸುವಂತಹದು ಆಗಿದೆ. ರಾಜನೀತಿ, ಧರ್ಮಸಹಿಷ್ಣುತೆ, ಕಲಾವಕಾಶ ಈ ಎಲ್ಲ ದೃಷ್ಟಿಗಳಿಂದಲೂ ಕರ್ನಾಟಕವೂ ಒಂದು ಸಣ್ಣ ಭರತ ಖಂಡವೇ ಆಗಿದೆ. ಹೀಗಾಗಿ ವಿಶ್ವದಲ್ಲಿ ಭಾರತದ ಸ್ಥಾನಮಾನಗಳು ಹೇಗೆ ವೈಶಿಷ್ಟ್ಯಪೂರ್ಣವಾಗಿಯೋ ಹಾಗೆಯೇ ಭಾರತದಲ್ಲಿ ಕರ್ನಾಟಕದ ಸ್ಥಾನಮಾನಗಳು ಅಷ್ಟೇ ವೈಶಿಷ್ಟ್ಯಪೂರ್ಣವಾದವುಗಳಾಗಿವೆ.

ಭಾರತೀಯ ಪರಂಪರೆ ಹಾಗೂ ಪಾಶ್ಚಾತ್ಯ ತಂತ್ರಗಳ ಅತ್ಯುತ್ತಮ ಸಮನ್ವಯವನ್ನು ಚಿತ್ರಕೃತಿಗಳಲ್ಲಿ ಸಾಧಿಸಿದ ಕಲಾವಿದರು ನಮ್ಮಲ್ಲಿ ಆಗಿಹೋಗಿದ್ದಾರೆ. ಪೌರಾಣಿಕ ಹಾಗೂ ಐತಿಹಾಸಿಕ ಚಿತ್ರಗಳಲ್ಲಿ ಅನನ್ಯ ಕಲಾಸಿದ್ಧಿ ಪಡೆದ ಸಂಪ್ರದಾಯ ನಿಷ್ಠ, ಕಲಾವಿದರಿಗೆ ಸ್ಫೂರ್ತಿಯಾಗಿ ಕಲಾವಿದ ಚಿತ್ರಕಲೆಯಿಂದ ಹೇಗೆ ಜೀವಿಸಬಹುದು ಎಂಬುದನ್ನು ತೋರಿಸಿ ಸುಖದ ಬಾಳನ್ನು ಕಂಡ ಹಿರಿಯ ಕಲಾವಿದರಿದ್ದಾರೆ. ಹಾಗೆಯೇ ರಾಜಾಶ್ರಯದಲ್ಲಿ ದುಡಿದ ಅತ್ಯುತ್ತಮ ಕಲಾವಿದರು, ಅಲಂಕಾರ ಕಲೆ, ಸೂಕ್ಷ್ಮಕಲೆಗಳಲ್ಲಿ ಖ್ಯಾತಿವೆತ್ತ ಮತ್ತು ನವ್ಯಕಲಾತಂತ್ರದಲ್ಲಿ ಪ್ರಯೋಗ ನಡೆಸಿದ ಹಾಗೂ ನಡೆಸುತ್ತಿರುವ ಈ ಕಲಾವಿದರ ಅಮೂಲ್ಯ ರಚನೆಗಳು ನಮ್ಮ ನಾಡಿಗೆ ಕೀರ್ತಿಯನ್ನು ಗಳಿಸಿಕೊಟ್ಟಿರುವುದಲ್ಲದೆ, ಚಿತ್ರಕಲಾ ಕ್ಷೇತ್ರದಲ್ಲಿ ಇವರ ಸಾಧನೆಗಳು ಶಾಶ್ವತವಾಗಿ ನಿಂತಿರುವುದು ಹೆಮ್ಮೆಯ ಸಂಗತಿಯಾಗಿದೆ.

ತಮ್ಮ ವ್ಯಾಪ್ತಿಯಲ್ಲಿ ಅನೇಕ ರೀತಿಯ ಸಾಧನೆ ಮಾಡಿ ಕನ್ನಡ ನೆಲದ ಸುವಾಸನೆಯನ್ನು ನಾಡಿನೆಲ್ಲೆಡೆ ಪಸರಿಸಿದ್ದಾರೆ. ಈ ಕಲಾವಿದರ ಅಮೂಲ್ಯ ಕೊಡುಗೆಗಳು ಇಂದಿನ ಯುವ ಪೀಳಿಗೆಗೂ ಹೊಸ ಚೈತನ್ಯ ನೀಡುತ್ತಾ ಬಂದಿದೆ. ಇವರ ಅಪಾರ ಕೊಡುಗೆಗಳನ್ನು ಕುರಿತು ಸಂಶೋಧನೆ ಮಾಡಿ ಈ ಕ್ಷೇತ್ರದ ದಿಗಂತವನ್ನು ಇನ್ನಷ್ಟು ವಿಸ್ತರಿಸುವ ಸದಾಶಯ, ಪ್ರಸ್ತುತ ಅಧ್ಯಯನ ಕೈಗೊಳ್ಳಲು ಕಾರಣವಾಗಿದೆ.

## ಅಧ್ಯಯನ ಉದ್ದೇಶ

ಪ್ರಸ್ತುತ ಸ್ಥಿತಿಯಲ್ಲಿ ಕಲೆ ಕಲಾವಿದರ ಕುರಿತು ವಿವರ ಮತ್ತು ಅವರ ಭಾವನಾತ್ಮಕ ತುಡಿತಗಳನ್ನು ಹಾಗೂ ಪ್ರಕಟಿತ ವಿಮರ್ಶೆಗಳನ್ನು ಇಂದು ನಾವು ದಾಖಲಿಸುವ ಕಾರ್ಯ ಮಾಡಬೇಕಾಗಿದೆ. ನಾಡಿನ ಉದ್ದಗಲಕ್ಕೂ ನಮ್ಮ ಕಲಾವಿದರ ಸಾಧನೆ, ಕಲಾಜೀವನ, ಕ್ಷೇತ್ರಸೇವೆ ಇವು ನಮ್ಮ ಗಮನಕ್ಕೆ ಎಷ್ಟೋ ಸಲ ಬಾರದೇ ಹೋಗಿವೆ. ಆದರೆ ಅವು ನಿರಂತರವಾಗಿ ಮುಂದಿನ ಜನಾಂಗಕ್ಕೂ ಪರಿಚಯವಾಗಬೇಕಾದರೆ ಅವರುಗಳ ಅಧ್ಯಯನವನ್ನು ಕಾರ್ಯರೂಪಕ್ಕೆ ತರುವುದು ಇಂದು ತೀರಾ ಅವಶ್ಯಕವಾಗಿದೆ.

ಚಿತ್ರಕಲಾಕ್ಷೇತ್ರದಲ್ಲಿ ಅತ್ಯಂತ ಉನ್ನತ ಮಟ್ಟದ ಸಾಧನೆಗೈದ ಹಿರಿಯ ಕಲಾವಿದ ಡಿ.ವಿ.ಹಾಲಭಾವಿಯವರ ಜೀವನ, ಸಾಧನೆಯ ಹಾದಿ, ಚಿತ್ರಕಲಾಕ್ಷೇತ್ರಕ್ಕೆ ಅವರು ನೀಡಿದ ಕೊಡುಗೆಯನ್ನು ದಾಖಲೀಕರಣ ಮಾಡುವ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಹೆಸರುವಾಸಿಯಾದ ಡಿ.ವಿ. ಹಾಲಭಾವಿಯವರು ಕರ್ನಾಟಕದ ಪ್ರಮುಖ ಚಿತ್ರಕಲಾವಿದರಲ್ಲಿ ಒಬ್ಬರು. ರಾಜ್ಯದ ಸಾಂಸ್ಕೃತಿಕ ನಗರವೆಂದೇ ಪ್ರಸಿದ್ಧಿಯಾದ ಧಾರವಾಡದ ಪ್ರತಿಷ್ಠಿತ

ನ್ಯಾಯಾಧೀಶರಾದ ವೀರಭದ್ರಪ್ಪನವರ ಮಗನಾಗಿ ೧೯೦೭ ನವಂಬರ್ ೨೮ರಂದು ಜನಿಸಿದ ಇವರು ಬಾಲ್ಯದಲ್ಲಿಯೇ ಚಿತ್ರಕಲೆಯ ಬಗ್ಗೆ ಅಪಾರವಾದ ಆಸಕ್ತಿಯನ್ನು ಹೊಂದಿದವರಾಗಿದ್ದರು. ೧೯೧೭ರಲ್ಲಿ ಬೆಳಗಾಂವ್ ಜಿಲ್ಲೆಯ ಜಲಗಾಂವ್‌ದಿಂದ ಎಲಿಮೆಂಟರಿ ಡ್ರಾಯಿಂಗ್ ಗ್ರೇಡ್ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಹಾಗೂ ಇಂಟರ್ ಮೀಡಿಯೇಟ್ ಡ್ರಾಯಿಂಗ್ ಗ್ರೇಡ್ ಪರೀಕ್ಷೆಯಲ್ಲಿ ಉಚ್ಚಶ್ರೇಣಿಯಲ್ಲಿ ಉತ್ತೀರ್ಣರಾದರು. ಇವರ ಕಲಾಪ್ರತಿಭೆಯನ್ನು ಕಂಡು ಚಿಕ್ಕೋಡಿಯ ಆರ್.ಡಿ.ಎ.ವಿ. ಶಿಕ್ಷಣ ಸಂಸ್ಥೆಯಲ್ಲಿ ಇವರನ್ನು ಚಿತ್ರಕಲಾಶಿಕ್ಷಕರನ್ನಾಗಿ ನೇಮಿಸಿಕೊಂಡರು. ಇಲ್ಲಿ ಎರಡು ವರ್ಷಗಳ ಕಾಲ ಚಿತ್ರಕಲಾಶಿಕ್ಷಕರಾಗಿ ತಮ್ಮ ಸೇವೆಯನ್ನು ಸಲ್ಲಿಸಿ ಮುಂದೆ ತಮ್ಮ ಉನ್ನತ ಕಲಾವ್ಯಾಸಂಗಕ್ಕಾಗಿ ಮುಂಬೈನ ಪ್ರತಿಷ್ಠಿತ ಕಲಾಶಾಲೆಯಾದ ಜೆ.ಜೆ.ಸ್ಕೂಲ್ ಆಫ್ ಆರ್ಟಗೆ ಪ್ರಯಾಣ ಬೆಳೆಸಿದರು. ಈ ಕಲಾಶಾಲೆಯಲ್ಲಿ ೧೯೨೬ರಲ್ಲಿ ಮೊದಲ ವರ್ಷದ ಪೇಂಟಿಂಗ್‌ನಲ್ಲಿ ಉತ್ತೀರ್ಣರಾದರು. ಅನಿವಾರ್ಯ ಕಾರಣದಿಂದಾಗಿ ಇವರ ಮುಂಬೈ ಕಲಾಶಿಕ್ಷಣವು ಸ್ಥಗಿತಗೊಂಡಿತು. ಸುಮಾರು ಏಳೆಂಟು ವರ್ಷಗಳ ನಂತರ ಅಂದರೆ ೧೯೩೫ರಲ್ಲಿ ಪೇಂಟಿಂಗ್ ಡಿಪ್ಲೋಮಾ ಪರೀಕ್ಷೆಯಲ್ಲಿ ಮೊದಲ ಶ್ರೇಣಿಯಲ್ಲಿ ಉತ್ತೀರ್ಣರಾದರು. ಇವರು ೧೯೩೬ರಲ್ಲಿ ಕಲಾಶಿಕ್ಷಣದ ಆರ್ಟ ಮಾಸ್ಟರ್ (ಎ.ಎಮ್)ಪದವಿ ಪರೀಕ್ಷೆಯನ್ನೂ ಕೂಡ ಮುಂಬೈ ಪ್ರಾಂತ್ಯದಲ್ಲಿಯೇ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದರು.

ಹೀಗೆ ಮುಂಬೈನ ಜೆ.ಜೆ ಕಲಾಶಾಲೆಯ ಕಟ್ಟುನಿಟ್ಟಾದ ಶಿಸ್ತಿನ ಕ್ರಮ ಮತ್ತು ಬೋಧನಾ ವಿಧಾನ, ಅಲ್ಲಿಯ ಪಠ್ಯಕ್ರಮ, ಅಧ್ಯಾಪಕ ವರ್ಗ ಇವೆಲ್ಲವುಗಳು ಹಾಲಭಾವಿಯವರ ಮೇಲೆ ಗಾಢವಾಗಿ ಪರಿಣಾಮ ಬೀರಿರಿವುದರ ಪ್ರಭಾವೇ ಕರ್ನಾಟಕದ ಸಾಂಸ್ಕೃತಿಕ ನಗರವೆಂದೇ ಪ್ರಸಿದ್ಧಿಯಾದ ಧಾರವಾಡದಲ್ಲಿ೧೯೩೫ರಲ್ಲಿ ಅವರಿಂದ ಸ್ಥಾಪಸಲ್ಪಟ್ಟ ಕರ್ನಾಟಕದ ಮೊಟ್ಟ ಮೊದಲ ಕಲಾಶಾಲೆ **'ಸ್ಕೂಲ್ ಆಫ್ ಆರ್ಟ.'**

ಧಾರವಾಡವು ಉತ್ತರ ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ ಎಂದು ಹೇಳುವ ಒಂದು ಮಾತು ಪ್ರಚಲಿತವಾಗಿದೆ. ಸಂಸ್ಕೃತಿ ಎನ್ನುವುದು ಅನೇಕ ಗುಣ ವಿಶೇಷಗಳ ಸುಂದರ ಸಮುಚ್ಚಯ. ಕಲೆಯನ್ನು ಮೆಚ್ಚಿಕೊಳ್ಳುವ ದೃಷ್ಟಿಯನ್ನು ಪಡೆದವನೆನ್ನುವ ಕಾರಣದಿಂದ ಮನುಷ್ಯನು ಸುಸಂಸ್ಕೃತ ಅಭಿರುಚಿ ಉಳ್ಳವನೆನಿಸುತ್ತಾನೆ. ಧಾರವಾಡದ ಪರಿಸರಕ್ಕೆ ಹಾಲಭಾವಿಯವರು ತಮ್ಮ ಅನುಪಮ ಕಾಣಿಕೆಯನ್ನು ಸಲ್ಲಿಸಿದ್ದಾರೆ. ಎಪ್ಪತ್ತು ವರ್ಷಗಳಿಂದಲೂ ಧಾರವಾಡದಲ್ಲಿ ಈ ಕಲಾಶಾಲೆ ಉಳಿದುಕೊಂಡು ಬಂದಿರುವದನ್ನು ನೋಡಿದರೆ ಅದು ಮಹತ್ವದ ಸಾಧನೆಯೆಂದೇ ಕರೆಯಬೇಕಾಗುತ್ತದೆ.

ಧಾರವಾಡದಲ್ಲಿ ಕಲೆಯನ್ನು ನೆಲೆಯಾಗಿ ನಿಲ್ಲಿಸುವ ಕಾಲದಲ್ಲಿಯೂ ಹಾಲಭಾವಿಯವರು ಕಲೆ ಎನ್ನುವ ಜನರ ಮಧ್ಯದಲ್ಲಿ ನಿಂತುಕೊಂಡು ಕಲೆ ಎಂದು ಹೇಳುವ ಕೆಲಸಕ್ಕೆ ನಿಂತರೆನ್ನುವುದೊಂದು ಚಮತ್ಕಾರಿಕ ಘಟನೆ. ಅವರು ಚಿತ್ರಗಳನ್ನು ಬರೆಯುತ್ತ ತಮ್ಮ ಚಿತ್ರಕಲೆಯನ್ನು ಸಂವರ್ಧಿಸಿಕೊಂಡು ತರುಣ ಕಲಾವಿದರಿಗೆ ಮಾರ್ಗದರ್ಶನ ಒದಗಿಸಿಕೊಟ್ಟರು.

ಚಿತ್ರಕಲೆಯ ಬೆಳವಣಿಗೆಗೆ ಅವರು 'ಆರ್ಟ್ ಗಿಲ್ಡ್'ಎಂಬ ಮಾಸ ಪತ್ರಿಕೆಯನ್ನು ಕನ್ನಡ ಮತ್ತು ಆಂಗ್ಲ ಭಾಷೆಗಳಲ್ಲಿ ಪ್ರಕಟಿಸುತ್ತಿದ್ದರು. 'ಕಾಂಟೆಂಪರರಿ ಆರ್ಟಿಸ್ಟ್' ಎಂಬ ಗ್ರಂಥವನ್ನು ಬರೆದರು.

ಹಾಲಭಾವಿ ಇಲ್ಲಿಯವರೆಗೆ ಸುಮಾರು ೫೦೦ ಚಿತ್ರಗಳನ್ನು ತೈಲವರ್ಣದಲ್ಲಿ, ೪೦೦ ಜಲವರ್ಣದಲ್ಲಿ ಹಾಗೂ ಬಹಳಷ್ಟು ಚಿತ್ರಗಳನ್ನು ಪೆನ್ಸಿಲ್ ಮಾಧ್ಯಮದಲ್ಲಿ ಚಿತ್ರಿಸಿರುವರು. ಇವರು ಭಾವಚಿತ್ರ, ನಿಸರ್ಗಚಿತ್ರ, ರೇಖಾಚಿತ್ರ, ಸ್ಮರಣಚಿತ್ರ ಹಾಗೂ ಸಂಯೋಜನ ಚಿತ್ರಗಳನ್ನು ಚಿತ್ರಿಸಿದ್ದಾರೆ. ಎಷ್ಟೋ ಚಿತ್ರಗಳು ಇಂದು ರಾಜ್ಯಗಳಲ್ಲಿ ಸಂಗ್ರಹಗೊಂಡಿವೆ. 'ಯಾದಗಿರಿ ಕಿಲ್ಲೆಯ ನಿಸರ್ಗ ಚಿತ್ರ' ಯು.ಎಸ್.ಗೆ, 'ಗೋಳಗುಮ್ಮಟ' ನಿಸರ್ಗಚಿತ್ರ ಇಂಗ್ಲೆಂಡ್‌ಗೆ, 'ಹಂಪಿಯ ಕಲ್ಲಿನ ರಥ'ದ ವರ್ಣಚಿತ್ರ ಸ್ವೀಡನ್‌ಗೆ, 'ಲಮಾಣಿ ತೈಲಚಿತ್ರ' ಹಾಲಂಡ್‌ಗೆ, 'ಗೊರವ, ಮೀನುಗಾರರ' ಜೀವನಚಿತ್ರ (ತೈಲವರ್ಣ) ಫ್ರಾನ್ಸ್‌ಗೆ, ಹಂಪಿಯ 'ಕಮಲಮಹಲ' ಒಳಗೊಂಡ ನಿಸರ್ಗಚಿತ್ರ ಜಪಾನಿಗೆ, ಭಾರತೀಯ

ಒಕ್ಕಲಿಗ ಬಾಳಿನ ೩೦ ವರ್ಣ ಹಾಗೂ ರೇಖಾಚಿತ್ರಗಳನ್ನು ಅಮೇರಿಕಾಕ್ಕೆ ಕಳಿಸಿಕೊಟ್ಟಿದ್ದಾರೆ. ಈಗಲೂ ಅವೆಲ್ಲಾ ಅಲ್ಲಿಯ ವಸ್ತು ಸಂಗ್ರಹಾಲಯಗಳಲ್ಲಿ ನೋಡಲು ಇವೆ. ಇವರು ಹಲವಾರು ಚಿತ್ರಗಳನ್ನು ವ್ಯಕ್ತಿಗತವಾಗಿ, ಗ್ರಂಥಗಳಿಗಾಗಿ, ಮಠ, ಮಂದಿರ, ಮಸೀದಿ, ಮುಂತಾದ ಕಡೆಗೆ ಮತ್ತು ವಾಣಿಜ್ಯ ವೃತ್ತಿಗಳಿಗಾಗಿ, ಐತಿಹಾಸಿಕ, ಧಾರ್ಮಿಕ ಕಾರ್ಯಗಳಿಗಾಗಿ, ಜಾನಪದ ವಿಷಯಗಳಿಗಾಗಿ ಚಿತ್ರಿಸಿಕೊಟ್ಟಿರುವರು. ಇದುವರೆಗೆ ಇವರು ಚಿತ್ರಿಸಿದ ಕಲಾಕೃತಿಗಳು ಸುಮಾರು ಆರು ಸಾವಿರದಷ್ಟು ಆಗುತ್ತದೆ ಎಂದು ಅಂದಾಜಿಸಲಾಗಿದೆ.

ಹೀಗೆ ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಚಿತ್ರಕಲಾಕ್ಷೇತ್ರಕ್ಕೆ ತಮ್ಮದೇ ಆದ ವಿಶಿಷ್ಟ ಕೊಡುಗೆಯನ್ನು ನೀಡಿರುವ ಹಿರಿಯ ತಲೆಮಾರಿನ ಕಲಾವಿದರಲ್ಲಿ ಗಮನಾರ್ಹವಾಗಿ ಗುರುತಿಸಿಕೊಂಡಿರುವ ಡಿ.ವಿ.ಹಾಲಭಾವಿಯವರ ಕುರಿತು ಇದುವರೆಗೂ ಯವುದೇ ಅಧ್ಯಯನಗಳು ಆಗದೇ ಇರುವ ಹಿನ್ನೆಲೆಯಲ್ಲಿ ಪ್ರಸ್ತುತ **"ಚಿತ್ರಕಲಾವಿದ ಡಿ.ವಿ.ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು"** ಎಂಬ ವಿಷಯದ ಕುರಿತು ಇಲ್ಲಿ ಅಧ್ಯಯನವನ್ನು ಮಾಡುವ ಉದ್ದೇಶವನ್ನು ಹೊಂದಲಾಗಿದೆ.

**ಚಿತ್ರಕಲಾ ಕ್ಷೇತ್ರದಲ್ಲಿ ಇಲ್ಲಿಯವರೆಗೆ ನಡೆದ ಅಧ್ಯಯನಗಳು**

ಕರ್ನಾಟಕದ ಸಂದರ್ಭದ ಚಿತ್ರಕಲಾ ಕ್ಷೇತ್ರದಲ್ಲಿ ಹೆಚ್ಚಿನ ಸಂಶೋಧನಾ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬಹುದಾಗಿದೆ. ಏಕೆಂದರೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆಗಳ ಕುರಿತಾದ ಅಧ್ಯಯನಕ್ಕೆ ಅವಕಾಶ ದೊರಕಿದ್ದು ತೀರ ಇತ್ತೀಚೆಗಷ್ಟೆ. ೯೦ರದಶಕದಲ್ಲಿ ಈ ಅಧ್ಯಯನಗಳು ತೀವ್ರಗೊಂಡು ಈಗ ಪ್ರೌಢಾವಸ್ಥೆಗೆ ಬಂದು ತಲುಪಿವೆ. ೧೯೮೦ರ ದಶಕದಿಂದ ಕರ್ನಾಟಕದಲ್ಲಿ ನಡೆದ ದೃಶ್ಯಕಲಾ ಅಧ್ಯಯನಗಳ ಸ್ಥೂಲವಾದ ವಿವರವನ್ನು ಈ ಕೆಳಗೆ ಸಮೀಕ್ಷಿಸಿ ಕೊಡಲಾಗಿದೆ.

೧೯೮೦ರ ದಶಕದಿಂದ ಕರ್ನಾಟಕದ ದೃಶ್ಯಕಲಾ ಕ್ಷೇತ್ರದಲ್ಲಿ ಮೊದಲಬಾರಿಗೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆ ಕುರಿತು ಸಂಶೋಧನಾತ್ಮಕ ಅಧ್ಯಯನ ಪ್ರಾರಂಭಗೊಂಡಿರುವುದು ಕಂಡುಬರುತ್ತದೆ. ಡಾ.ಎಸ್.ಸಿ.ಪಾಟೀಲರು ೧೯೮೩ರಲ್ಲಿ ಕರ್ನಾಟಕ ವಿ.ವಿ.ಯ ಸ್ನಾತಕೋತ್ತರ ಶಿಕ್ಷಣ ವಿಭಾಗಕ್ಕೆ ಮಂಡಿಸಿದ **ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ ಒಂದು ಅಧ್ಯಯನ**[೨] ಎಂಬ ಸಂಶೋಧನ ಕಿರು ಪ್ರಬಂಧವು ಈ ಕ್ಷೇತ್ರದ ಪ್ರಥಮ ಅಧ್ಯಯನದ ಕಾರ್ಯವೆಂದು ದಾಖಲಾಗಿದೆ. ೧೯೮೭ರಲ್ಲಿ ಡಾ.ಬಿ.ಕೆ.ಹಿರೇಮಠರವರು **ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ**[೩] ಎಂಬ ಪಿಹೆಚ್.ಡಿ. ಮಹಾಪ್ರಬಂಧದಲ್ಲಿ ಹಸ್ತಪ್ರತಿ ಚಿತ್ರಕಲೆ ಕುರಿತಂತೆ ಕೆಲವು ಅಧ್ಯಾಯಗಳು ಮೀಸಲಾಗಿಟ್ಟ ಅಧ್ಯಯನ ಮಾಡಿದ್ದಾರೆ. ಇದರ ನಂತರ ೧೯೯೧ರಲ್ಲಿ ಕರ್ನಾಟಕದಲ್ಲಿ ಜನಪದ ಚಿತ್ರಕಲೆಯನ್ನೇ ಸಂಶೋಧನೆಯ ಮುಖ್ಯ ವಿಷಯವನ್ನಾಗಿಟ್ಟಕೊಂಡು ಕರ್ನಾಟಕ ವಿ.ವಿ.ಗೆ ಮಂಡಿಸಿದ ಪಿಹೆಚ್.ಡಿ. ಮಹಾಪ್ರಬಂಧ **ಕರ್ನಾಟಕದ ಜನಪದ ಚಿತ್ರಕಲೆ**[೪] ಈ ಮಹಾಪ್ರಬಂಧವನ್ನು ಡಾ.ಎಸ್.ಸಿ.ಪಾಟೀಲರು ಸಿದ್ಧಪಡಿಸಿದ್ದು ನಮ್ಮ ದೃಶ್ಯಕಲಾ ಕ್ಷೇತ್ರದ ಮೊದಲ ಅಧ್ಯಯನ ಎಂಬ ಅಗ್ಗಳಿಕೆಗೆ ಪಾತ್ರವಾಗಿದೆ. ನಂತರದ ದಿನಗಳಲ್ಲಿ ೧೯೯೫ರಲ್ಲಿ ಡಾ. ಅ.ಲ.ನರಸಿಂಹನ್ ಅವರು ಬೆಂಗಳೂರು ವಿ.ವಿ.ಗೆ ಮಂಡಿಸಿದ ಪಿಎಚ್.ಡಿ. ಮಹಾಪ್ರಬಂಧ **ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು,**[೫] ೧೯೯೭ರಲ್ಲಿ ಡಾ.ಸಂಪದಾ ಭಟ್ ಅವರ **ಹಿಂದೂಸ್ಥಾನಿ ಸಂಗೀತ ಹಾಗೂ ರಾಗಮಾಲ ಚಿತ್ರಗಳು,**[೬] ಬೆಂಗಳೂರು ವಿಶ್ವವಿದ್ಯಾಲಯಕ್ಕೆ ೧೯೯೭ರಲ್ಲಿ ಡಾ.ಪುಷ್ಪಾ ದ್ರಾವಿಡ ಇವರು ಮಂಡಿಸಿದ **ಅನಿವಾಸಿ ಭಾರತೀಯ**

---

೨. ಡಾ. ಎಸ್.ಸಿ.ಪಾಟೀಲ, ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ, ಕರ್ನಾಟಕ ವಿ.ವಿ.,೧೯೮೩
೩. ಡಾ. ಬಿ.ಕೆ.ಹಿರೇಮಠ, ಕನ್ನಡ ಹಸ್ತಪ್ರತಿಗಳು, ಪಿಹೆಚ್.ಡಿ.ಮ.ಪ್ರ ಕರ್ನಾಟಕ ವಿ.ವಿ.,೧೯೮೭
೪. ಡಾ. ಎಸ್.ಸಿ.ಪಾಟೀಲ, ಜನಪದ ಚಿತ್ರಕಲೆ, ಪಿಹೆಚ್.ಡಿ.,ಮ.ಪ್ರ.,೧೯೯೧
೫. ಡಾ. ಅ.ಲ.ನರಸಿಂಹನ್, ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, ಪಿಹೆಚ್.ಡಿ.,ಮ.ಪ್ರ., ಬೆಂಗಳೂರು ವಿ.ವಿ.೧೯೯೮
೬. ಡಾ. ಸಂಪದಾ ಭಟ್, ಹಿಂದೂಸ್ಥಾನಿ ಸಂಗೀತ ಹಾಗೂ ರಾಗಮಾಲ ಚಿತ್ರಗಳು, ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ.೧೯೯೫

ಕಲಾವಿದ ದಿ.ನಿಕೋಲಸ್ ರೋರಿಕ ಜೀವನ ಮತ್ತು ಕಲಾಕೃತಿಗಳು,[೭]**೨೦೦೧ ರಲ್ಲಿ ಡಾ.ಯಾದಪ್ಪ ಪರದೇಶಿಯವರ **ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಒಂದು ಅಧ್ಯಯನ,**[೮] ೨೦೦೨ರಲ್ಲಿ ಡಾ.ಶಿವಾನಂದ ಬಂಟನೂರು ಇವರ **ಕರ್ನಾಟಕದ ಜನಪದ ಶಿಲ್ಪಕಲೆ, ಒಂದು ಅಧ್ಯಯನ,**[೯] ೨೦೦೨ರಲ್ಲಿ ಡಾ.ಗಿರೀಶ ಅವರ **ಬುಡಕಟ್ಟು ಚಿತ್ರಕಲೆ,**[೧೦]೨೦೦೨ರಲ್ಲಿ ಡಾ.ಲಕ್ಷ್ಮಿದೇವಿಗವಾಯಿಯವರ ಕಲಾವಿದ **ಎಂ.ಎ.ಚೆಟ್ಟಿಯವರ ಜೀವನ, ಕಲಾಕೃತಿಗಳು–ಒಂದು ಅಧ್ಯಯನ,**[೧೧] ೨೦೦೨ರಲ್ಲಿ ಶರಣಪ್ಪ ಕೋಲ್ಕಾರ ಅವರ **ಕೊಪ್ಪಳ–ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ,**[೧೨] ೨೦೦೨ರಲ್ಲಿ ಡಾ.ಸೌಮ್ಯ ಅವರ **ಯಂತ್ರಾ ದಿ ವಿಜುವಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫೆರೆನ್ಸ್ ಟು ಕಾಂಟೆಂಪರರಿ ತಾಂತ್ರಿಕ ಆರ್ಟಿಸ್ಟ್**[೧೩] ೨೦೦೨ರಲ್ಲಿ ಡಾ.ಪ್ರಮೀಳಾ ಲೋಚನ ಅವರ **ಮೈಂಡ್ ಮ್ಯೂಜಿಕ್ ಅಂಡ್ ಕಲರ್ ಎಕ್ಸಪೋಜಿಸ್ ಅಂಡ್ ಡೆವೆಲಪ್ಮೆಂಟ್ ಆಫ್ ರಾಗಮಾಲಾ ಅಂಡ್ ಕಾಂಟೆಂಪರರಿ ಪೇಂಟಿಂಗ್**[೧೪] ೨೦೦೩ರಲ್ಲಿ ಡಾ.ವೀಣಾ ಶೇಖರ್ ಮಂಡಿಸಿದ **ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ** (೧೭೮೦–೧೮೨೦),[೧೫] ೨೦೦೩ರಲ್ಲಿ ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ ಅವರ **ಕಲಾವಿದ ಆರ್.ಎಮ್.ಹಡಪದ, ಒಂದು ಅಧ್ಯಯನ,**[೧೬] ೨೦೦೩ರಲ್ಲಿ ಡಾ.ಎಸ್.ಸಿ.ಪಾಟೀಲರು ಕರ್ನಾಟಕ ವಿ.ವಿಗೆ ಮಂಡಿಸಿದ **ಎಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ ಎಜ್ಯುಕೇಶನ್ ಎಟ್ ಸ್ಕೂಲ ಲೆವೆಲ್ ಇನ್ ಕರ್ನಾಟಕ ಸ್ಟೇಟ್ ವಿತ್ ಸ್ಪೆಷಲ್ ರೆಫೆರೆನ್ಸ್ ಟು ಡ್ರಾಯಿಂಗ ಆಂಡ್ ಪೇಂಟಿಂಗ,**[೧೭] ೨೦೦೪ರಲ್ಲಿ ಡಾ.ವಿ.ಎಮ್.ಬಾಗಾಯತ್ ಅವರ **ಕರ್ನಾಟಕ ಮುಸ್ಲಿಂ ಅರಸರ ಕಾಲದ ಚಿತ್ರಕಲೆ, ಒಂದು ಅಧ್ಯಯನ(೧೪೦೦–೧೮೦೦),**[೧೮] ೨೦೦೪ರಲ್ಲಿ ಡಾ.ಶಿವಕುಮಾರ ಎ.ಓ. ಅವರ **ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು.**[೧೯]೨೦೦೫ರಲ್ಲಿ ಡಾ.ಶಶಿಕಲಾ ಹೂಗಾರ ಅವರ **ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ**[೨೦] ೨೦೦೫ರಲ್ಲಿ ಶಿವಪ್ರಕಾಶ ತುಕ್ಕಣ್ಣವರ ಅವರ **ಕರ್ನಾಟಕ ರಥ ಶಿಲ್ಪಕಲೆ**[೨೧] ೨೦೦೫ರಲ್ಲಿ ಎಂ.ಎನ್.ಚಿತ್ರಗಾರ ಅವರ **ಕರ್ನಾಟಕ ಹಸ್ತಪ್ರತಿ ಚಿತ್ರಕಲೆ**[೨೨] ಕುರಿತ ಬಂದ ಮಹಾಪ್ರಬಂಧಗಳು.

---

೭. ಡಾ. ಪುಷ್ಪಾ ದ್ರಾವಿಡ, ಅನಿವಾಸಿ ಭಾರತೀಯ ಕಲಾವಿದ ದಿ.ನಿಕೋಲಸ್ ರೋರಿಕ ಜೀವನ ಮತ್ತು ಕಲಾಕೃತಿಗಳು,ಪಿಹೆಚ್.ಡಿ., ಮ.ಪ್ರ., ಬೆಂಗಳೂರು ವಿ.ವಿ., ೧೯೯೭

೮. ಡಾ. ಯಾದಪ್ಪ ಪರದೇಶಿ, ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ. ೨೦೦೦

೯. ಡಾ. ಶಿವಾನಂದ ಬಂಟನೂರು, ಕರ್ನಾಟಕದ ಜನಪದ ಶಿಲ್ಪಕಲೆ, ಒಂದು ಅಧ್ಯಯನ,ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ.೨೦೦೨

೧೦ ಡಾ. ಗಿರೀಶ ಬುಡಕಟ್ಟು ಚಿತ್ರಕಲೆ,ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ.೨೦೦೨

೧೧. ಡಾ. ಲಕ್ಷ್ಮಿದೇವಿ ಗವಾಯಿ, ಕಲಾವಿದ ಎಂ.ಎ.ಚೆಟ್ಟಿಯವರ ಜೀವನ, ಕಲಾಕೃತಿಗಳು–ಒಂದು ಅಧ್ಯಯನ, ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ.೨೦೦೨

೧೨ ಡಾ. ಶರಣಪ್ಪ ಕೋಲ್ಕಾರ ಅವರ ಕೊಪ್ಪಳ–ಹಂಪಿ ಪ್ರದೇಶದ ಪ್ರಾಗಿತಿಹಾಸಿಕ ಕಾಲದ ಕಲೆ,ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ.೨೦೦೨

೧೩. ಡಾ. ಸೌಮ್ಯ, ಯಂತ್ರಾ ದಿ ಯುಜುಮ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫೆರನ್ಸ್ ಟು ಕಾಂಟೆಂಪರರಿ ತಾಂತ್ರಿಕಾ ಆರ್ಟಿಸ್ಟ, ಪಿಹೆಚ್.ಡಿ., ಮ.ಪ್ರ., ಬೆಂಗಳೂರು ವಿ.ವಿ. ೨೦೦೨

೧೪. ಡಾ. ಪ್ರಮೀಳಾ ಲೋಚನ, ಮೈಡ್ ಮ್ಯೂಜಿಕ್ ಅಂಡು ಕಲರ್ ಎಕ್ಷಪೋಜಿಸ್ ಅಂಡ್ ಡೆವೆಲಪ್ಮೆಂಟ್ ಆಫ್ ರಾಗಮಾಲಾ ಅಂಡ್ ಕಾಂಟೆಂಪರರಿ ಪೇಂಟಿಂಗ್, ಪಿಹೆಚ್.ಡಿ., ಮ.ಪ್ರ., ಬೆಂಗಳುರು ವಿ.ವಿ. ೨೦೦೨

೧೫. ಡಾ. ವೀಣಾ ಶೇಖರ್, ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ (೧೭೮೦–೧೮೨೦),ಪಿಹೆಚ್.ಡಿ.,ಮ.ಪ್ರ.,ಬೆಂಗಳೂರು ವಿ.ವಿ., ೨೦೦೩

೧೬. ಡಾ. ಸಿದ್ಧಲಿಂಗಸ್ವಾಮಿ ಹಿರೇಮಠ, ಕಲಾವಿದ ಆರ್.ಎಮ್.ಹಡಪದ, ಒಂದು ಅಧ್ಯಯನ,ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ.೨೦೦೩

೧೭. ಡಾ. ಎಸ್.ಸಿ.ಪಾಟೀಲ, ಎ ಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ ಎಜ್ಯುಕೇಶನ್ ಆಟ್ ಸ್ಕೂಲ ಲೆವೆಲ್ ಇನ್ ಕರ್ನಾಟಕ ಸ್ಟೇಟ್ ವಿತ್ ಸ್ಪೆಷಲ್ ರೆಫೆರೆನ್ಸ್ ಟು ಡ್ರಾಯಿಂಗ ಆಂಡ್ ಪೇಂಟಿಂಗ,ಕರ್ನಾಟಕ ವಿ.ವಿ., ೨೦೦೩

೧೮. ಡಾ. ವಿ.ಎಮ್.ಬಾಗಾಯತ್, ಕರ್ನಾಟಕ ಮುಸ್ಲಿಂ ಅರಸರ ಕಾಲದ ಚಿತ್ರಕಲೆ, ಒಂದು ಅಧ್ಯಯನ(೧೪೦೦–೧೮೦೦),ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ.೨೦೦೪

೧೯. ಡಾ. ಶಿವಕುಮಾರ ಎ.ಓ., ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು, ಪಿಹೆಚ್.ಡಿ ಮ.ಪ್ರ., ಗು.ವಿ.ಗು. ೨೦೦೪

೨೦. ಡಾ. ಶಶಿಕಲಾ ಹೂಗಾರ, ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ, ಪಿಹೆಚ್.ಡಿ.ಮ.ಪ್ರ.ಕನ್ನಡವಿ.ವಿ.,೨೦೦೫

೨೧. ಶಿವಪ್ರಕಾಶ ತುಕ್ಕಣ್ಣವರ, ಕರ್ನಾಟಕ ರಥ ಶಿಲ್ಪಕಲೆ, ಪಿಹೆಚ್.ಡಿ.ಮ.ಪ್ರ.ಕನ್ನಡವಿ.ವಿ.,೨೦೦೫

೨೨. ಎಂ.ಎನ್.ಚಿತ್ರಗಾರ, ಕರ್ನಾಟಕ ಹಸ್ತಪ್ರತಿ ಚಿತ್ರಕಲೆ, ಪಿಹೆಚ್.ಡಿ.ಮ.ಪ್ರ.ಕನ್ನಡವಿ.ವಿ.,೨೦೦೫

೨೦೦೨ರಲ್ಲಿ ಮಲ್ಲಿಕಾರ್ಜುನ ಬಾಗೋಡಿಯವರು ಎಂ.ಫಿಲ್. ಪದವಿಗಾಗಿ ಮಂಡಿಸಿದ ಚಿತ್ರಕಲಾವಿದ **ಜೆ.ಎಸ್.ಖಂಡೇರಾವ–ಒಂದು ಅಧ್ಯಯನ,**[೨೩] ಮತ್ತು ೨೦೦೩ರಲ್ಲಿ ಎ.ಎಸ್.ವಿಶ್ವನಾಥ ಅವರ **ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣ,**[೨೪]ಕರ್ನಾಟಕ ದೃಶ್ಯಕಲೆಯ ಕುರಿತಾಗಿ ಬಂದ ಸಂಶೋಧನಾ ಅಧ್ಯಯನಗಳಾಗಿದ್ದು, ಈಗ ಗುಲ್ಬರ್ಗಾ, ಬೆಂಗಳೂರು, ಕರ್ನಾಟಕ ವಿ.ವಿ. ಮತ್ತು ಕನ್ನಡ ವಿ.ವಿ.ಗಳಲ್ಲಿ ಪಿಹೆಚ್.ಡಿ.ಅಧ್ಯಯನಕ್ಕೆ ಹಲವಾರು ವಿದ್ಯಾರ್ಥಿಗಳು ಸೇರ್ಪಡೆಯಾಗಿ ಅಧ್ಯಯನ ನಿರತರಾಗಿದ್ದಾರೆ. ಇದಲ್ಲದೇ ಅನೇಕ ಬಿ.ಎಫ್.ಎ.ಪದವಿ ಹಾಗೂ ಎಮ್.ವಿ.ಎ. ಪದವಿ, ಎಮ್.ಎಫ್.ಎ. ಪದವಿ ತರಗತಿಗಳಿಗೆ ಅಧ್ಯಯನದ ಭಾಗವಾಗಿ ಕಿರು ಸಂಶೋಧನಾ ಪ್ರಬಂಧಗಳು ರಚನೆಯಾಗಿದ್ದು ಅವುಗಳ ಸಂಖ್ಯೆ ನೂರೈವತ್ತಕ್ಕೂ ಮಿಕ್ಕಿದೆ. ಹೀಗೆ ಈ ಕ್ಷೇತ್ರದಲ್ಲಿ ಸಂಶೋಧನೆ ತೀವ್ರವಾಗಿ ಮುನ್ನಡೆಯುತ್ತಲಿದೆ.

**ಡಿ.ವಿ.ಹಾಲಭಾವಿಯವರ ಕುರಿತು ಇದುವರೆಗೆ ನಡೆದ ಅಧ್ಯಯನ ಮತ್ತು ಪ್ರಕಟಣೆಗಳು**

ಕಲಾವಿದ ಹಾಲಭಾವಿಯವರ ಕುರಿತು ಕರ್ನಾಟಕ ಲಲಿತಕಲಾ ಅಕಾಡೆಮಿಯು ಕಲಾವಿದರ ಮಾಲೆಯಡಿಯಲ್ಲಿ ೧೯೮೭ರಲ್ಲಿ ಡಿ.ವಿ.ಹಾಲಭಾವಿ ಎಂಬ ಗ್ರಂಥವನ್ನು ಪ್ರಕಟಿಸಿದೆ. ಎಸ್.ಕೆ.ಹೂಗಾರ ಅವರು ಇದರ ಲೇಖಕರು. ಹಾಲಭಾವಿಯವರ ಬಾಲ್ಯ, ಬದುಕು ಹಾಗೂ ಕಲಾಕೃತಿಗಳನ್ನು ಸಂಕ್ಷಿಪ್ತವಾಗಿ ಈ ಗ್ರಂಥದಲ್ಲಿ ನಮೂದಿಸಿದ್ದಾರೆ.[೨೫] ಇದೇ ಅಕಾಡೆಮಿಯು ೧೯೬೮ರಲ್ಲಿ ಹಾಲಭಾವಿಯವರಿಗೆ ಗೌರವ ಪ್ರಶಸ್ತಿ ನೀಡಿ, ಅವರ ಕುರಿತು ಪರಿಚಯಾತ್ಮಕ ಲೇಖನವನ್ನು ಕ್ಯಾಟ್‌ಲಾಗ್‌ನಲ್ಲಿ ಪ್ರಕಟಿಸಿದೆ.[೨೬] ೧೯೬೮ರಲ್ಲಿ ಹಾಲಭಾವಿಯವರಿಗೆ ೬೦ ವರ್ಷ ತುಂಬಿದ ಸಂದರ್ಭದಲ್ಲಿ ತಾರಾ ಪವಾರ್ ಅವರ ಸಂಪಾದಕತ್ವದಲ್ಲಿ "ಅರವತ್ತರ ಒಸಗೆ" ಎಂಬ ಕಿರು ಸ್ಮರಣ ಸಂಚಿಕೆಯನ್ನು ಪ್ರಕಟಿಸಲಾಗಿದೆ.[೨೭] ಈ ಸಂಚಿಕೆಯಲ್ಲಿ ಹಾಲಭಾವಿಯವರ ಬದುಕಿನ ವಿವಿಧ ಮಗ್ಗಲುಗಳನ್ನು ಲೇಖನರೂಪದಲ್ಲಿ ಅವರ ಆಪ್ತೇಷ್ಟರು ನೀಡಿದ್ದಾರೆ. ೧೯೮೫ರಲ್ಲಿ ಹಾಲಭಾವಿ ಸ್ಕೂಲ ಆಫ್ ಆರ್ಟ್‌ನ ಸುವರ್ಣಮಹೋತ್ಸವ ಸಂದರ್ಭದಲ್ಲಿ ಹೊರತಂದ ಸ್ಮರಣ ಸಂಚಿಕೆಯಲ್ಲಿ ಹಾಲಭಾವಿಯವರ ಕುರಿತಂತೆ ಕೆಲವು ಲೇಖನಗಳು, ಅವರ ವ್ಯಕ್ತಿತ್ವ, ಕ್ರಿಯಾಶೀಲತೆಯನ್ನು ಕುರಿತಾಗಿವೆ.[೨೮] ೧೯೯೫ರಲ್ಲಿ ಹಾಲಭಾವಿ ಸ್ಕೂಲ ಆಫ್ ಆರ್ಟ್‌ನ ವಜ್ರಮಹೋತ್ಸವ ಸಂದರ್ಭದಲ್ಲಿ ಡಾ.ಎಸ್.ಸಿ.ಪಾಟೀಲ ಅವರ ಸಂಪಾದಕತ್ವದಲ್ಲಿ ಹೊರತಂದ 'ಚಿತ್ರಾಕ್ಷಿ' ಸಂಚಿಕೆಯಲ್ಲಿ ಹಾಲಭಾವಿಯವರ ವ್ಯಕ್ತಿತ್ವದ ಹಲವಾರು ಮಗ್ಗಲುಗಳನ್ನು ಕುರಿತು, ಅವರ ಆಪ್ತೇಷ್ಟರು ಲೇಖನಗಳನ್ನು ಬರೆದು ಶ್ರೀಯುತರಿಗೆ ಗೌರವ ಸಲ್ಲಿಸಿದ್ದಾರೆ.[೨೯] ೧೯೮೭ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ "ಕರ್ನಾಟಕ ಭಾರತಿ" ಎಂಬ ಸಂಚಿಕೆಯಲ್ಲಿ ಡಾ.ಎಸ್.ಸಿ.ಪಾಟೀಲರವರು ಹಾಲಭಾವಿಯವರನ್ನು ಸಂಕ್ಷಿಪ್ತವಾಗಿ ಲೇಖನ ರೂಪದಲ್ಲಿ ಪರಿಚಯಿಸಿದ್ದಾರೆ.[೩೦]

ಡಿ.ವಿ.ಹಾಲಭಾವಿಯವರ ಕುರಿತು ಗ್ರಂಥಗಳಲ್ಲಿ ಪ್ರಕಟವಾದ ಲೇಖನಗಳಂತಯೇ ಪತ್ರಿಕೆಯಲ್ಲೂ ಕೂಡ ಅವರ ವ್ಯಕ್ತಿತ್ವ, ಕಲೆಯ ಕೃಷಿಗೆ ಸಂಬಂಧಪಟ್ಟಂತೆ ಲೇಖನಗಳು ಪ್ರಕಟವಾಗಿವೆ. ೧೯೬೮ರಲ್ಲಿ ಹಾಲಭಾವಿಯರವರಿಗೆ ಅರವತ್ತು ತುಂಬಿದ ಸಂದರ್ಭದಲ್ಲಿ ಎಸ್.ವಿ.ಪಾಟೀಲರವರು 'ಕರ್ಮವೀರ' ವಾರಪತ್ರಿಕೆಯಲ್ಲಿ ಹಾಲಭಾವಿಯವರ ಕುರಿತು ಲೇಖನವೊಂದನ್ನು ಬರೆದಿದ್ದಾರೆ.[೩೧]೧೯೮೧ರಲ್ಲಿ 'ಕನ್ನಡಿಗ' ಪತ್ರಿಕೆಯಲ್ಲಿ ಹಾಲಭಾವಿಯವರ ಕುರಿತು

---

೨೩. ಮಲ್ಲಿಕಾರ್ಜುನ ಬಾಗೋಡಿ, ಚಿತ್ರಕಲಾವಿದ ಜೆ.ಎಸ್.ಖಂಡೇರಾವ–ಒಂದು ಅಧ್ಯಯನ,ಎಂ.ಫಿಲ್.,ಸಂ.ಪ್ರ., ಕನ್ನಡ ವಿ.ವಿ.೨೦೦೨

೨೪. ಎ.ಎಸ್.ವಿಶ್ವನಾಥ, ಯಕ್ಷಗಾನ ದೃಶ್ಯಕಲೆಯ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣ, ಎಂ.ಫಿಲ್.,ಸಂ.ಪ್ರ., ಕನ್ನಡ ವಿ.ವಿ.೨೦೦೩

೨೫. ಎಸ್.ಕೆ.ಹೂಗಾರ, ಡಿ.ವಿ.ಹಾಲಭಾವಿ, ಕ.ಲಕ.ಕ.ಬೆಂ., ೧೯೮೭

೨೬. ಕ.ಲ.ಕ.ಅ.ಬೆಂ., ೧೯೬೮

೨೭. ತಾರಾ ಪವಾರ (ಸಂ), ಅರವತ್ತರ ಒಸಗೆ, ೧೯೬೮

೨೮. ಎಚ್.ಜೆ.ಮುಲ್ಲಾ (ಸಂ), ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ, ೧೯೮೫

೨೯. ಡಾ.ಎಸ್.ಸಿ.ಪಾಟೀಲ (ಸಂ), ಚಿತ್ರಾಕ್ಷಿ, ಹಾಲಭಾವಿ ಸ್ಕೂಲ ಆಫ್ ಆರ್ಟ್, ಧಾರವಾಡ, ೧೯೯೫

೩೦. ವಿಲ್ಯಂ ಮಾಡ್ತ (ಸಂ), ಲೇ. ಡಾ.ಎಸ್.ಸಿ.ಪಾಟೀಲ ಕರ್ನಾಟಕ ಭಾರತಿ, ಕ.ವಿ.ವಿ. ಧಾರವಾಡ, ೧೯೮೭

೩೧. ಎಸ್.ವಿ. ಪಾಟೀಲ, ಕಲಾಶಿಕ್ಷಣಕ್ಕೆ ಜೀವನ ಮುಡಿಪಾಗಿರಿಸಿದ ಶ್ರೀ ಹಾಲಭಾವಿಯವರು, ಕರ್ಮವೀರ, ೧೯೬೮

ಪರಿಚಯಾತ್ಮಕ ಲೇಖನ ಪ್ರಕಟವಾಗಿದೆ.[೩೨] ೧೯೮೧ರಲ್ಲಿ "ವಿಶಾಲ ಕರ್ನಾಟಕ" ಪತ್ರಿಕೆಯಲ್ಲಿ ಹಾಲಭಾವಿಯವರ ಕುರಿತು ಪರಿಚಯಾತ್ಮಕ ಲೇಖನ ಪ್ರಕಟವಾಗಿದೆ.[೩೩] ೧೯೮೧ರಲ್ಲಿ 'ಪ್ರಜಾಜ್ಯೋತಿ' ಪತ್ರಿಕೆಯಲ್ಲಿ ಹಾಲಭಾವಿವರನ್ನು ಪರಿಚಯಿಸಿದ ಲೇಖಕರು ಕರ್ನಾಟಕ ವಿಶ್ವವಿದ್ಯಾಲಯ ಹಾಲಭಾವಿಯವರಿಗೆ ಗೌರವ ಡಾಕ್ಟರೇಟ್ ಪದವಿಯನ್ನು ನೀಡದೇ ಇರುವುದನ್ನು ಖಂಡಿಸಿದ್ದಾರೆ.[೩೪] ೧೯೯೬ರ 'ಜನಪದ' ಮಾಸಿಕ ಪತ್ರಿಕೆಯಲ್ಲಿ ಹಾಲಭಾವಿಯವರ ಕುರಿತು ಪರಿಚಯಾತ್ಮಕ ಲೇಖನ ಪ್ರಕಟವಾಗಿದೆ.[೩೫] ೧೯೯೬ರ 'ಪ್ರಪಂಚ'[೩೬], ೧೯೯೯ರ 'ಮಲ್ಲಿಗೆ'[೩೭], ೧೯೯೬ರ "ಡೆಕ್ಕನ್ ಹೆರಾಲ್ಡ್"[೩೮] ಪತ್ರಿಕೆಗಳಲ್ಲಿ ಹಾಲಭಾವಿಯವರ ಕುರಿತು ಪರಿಚಯಾತ್ಮಕ ಲೇಖನಗಳು ಪ್ರಕಟವಾಗಿವೆ.

ಹೀಗೆ ಗ್ರಂಥಗಳಲ್ಲಿ, ಪತ್ರಿಕೆಗಳಲ್ಲಿ ಹಾಲಭಾವಿಯವರ ಕುರಿತು ಪರಿಚಯಾತ್ಮಕವಾದ ಲೇಖನಗಳು ಪ್ರಕಟವಾಗಿವೆ. ಆದರೆ ಸಮಗ್ರವಾದ ಸಂಶೋಧನಾತ್ಮಕ ಅಧ್ಯಯನ ಇದುವರೆಗೂ ನಡೆಯದೇ ಇರುವುದನ್ನು ಗಮನಿಸಿ ಪ್ರಸ್ತುತ ಅಧ್ಯಯನವನ್ನು ಮಾಡುವ ಉದ್ದೇಶವನ್ನು ಇಲ್ಲಿ ಹೊಂದಲಾಗಿದೆ.

## ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನವನ್ನು ಅಧ್ಯಯನದ ಅನುಕೂಲತೆಗಾಗಿ ಏಳು ಅಧ್ಯಾಯಗಳಲ್ಲಿ ವಿಂಗಡಿಸಿದ್ದು, ಪ್ರತಿಯೊಂದು ಅಧ್ಯಾಯದಲ್ಲಿ ಚರ್ಚಿಸುವ ವಿಷಯದ ಕುರಿತಂತೆ ಅದರ ಸಂಕ್ಷಿಪ್ತ ರೂಪದ ವಿವರವನ್ನು ಇಲ್ಲಿ ಕೊಡಲಾಗಿದೆ.

**ಮೊದಲನೆಯ ಅಧ್ಯಾಯ**ದಲ್ಲಿ ಅಧ್ಯಯನದ ಉದ್ದೇಶ, ಅಧ್ಯಯನದ ಸ್ವರೂಪ, ಅಧ್ಯಯನದ ವೈಧಾನಿಕತೆ ಮತ್ತು ಮೂಲ ಆಕರ ಸಾಮಗ್ರಿ, ಆನುಷಂಗಿಕ ಆಕರ ಸಾಮಗ್ರಿಯ ಕುರಿತಾದ ವಿವರಣೆಯನ್ನು ಮಾಡಲಾಗಿದೆ.

**ಎರಡನೆಯ ಅಧ್ಯಾಯ**ದಲ್ಲಿ ಡಿ.ವಿ.ಹಾಲಭಾವಿಯವರ ಬದುಕು ಮತ್ತು ಕಲಾಜೀವನ ವಿವರಗಳಿವೆ. ಚಿತ್ರ ಕಲಾವಿದ ಡಿ.ವಿ.ಹಾಲಭಾವಿಯವರು ಜನಿಸಿದ ಧಾರವಾಡದ ಪರಿಸರ ಮತ್ತು ಸಾಂಸ್ಕೃತಿಕ ಹಿನ್ನಲೆಯೊಂದಿಗೆ ಅವರ ಬಾಲ್ಯ ಜೀವನ, ಪ್ರಾಥಮಿಕ ಹಾಗೂ ಪ್ರೌಢ ಹಂತದ ಮತ್ತು ಮುಂಬೈ ಜೆ.ಜೆ.ಸ್ಕೂಲ್ ಆಫ್ ಆರ್ಟ್‌ನ ಶೈಕ್ಷಣಿಕ ಜೀವನವನ್ನು ಕುರಿತು ಇಲ್ಲಿ ಅಧ್ಯಯನ ರೂಪುಗೊಂಡಿದೆ.

**ಮೂರನೆಯ ಅಧ್ಯಾಯ**ದಲ್ಲಿ ಡಿ.ವಿ.ಹಾಲಭಾವಿಯವರು ಮತ್ತು ಕಲಾಶಾಲೆಯ ಕುರಿತು ಚರ್ಚಿಸಲಾಗಿದೆ. ಹಾಲಭಾವಿಯವರ ವೃತ್ತಿ ಜೀವನದ ಪ್ರಾರಂಭ, ಅವರು ನಡೆದು ಬಂದ ದಾರಿ ಮತ್ತು **'ಸ್ಕೂಲ್ ಆಫ್ ಆರ್ಟ'**ನ ಸ್ಥಾಪನೆ, ಅದರ ಶೈಕ್ಷಣಿಕ ಸಾಧನೆಗಳ ವಿವರವನ್ನು ಇಲ್ಲಿ ದಾಖಲಿಸಲಾಗುವುದು.

**ನಾಲ್ಕನೆಯ ಅಧ್ಯಾಯ**ದಲ್ಲಿ ಡಿ.ವಿ.ಹಾಲಭಾವಿಯವರ ಕಲಾಕೃತಿಗಳ ಹರವನ್ನು ಕುರಿತು ಅಧ್ಯಯನವಿದೆ. ಹಾಲಭಾವಿಯವರು ತಮ್ಮ ಶೈಕ್ಷಣಿಕ ಬದುಕಿನ ಮಧ್ಯದಲ್ಲಿ ರಚಿಸಿದ ರೇಖಾಚಿತ್ರಗಳ ವರ್ಣಚಿತ್ರಗಳ ಹಾಗೂ ಛಾಯಾಚಿತ್ರಗಳ ಕುರಿತಾದ ವಿಶ್ಲೇಷಣೆ ಇಲ್ಲಿ ಇರುವುದು.

**ಐದನೆಯ ಅಧ್ಯಾಯ**ದಲ್ಲಿ ಡಿ.ವಿ.ಹಾಲಭಾವಿಯವರ ಕಲಾಕೃತಿಗಳ ಶೈಲಿ, ಪ್ರಭಾವ, ಪ್ರೇರಣೆ ಹಾಗೂ ತಂತ್ರಗಾರಿಕೆಯನ್ನು ವಿವರಿಸಲಾಗಿದೆ. ಹಾಲಭಾವಿಯವರು ತಮ್ಮ ಬದುಕಿನುದ್ದಕ್ಕೂ ರಚಿಸಿದ ನೂರಾರು ಕಲಾಕೃತಿಗಳಲ್ಲಿ ತಮ್ಮ ಸುತ್ತಲಿನ ಪರಿಸರದ ಪ್ರಭಾವ ಪಡೆಯುವುದರ ಮೂಲಕ ತಮ್ಮ ಅಭಿವ್ಯಕ್ತಿಗೆ ಒಂದು ನಿರ್ದಿಷ್ಟ ರೂಪವನ್ನು

---

೩೨. ಲೇ.- , ಚಿತ್ರಕಲಾ ನೈಪುಣ್ಯದ ಶ್ರೀ ದಾ.ವೀ.ಹಾಲಭಾವಿ, ಕನ್ನಡಿಗ, ೧೯೮೧
೩೩. ಕಲಾಪ್ರಿಯ, ಹಿರಿಯ ಕಲಾವಿದ ದಾನಪ್ಪ ಹಾಲಭಾವಿ, ವಿಶಾಲ ಕರ್ನಾಟಕ, ೧೯೮೧
೩೪. ಜಿ.ಎಸ್.ಉಮದಿ, ಕರ್ನಾಟಕ ವಿ.ವಿಯಕ್ಕೆ ಯಾವ ಕಾಮಣಿ ಆಗಿದೆ? ಇಂಥವರಿಗೆ ಡಾಕ್ಟರೇಟ್ ಗೌರವ ಪದವಿ ಕೊಡಲಿ, ವಿಶಾಲ ಕರ್ನಾಟಕ, ೧೯೮೧
೩೫. ಮೋಹನ ಭದ್ರಾಪುರ, ಚಿತ್ರಕಲಾ ಪ್ರಪಂಚದ ರಸಋಷಿ ಡಿ.ವಿ.ಹಾಲಭಾವಿ, ಜನಪದ, ೧೯೯೬
೩೬. ಮೂವರು ಗಣ್ಯರಿಗೆ ಮೂರು ಪ್ರತಿಷ್ಠಿತ ಪ್ರಶಸ್ತಿಗಳು, ಪ್ರಪಂಚ,೧೯೯೬
೩೭. ಎನ್ಕೆ. ಕರ್ನಾಟಕಕ್ಕೊಂದು ಕಲಾದೇಗುಲ ಕಟ್ಟಿದ ರಸಶಿಲ್ಪ ಪೂಜ್ಯ ದಾನಪ್ಪ ಹಾಲಭಾವಿ ಅವರು. ಮಲ್ಲಿಗೆ, ೧೯೯೯
೩೮. ಪ್ರಮಿಳಾ ಬಿ. ಕುನ್ನೂರು, ಧಾರವಾಡ ಆರ್ಟ್ ಸ್ಕೂಲ್ – ಎ ಕ್ವಿಟ್ ಸಕ್ಸೆಸ್, ಡೆಕ್ಕನ್ ಹೆರಾಲ್ಡ್, ೧೯೮೬

ನೀಡಿದ್ದಾರೆ. ಅಂತಹ ಶೈಲಿ, ಪ್ರಭಾವ, ಪ್ರೇರಣೆ, ತಂತ್ರಗಾರಿಕೆಗಳ ಕುರಿತಾದ ಚರ್ಚೆಯನ್ನು ಪ್ರಸ್ತುತ ಅಧ್ಯಾಯದಲ್ಲಿ ಕೈಗೊಳ್ಳಲಾಗುವುದು.

**ಆರನೆಯ ಅಧ್ಯಾಯ**ದಲ್ಲಿ ಡಿ.ವಿ.ಹಾಲಭಾವಿಯವರ ಕಲಾಸಾಹಿತ್ಯದ ಕುರಿತು ಚರ್ಚೆ ಇದೆ. ಹಾಲಭಾವಿಯವರು ತಮ್ಮ ಬದುಕನ್ನು ಕೇವಲ ಚಿತ್ರಗಳ ರಚನೆಗೆ ಮಾತ್ರ ತೊಡಗಿಸಿಕೊಳ್ಳದೇ ಕಲಾಸಾಹಿತ್ಯಕ್ಕೂ ವಿಸ್ತರಿಸಿಕೊಂಡಿದ್ದಾರೆ. ಹೀಗೆ ಅವರಿಂದ ಸೃಷ್ಟಿಗೊಂಡ ಕಲಾಸಾಹಿತ್ಯವನ್ನು ಮತ್ತು ಅವರ ಕುರಿತಾಗಿ ಇದುವರೆಗೆ ಬಂದ ಕಲಾ ಸಾಹಿತ್ಯವನ್ನು ಈ ~~ಅಧ್ಯಾಯದಲ್ಲಿ~~ ಚರ್ಚಿಸಲಾಗುವುದು.

**ಏಳನೆಯ ಅಧ್ಯಾಯ**ವು ಸಮಾರೋಪವಾಗಿದ್ದು ಅಧ್ಯಯನದಿಂದ ಹೊರಬಂದ ಫಲಿತಗಳ ಕುರಿತಾದ ಸಮೀಕ್ಷೆಯ ವಿವರಗಳನ್ನು ಈ ಅಧ್ಯಾಯ ಹೊಂದಿದೆ.

## ಅಧ್ಯಯನದ ವಿಧಾನ

ಈ ಅಧ್ಯಯನಕ್ಕೆ ಎರಡು ರೀತಿಯ ಆಕರಗಳನ್ನು ಬಳಸಿಕೊಳ್ಳಲಾಗಿದೆ.

**೧. ಮೂಲ ಆಕರ ಸಾಮಗ್ರಿ**

**೨. ಆನುಷಂಗಿಕ ಆಕರ ಸಾಮಗ್ರಿ**

ಈ ಎರಡು ಮೂಲಗಳಿಂದ ವಿಷಯ ಸಂಗ್ರಹ ಮಾಡುವುದು.

**ಮೂಲ ಆಕರ ಸಾಮಗ್ರಿ**

ಮೂಲ ಆಕರ ಸಾಮಗ್ರಿಗಳಲ್ಲಿ ಮುಖ್ಯವಾದ್ದು ಕ್ಷೇತ್ರಕಾರ್ಯ ಇದರಲ್ಲಿ ಸಂದರ್ಶನ, ಧ್ವನಿಗ್ರಹಣ, ಛಾಯಾಚಿತ್ರಣ, ಅವರ ಸಮಕಾಲೀನ ಸಂದರ್ಶನಗಳು ಹಾಗೂ ಸಂಗ್ರಹಿತ ವಿಷಯಗಳ ಪಟ್ಟಿ ಸಿದ್ಧಪಡಿಸಿ ವಿವಿಧ ರೂಪದಲ್ಲಿ ಅಧ್ಯಯನ ಮಾಡಲಾಗಿದೆ.

**ಅ. ಸಂದರ್ಶನ**

ಧಾರವಾಡದಲ್ಲಿ ಜನಿಸಿದ ಡಿ.ವಿ.ಹಾಲಭಾವಿಯವರ ಕುಟುಂಬ ವರ್ಗದವರನ್ನು ಸಂದರ್ಶಿಸಿ ಅವರ ಬಾಲ್ಯ, ಪ್ರಾಥಮಿಕ ಶಿಕ್ಷಣ, ಅಂದಿನ ಸನ್ನಿವೇಶದಲ್ಲಿ ಚಿತ್ರಕಲೆಯ ಕಡೆಗೆ ಅವರ ಮನಸ್ಸು ಆಕರ್ಷಿತವಾದ ಬಗ್ಗೆ, ಪ್ರೇರಣೆ ನೀಡಿದ ಗುರುಗಳು ಹಾಗೂ ಸ್ನೇಹಿತರು, ಊರಿನ ಪರಿಸರ, ಶಾಲಾಪರಿಸರ ಮತ್ತು ಅಲ್ಲಿನ ಆಚರಣೆಗಳು ಅವರ ಮೇಲೆ ಹೇಗೆ ಪ್ರಭಾವ ಬೀರಿದವು ಮತ್ತು ಅವರ ಕೌಟುಂಬಿಕ ಹಿನ್ನೆಲೆಯನ್ನು ಸಂಗ್ರಹಿಸಲಾಗಿದೆ. ನಂತರ ಕಲಾ ಶಿಕ್ಷಣ ಮತ್ತು ಆ ಸಂದರ್ಭದಲ್ಲಿ ರಚನೆಯಾದ ಕಲಾಕೃತಿಗಳ ಹಿನ್ನೆಲೆಗಳ ಅನುಭವಗಳನ್ನು ದಾಖಲಿಸಲಾಗಿದೆ. ಧಾರವಾಡದಲ್ಲಿ ಅವರೇ ಸ್ಥಾಪಿಸಿದ ಕಲಾಶಾಲೆಯ ವೃತ್ತಿ ಜೀವನ ಮತ್ತು ಅವರ ಕಲಾಪ್ರದರ್ಶನಗಳ ಕುರಿತು ಬಂದ ವರದಿಗಳು ಹಾಗೂ ಸಾರ್ವಜನಿಕ ಪ್ರತಿಕ್ರಿಯೆಗಳನ್ನು ವಿವಿಧ ಮೂಲಗಳಿಂದ ಅಧ್ಯಯನ ಮಾಡಲಾಗಿದೆ.

ಹಾಲಭಾವಿಯವರ ಶಿಷ್ಯಬಳಗ, ಆಪ್ತವಲಯದ ಒಡನಾಡಿಗಳಿಂದ ಪ್ರಶ್ನಾವಳಿಗಳ ಮೂಲಕ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ. ಮುಖ್ಯವಾಗಿ ಹಾಲಭಾವಿಯವರ ಕಲಾಕೃತಿಗಳ ರಚನೆಯ ಹಿನ್ನೆಲೆ, ಪ್ರೇರಣೆ, ಪ್ರಭಾವಗಳನ್ನು ಅವರ ಶಿಷ್ಯಬಳಗದ ಸಂದರ್ಶನಗಳ ಮೂಲಕ ಸಂಗ್ರಹಿಸಿ ಇಲ್ಲಿ ಬಳಸಿಕೊಳ್ಳಲಾಗಿದೆ.

**ಬ. ಛಾಯಾಗ್ರಹಣ**

ಹಾಲಭಾವಿಯವರು ತಮ್ಮ ಬದುಕಿನುದ್ದಕ್ಕೂ ಸಾವಿರಾರು ಕಲಾಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಕೆಲವು ಕಲಾಪ್ರೇಮಿಗಳ ಸಂಗ್ರಹದಲ್ಲಿದ್ದರೆ, ಇನ್ನೂ ಕೆಲವು ಹಾಲಭಾವಿಯವರ ಕುಟುಂಬ ವರ್ಗದವರ ಸಂಗ್ರಹದಲ್ಲಿವೆ.

ವಿದ್ಯಾರ್ಜನೆಯ ಸಂದರ್ಭದಲ್ಲಿ ರಚಿಸಿದ ಕಲಾಕೃತಿಗಳು, ಅಧ್ಯಾಪನದಲ್ಲಿ ರಚಿಸಿದ ಕಲಾಕೃತಿಗಳನ್ನು ಇಲ್ಲಿ ಮುಖ್ಯವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅವುಗಳಲ್ಲಿ ರೇಖಾಚಿತ್ರಗಳು ಮತ್ತು ವರ್ಣಚಿತ್ರಗಳು, ವಿವಿಧ ಮಾಧ್ಯಮದ ಕಲಾಕೃತಿಗಳನ್ನು ಛಾಯಾಚಿತ್ರಣ ಮಾಡಿಕೊಂಡು ಗಣಕಯಂತ್ರದ ಮೂಲಕ ಅವುಗಳನ್ನು ಪುನರ್ ಮುದ್ರಿಸಿ ಮಾಧ್ಯಮವಾರು, ವಿಷಯವಾರು ವಿಂಗಡಿಸಿಕೊಂಡು ಇಲ್ಲಿನ ಅಧ್ಯಾಯುಗಳಿಗೆ ಬಳಸಿಕೊಳ್ಳಲಾಗಿದೆ.

**ಆನುಷಂಗಿಕ ಆಕರ ಸಾಮಗ್ರಿ**

ಸಂಶೋಧನಾ ಮಹಾಪ್ರಬಂಧಗಳು, ಪ್ರಕಟಿತ ಅಪ್ರಕಟಿತ ಕೃತಿಗಳು, ನಿಘಂಟುಗಳು, ಗೆಝೆಟೀರಿಯನ್‌ಗಳು, ಪತ್ರಿಕೆಗಳು, ಕಲಾವಿದರ ಕಲಾಕೃತಿಗಳನ್ನುದ್ದೇಶಿಸಿ ಪ್ರಕಟವಾದ ಕಲಾಲೇಖನಗಳು ಮತ್ತು ಅಭಿಪ್ರಾಯಗಳು, ಸಂಶೋಧನಾ ಲೇಖನಗಳು, ಬೇರೆ ಬೇರೆ ಕಲಾಶಾಲೆಗಳು ಮತ್ತು ವಿಶ್ವವಿದ್ಯಾಲಯಗಳ ಗ್ರಂಥಾಲಯಗಳಿಗೆ ಹೋಗಿ ಅಲ್ಲಿನ ವಿಷಯಗಳನ್ನು ಸಂಗ್ರಹಿಸಿಕೊಂಡುಬಂದು ಈ ಕಿರು ಸಂಶೋಧನಾ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

**ಅಧ್ಯಾಯ ಎರಡು**

**ಡಿ.ವಿ.ಹಾಲಭಾವಿಯವರ ಬದುಕು ಮತ್ತು ಕಲಾಜೀವನ**

ಈ ಅಧ್ಯಾಯದಲ್ಲಿ ಹಾಲಭಾವಿಯವರ ಬಾಲ್ಯಜೀವನ, ಅವರ ಜನ್ಮಸ್ಥಳದ ಸಾಂಸ್ಕೃತಿಕ ಪರಿಸರ ತಂದೆ ತಾಯಿಯ ಕೌಟುಂಬಿಕ ಹಿನ್ನೆಲೆ,ಪ್ರಾಥಮಿಕ ಮತ್ತು ಪ್ರೌಢಶಿಕ್ಷಣದ ಹಂತಗಳ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ. ೧೯೧೦ರಲ್ಲಿ ಬೆಳಗಾಂವ್ ಜಿಲ್ಲೆಯ ಜಲಗಾಂವ್‌ದಿಂದ ಎಲಿಮೆಂಟರಿ ಡ್ರಾಯಿಂಗ್ ಗ್ರೇಡ್ ಪರೀಕ್ಷೆಯನ್ನು ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದರು. ನಂತರ ಉನ್ನತ ವ್ಯಾಸಂಗಕ್ಕಾಗಿ ಮುಂಬೈನ ಸರ್.ಜೆ.ಜೆ.ಸ್ಕೂಲ್ ಆಫ್ ಆರ್ಟ್ ಕಲಾಶಾಲೆಯನ್ನು ಸೇರಿ ಡ್ರಾಯಿಂಗ್ ಮತ್ತು ಪೇಂಟಿಂಗ್ ವಿಷಯ ಆರಿಸಿಕೊಂಡು ಅಧ್ಯಯನ ಮಾಡಿದರು. ಅಲ್ಲಿ ಖ್ಯಾತ ಚಿತ್ರ ಕಲಾವಿದರಾದ ಶ್ರೀಕೆ.ಬಿ.ತಾತುಸ್ಕರ್, ಶ್ರೀಎಮ್.ವಿ.ಧುರಂಧರ್ ಇವರು ಹಾಲಭಾವಿಯವರ ಕಲಾಗುರುಗಳಾಗಿದ್ದರು. ಯುರೋಪಿಯನ್ ಡೈರೆಕ್ಟರ್‌ರಾದ ಕ್ಯಾಪ್ಟನ್ ಗ್ಲ್ಯಾಡಸನ್ ಸಾಲೋಮನ್‌ರವರು ಪ್ರಾಚಾರ್ಯರಾಗಿದ್ದು ಅವರ ಮಾರ್ಗದರ್ಶನದಲ್ಲಿ ಯಾವ ರೀತಿ ಚಿತ್ರಕಲಾ ಅಭ್ಯಾಸವನ್ನು ಕಟ್ಟುನಿಟ್ಟಾಗಿ ಮಾಡಿದರು ಎಂಬುದರ ಬಗ್ಗೆ ಹೇಳುವುದರ ಜೊತೆಗೆ ಆಗಿನ ಕಾಲದ ಪಠ್ಯಕ್ರಮ, ಅಧ್ಯಾಪಕ ವರ್ಗ ಅವರು ಚಿತ್ರಗಳನ್ನು ರಚಿಸುವ ಶೈಲಿ ಅಲ್ಲಿಯ ಕಲಾವಾತಾವರಣ, ಚಿತ್ರಪ್ರದರ್ಶನದ ರೀತಿ, ಮುಂತಾದ ವಿವರಣೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹಾಲಭಾವಿಯವರ ಅಧ್ಯಯನ ಕಾಲದಲ್ಲಿ ಅನೇಕ ಮಹತ್ವದ ಘಟನೆಗಳು ನಡೆದುದರ ಬಗ್ಗೆ ವಿವರಣೆ ನೀಡಲಾಗಿದೆ. ಅಲ್ಲದೆ ಆಗ ಅಲ್ಲಿ ಕರ್ನಾಟಕದ ಏಳು ಜನ ಕಲಾವಿದರು ಶ್ರೇಷ್ಠ ದರ್ಜೆಯ ಕಲಾವಿದರೆಂದು ಹೆಸರುವಾಸಿಯಾಗಿದ್ದರು. ಅವರಲ್ಲಿ ಹಾಲಭಾವಿಯವರು ಒಬ್ಬರು. ಇಲ್ಲಿಸಪ್ತವರ್ಣ ಕಲಾವಿದರ ಬಗ್ಗೆ ಪರಿಚಯಿಸಲಾಗಿದೆ.

**ಅಧ್ಯಾಯ ಮೂರು**

**ಹಾಲಭಾವಿಯವರು ಮತ್ತು ಕಲಾಶಾಲೆ (ಸ್ಕೂಲ್ ಆಫ್ ಆರ್ಟ್)**

ಹಾಲಭಾವಿಯವರು ಮುಂಬೈನ ಸರ್.ಜೆ.ಜೆ.ಸ್ಕೂಲ್ ಆಫ್ ಆರ್ಟ್‌ನಲ್ಲಿ ಡಿಪ್ಲೋಮಾ ಮುಗಿಸಿಕೊಂಡು ಧಾರವಾಡಕ್ಕೆ ಬಂದು ಮೊಟ್ಟ ಮೊದಲು ಕರ್ನಾಟಕದಲ್ಲಿ ಚಿತ್ರಕಲಾಶಾಲೆಯನ್ನು ಪ್ರಾರಂಭಿಸಿದ ವಿವರಣೆಯನ್ನು ನೀಡಲಾಗಿದೆ. ಕಲಾಶಾಲೆಯನ್ನು ಸ್ಥಾಪಿಸುವುದರ ಜೊತೆಗೆ ಕಲೆಯ ಬೆಳವಣಿಗೆಗೆ ಶ್ರಮಿಸಿದ್ದಾರೆ. ಇಲ್ಲಿ ಹಾಲಭಾವಿಯವರ ವೃತ್ತಿ ಹಾಗೂ ಕಲಾ ಬದುಕಿನ ಮಹತ್ವದ ವಿವರಗಳನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ನಾಲ್ಕು**

**ಡಿ.ವಿ. ಹಾಲಭಾವಿಯವರ ಕಲಾಕೃತಿಗಳ ಹರವು**

ಪ್ರಸ್ತುತ ಅಧ್ಯಾಯದಲ್ಲಿ ಹಾಲಭಾವಿಯವರು ತಮ್ಮ ಶೈಕ್ಷಣಿಕ ಬದುಕಿನ ಮಧ್ಯದಲ್ಲಿ ರಚಿಸಿದ ರೇಖಾಚಿತ್ರಗಳ ಮತ್ತು ವರ್ಣಚಿತ್ರಗಳ ಕುರಿತಾದ ವಿಶ್ಲೇಷಣೆ ಇರುವುದು. ಇದರಲ್ಲಿ ಅವರ ಕಲಾಕೃತಿಗಳನ್ನು ಈ ಕೆಳಗಿನಂತೆ ವರ್ಗೀಕರಿಸಿಕೊಂಡು ಇಲ್ಲಿ ಚರ್ಚಿಸಲಾಗಿದೆ.

**ಕಲಾಕೃತಿಗಳ ವರ್ಗೀಕರಣ**

**ಭಾಗ I: ರೇಖಾಚಿತ್ರಗಳು**

೧. ಶಿರಭಾವ ರೇಖಾಚಿತ್ರಗಳು

೨. ಪೂರ್ಣ ಶಿರಭಾವ ರೇಖಾಚಿತ್ರಗಳು

೩. ಸಂಯೋಜನೆ ರೇಖಾಚಿತ್ರಗಳು

**ಭಾಗ II: ವರ್ಣಚಿತ್ರಗಳು**

೧. ಜಲವರ್ಣಚಿತ್ರಗಳು

೨. ತೈಲವರ್ಣಚಿತ್ರಗಳು

೩. ಮಿಶ್ರ ಮಾಧ್ಯಮ

**ಭಾಗ III : ಛಾಯಾಚಿತ್ರಗಳು**

೧. ಶಿರಭಾವ ಛಾಯಾಚಿತ್ರಗಳು

೨. ಪೂರ್ಣ ಶಿರಭಾವ ಛಾಯಾಚಿತ್ರಗಳು

೩. ಪ್ರಕೃತಿ ಛಾಯಾಚಿತ್ರಗಳು

ಹೀಗೆ ಈ ಮೇಲಿನ ವರ್ಗೀಕರಣದಂತೆ ಚಿತ್ರಗಳನ್ನು ವರ್ಗೀಕರಿಸಿಕೊಂಡು ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ಐದು**

**ಡಿ.ವಿ ಹಾಲಭಾವಿಯವರ ಕಲಾಕೃತಿಗಳ ಶೈಲಿ, ಪ್ರಭಾವ, ಪ್ರೇರಣೆ ಹಾಗೂ ತಂತ್ರಗಾರಿಕೆ**

ಈ ಅಧ್ಯಾಯದಲ್ಲಿ ಹಾಲಭಾವಿಯವರು ತಮ್ಮ ಬದುಕಿನುದ್ದಕ್ಕೂ ರಚಿಸಿದ ಸಾವಿರಾರು ಕಲಾಕೃತಿಗಳಲ್ಲಿ ತಮ್ಮ ಸುತ್ತಲಿನ ಪರಿಸರದ ಪ್ರಭಾವ ಪಡೆಯುವುದರ ಮೂಲಕ ತಮ್ಮ ಅಭಿವ್ಯಕ್ತಿಗೆ ಒಂದು ನಿರ್ದಿಷ್ಟ ರೂಪವನ್ನು ನೀಡಿದ್ದಾರೆ. ಅಂತಹ ಪ್ರಭಾವ, ಪ್ರೇರಣೆ, ತಂತ್ರಗಾರಿಕೆಗಳ ಕುರಿತಾದ ಚರ್ಚೆಯನ್ನು ಪ್ರಸ್ತುತ ಅಧ್ಯಾಯದಲ್ಲಿ ಕೈಗೊಳ್ಳಲಾಗಿದೆ. ಕಲಾಕೃತಿ ನಿರ್ಮಾಣದ ಹಿಂದೆ ಕಲಾವಿದನ ಅನುಭವ, ಪ್ರಭಾವ–ಪ್ರೇರಣೆಗಳು ಇದ್ದೇ ಇರುತ್ತವೆ. ಹಾಲಭಾವಿಯವರ ಬಹುತೇಕ ಕಲಾಕೃತಿಗಳಲ್ಲಿ ಪ್ರಭಾವಗಳು ಮೂಡಿವೆ. ಹಾಲಭಾವಿಯವರು ಹಲವಾರು ಶೈಲಿಯಲ್ಲಿ ಕೃತಿ ರಚಿಸಿದವರು.ಕಾಲ ಕಾಲಕ್ಕೆ ಅವರ ಕಲಾಕೃತಿಗಳ ಶೈಲಿ ಬದಲಾಗುತ್ತಾ ಹೋಗಿದೆಯಾದರೂ ಇವರದೇ ಕೃತಿ ಎಂದು ಗುರುತಿಸುವ ಅಂಶ ಎಲ್ಲಾ ಕಲಾಕೃತಿಗಳಲ್ಲಿ ಎದ್ದು ಕಾಣುತ್ತದೆ ಎಂಬುದನ್ನು ಕುರಿತು ಈ ಅಧ್ಯಾಯದಲ್ಲಿ ಮಾಡಲಾಗಿದೆ.

**ಅಧ್ಯಾಯ ಆರು**

**ಡಿ.ವಿ ಹಾಲಭಾವಿಯವರ ಕಲಾಸಾಹಿತ್ಯ**

ಡಿ.ವಿ ಹಾಲಭಾವಿಯವರ ಕಲಾಸಾಹಿತ್ಯವನ್ನು ಎರಡು ರೀತಿಯಲ್ಲಿ ಇಲ್ಲಿ ಚರ್ಚಿಸಲಾಗಿದೆ.

೧. ಹಾಲಭಾವಿಯವರು ರಚಿಸಿದ ಕಲಾಸಾಹಿತ್ಯ

೨. ಹಾಲಭಾವಿಯವರ ಕುರಿತು ಬಂದ ಕಲಾ ಸಾಹಿತ್ಯ

ಈ ಎರಡು ರೀತಿಯ ಕಲಾಸಾಹಿತ್ಯವನ್ನು ಇಲ್ಲಿ ಮುಖ್ಯವಾಗಿ ಅತ್ಯಂತ ಸ್ಥೂಲವಾಗಿ ಸಮೀಕ್ಷಿಸಲಾಗಿದೆ.

೧. ಹಾಲಭಾವಿಯವರು ಸ್ವತಃ ಬರಹಗಾರರಾಗಿದ್ದು, "ಮೈ ಕಂಟೆಂಪರರಿ ಆರ್ಟಿಸ್ಟ" ಎಂಬ ಆಂಗ್ಲ ಭಾಷೆಯಲ್ಲಿ ಬರೆದ ಗ್ರಂಥ ಇಂದಿಗೂ ಪ್ರಸ್ತುತವಾಗಿದೆ. "ನನ್ನ ಸಿಲೋನ್ ಪ್ರವಾಸ", ಮತ್ತು ಆರ್ಟ್ ಗಿಲ್ಡ್" ಎಂಬ ಕಲಾಪತ್ರಿಕೆಯನ್ನು ಕನ್ನಡ, ಇಂಗ್ಲೀಷ ಭಾಷೆಯಲ್ಲಿ ಪ್ರಕಟಿಸಿದ ಸಾಧನೆ ಇವರದು. ಹಾಗೆಯೇ ಹಲವಾರು ಬಿಡಿ ಲೇಖನಗಳನ್ನು ಬರೆದು ಪ್ರಕಟಿಸಿದ್ದಾರೆ.

೨. ಹಾಲಭಾವಿಯವರ ಕುರಿತು ಬಂದ ಅನೇಕ ಗ್ರಂಥ, ಲೇಖನಗಳನ್ನು ಇಲ್ಲಿ ಗಮನಿಸಿ ಅವುಗಳ ಕುರಿತಾದ ಸಮೀಕ್ಷೆಯನ್ನು ಸಹ ಮಾಡುವ ಪ್ರಯತ್ನ ಮಾಡಲಾಗಿದೆ.

**ಅಧ್ಯಾಯ ಏಳು**

**ಸಮಾರೋಪ**

ಈ ಅಧ್ಯಾಯನದ ಪ್ರಸ್ತುತ ಸಂಶೋಧನಾ ಲಘುಪ್ರಬಂಧದ ಆರೂ ಅಧ್ಯಾಯಗಳಲ್ಲಿ ಚರ್ಚಿತವಾದ ಫಲಿತಗಳ ವಿಶ್ಲೇಷಣೆಯ ಸಮೀಕ್ಷೆಯನ್ನು ಮಾಡಲಾಗಿದೆ.

......................



ಹಾಲಭಾವಿಯವರಿಗೆ ವಿದ್ಯೆ ನೀಡಿದ ಜೆ.ಜೆ.ಸ್ಕೂಲ ಆಫ್ ಆರ್ಟ್



ಡ್ರಾಯಿಂಗ್ ಮತ್ತು ಪೇಂಟಿಂಗ್ ವಿಭಾಗ, ಜೆ. ಜೆ.ಸ್ಕೂಲ್ ಆಫ್ ಆರ್ಟ್

ಕೃಪೆ : ವಿ. ಲಕ್ಷ್ಮೀ ಗಣಾಲು



ಶ್ರೀ ಎಂ.ವಿ.ಧುರಂದರ ಶ್ರೀ ಎ.ಎಸ್.ತ್ರಿಂದಾಯ
ಶ್ರೀ ಈ.ಆರ್.ಫರ್ನಾಂಡಿಸ್ ಶ್ರೀ ಎಲ್.ಎನ್. ತಾಸ್ಕರ್



ಈ. ಗ್ಲ್ಯಾಡ್ಸನ್ ಸೋಲೋಮನ್



ಶ್ರೀ ಎಂ.ವಿ.ದುರಂಧರ



ಶ್ರೀ ಕೆ.ಹ.ಚುಡೇಕರ್



ಧಾರವಾಡ ಜಿಲ್ಲೆಯನ್ನು ಸಾಂಸ್ಕೃತಿಕ ರಾಜಧಾನಿಯೆಂದೂ, ವಿದ್ಯೆಯ ತವರೂರೆಂದೂ ಕರೆಯುವದರಲ್ಲಿ ಔಚಿತ್ಯವಿದೆಯೆನಿಸುತ್ತದೆ. ಈ ಜಿಲ್ಲೆಯಲ್ಲಿ ಸಂಗೀತ ದಿಗ್ಗಜರಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲಿ ರಾಷ್ಟ್ರೀಯ-ಅಂತರಾಷ್ಟ್ರೀಯ ಮಟ್ಟದ ಖ್ಯಾತಿ ಪಡೆದವರಿದ್ದಾರೆ. ಸಂಶೋಧಕರು, ಇತಿಹಾಸಕಾರರು, ಶಿಕ್ಷಣ ತಜ್ಞರು, ಶಿಲ್ಪ, ಚಿತ್ರಕಲೆ, ನಾಟ್ಯ ಮುಂತಾದ ಲಲಿತಕಲಾ ಕ್ಷೇತ್ರದಲ್ಲಿ ಪ್ರಖ್ಯಾತಿಗಳಿಸಿದ ಕಲಾವಿದರಿದ್ದಾರೆ. ಅಲ್ಲದೆ ತನ್ನದೇ ಆದ ಸಾಂಸ್ಕೃತಿಕ ಹಿರಿಮೆಯನ್ನು ಹೊಂದಿದ ಕೀರ್ತಿ ಈ ಜಿಲ್ಲೆಗಿದೆ.

ಧಾರವಾಡ ಜಿಲ್ಲೆಯು ಸಮುದ್ರ ಮಟ್ಟಕ್ಕಿಂತ ೨,೫೦೦ ಅಡಿಗಳಿಗೂ ಮೀರಿ ಎತ್ತರವಾದ ಮತ್ತು ಫಲವತ್ತಾದ ಭೂಮಿಯನ್ನು ಹೊಂದಿದೆ. ಪಶ್ಚಿಮ ಘಟ್ಟಗಳು, ಅವುಗಳ ಅಂಕುಡೊಂಕಾದ ಪ್ರಕೃತಿ ನಿರ್ಮಿತ ಸುಂದರ ನೈಸರ್ಗಿಕ ಪರ್ವತ ಶ್ರೇಣಿಗಳನ್ನು, ನದಿಗಳನ್ನು, ದೈತ್ಯಾಕಾರದ ಕಣವೆಗಳನ್ನು ಹಾಗೂ ವಿಶಾಲವಾದ ಸಮೃದ್ಧವಾದ ಬಯಲು ಪ್ರದೇಶವನ್ನು ಹೊಂದಿದೆ. ಅಲ್ಲದೇ ಕೃಷಿಗೆ ಪ್ರಧಾನವಾದ ಜಿಲ್ಲೆ ಧಾರವಾಡ.

ಅನೇಕ ಕ್ಷೇತ್ರಗಳಲ್ಲಿ ವೈವಿಧ್ಯತೆ ಮತ್ತು ವೈಶಿಷ್ಟ್ಯತೆಗಳಿಂದ ನಾಡಿನ ಜನರ ಗಮನಸೆಳೆದ ಧಾರವಾಡ ಜಿಲ್ಲೆ ಲಲಿತಕಲಾ ಕ್ಷೇತ್ರಕ್ಕೆ ಅದರಲ್ಲೂ ಚಿತ್ರಕಲೆಗೆ ಈ ಜಿಲ್ಲೆಯ ಕೊಡುಗೆ ಅತ್ಯಂತ ಮೌಲಿಕವಾದುದಾಗಿದೆ. ಉತ್ತರ ಕರ್ನಾಟಕದಲ್ಲಿ ಪ್ರಥಮ ಚಿತ್ರಕಲಾ ಶಾಲೆ ಪ್ರಾರಂಭಿಸಿದ ಕೀರ್ತಿ ಧಾರವಾಡದ್ದು. ಇದಕ್ಕೆ ಕಾರಣೀಭೂತರಾದವರು ಕಲಾವಿದ ಡಿ.ವಿ.ಹಾಲಭಾವಿಯವರು.

ಮನುಷ್ಯ ಸಹಜವಾಗಿಯೇ ಕಲಾಪ್ರೇಮಿ. ಅಂತೆಯೇ ಇದು ಅವನಲ್ಲಿ ಸದಾ ಮಾನವೀಯತೆಯನ್ನು ಉದ್ದೀಪನಗೊಳಿಸುತ್ತಿರುವುದು. ಈ ಗುಣ ಇರುವವನೇ ಕಲಾವಂತ, ಸುಸಂಸ್ಕೃತ. ಆದರೆ ಮಾನವನ ಹೃದಯ ಶ್ರೀಮಂತಿಕೆ ಹೆಚ್ಚಲು ಕಲಾವಂತಿಕೆ ಬೇಕೆ ಬೇಕು. ಚಿತ್‌ಶಕ್ತಿಯನ್ನು ಇದು ಉತ್ತೇಜಿಸಿ, ನಮ್ಮಲ್ಲಿ ಚಿದಾನಂದವನ್ನುಂಟು ಮಾಡುತ್ತಿದೆ. ಚಿತ್ರಕಲೆಗೂ ಜೀವನ ಕಲೆಗೂ ಹತ್ತಿರದ ಸಂಬಂಧವಿದೆ.

ಚಿತ್ರಕಲೆಯಲ್ಲಿ ಕುಂಚದಿಂದ ಎಳೆಯುವಂಥ ಒಂದೊಂದು ರೇಖೆಗೂ ಅತ್ಯಮೋಘವಾದ ಅರ್ಥವಿದೆ. ವಿಶೇಷ ಅರ್ಥ ಘನೀಕರಿಸುತ್ತದೆ. ಕಲಾವಿದನಾದವ ತನ್ನ ಕಲ್ಪನಾ ವಿಲಾಸದಿಂದ, ಚಿಂತನೆಯ ಮೂಸೆಗೆ ಇಳಿದು ಪ್ರತಿಭೆಯ ಪ್ರಕ್ರಿಯೆಗೆ ಒಳಗಾಗಿ ಒಂದು ಆಕಾರವನ್ನು ಪಡೆಯಬೇಕಾಗುತ್ತದೆ. ಇದಕ್ಕಾಗಿ ಹಲವು ದಿನ, ತಿಂಗಳು, ಅಷ್ಟೇ ಏಕೆ? ವರ್ಷಗಳ ಸಾಧನೆ ಬೇಕು. ಜ್ಞಾನಸಿದ್ಧಿಯ ಜೊತೆಗೆ ಸಮಾಧಿಸಿದ್ಧಿ ಸಾಧಿಸಬೇಕು.

ಗೌರವ ತಪಸ್ವಿಯಾಗಬೇಕು. ಧ್ಯಾನ, ಮಂತ್ರಗಳ ಮೂಲಕ ಈ ಬಗೆಯ ಸಮಾಧಿಸ್ಥಿತಿಯಲ್ಲಿ ಸಂಪೂರ್ಣವಾಗಿ ತನ್ನನ್ನು ತಾನು ಸಮರ್ಪಿಸಿಕೊಂಡು ಕಲಾಕಾರ್ಯ ಮಾಡಬೇಕು. ಈ ರೀತಿ ಕಲಾಕಾರ್ಯದಲ್ಲಿ ತೊಡಗಿಸಿಕೊಂಡಿದ್ದ ಮಹನೀಯರಲ್ಲಿ ನಮ್ಮ ನಡುವೆ ಇದ್ದ ಡಿ.ವಿ.ಹಾಲಭಾವಿಯವರು ಒಬ್ಬರಾಗಿದ್ದಾರೆ. ಅವರ ಜೀವನದ್ದುದ್ದಕ್ಕೂ ಸಹನೆಯಿಂದ ಲವಲವಿಕೆಯಿಂದ ಚಿತ್ರ ಕಲಾಕಾರ್ಯಗಳಲ್ಲಿ ಮಗ್ನರಾಗಿದ್ದುದನ್ನು ಗಮನಿಸಿದರೆ, ಅವರ ಬಗೆಗೆ ಹೆಚ್ಚಿನ ಗೌರವ ಭಕ್ತಿಭಾವ ಮೂಡುತ್ತದೆ. ಅವರನ್ನು ನೋಡಿದಾಗ ನೆನಪಿಗೆ ಬರುವ ಮಾತೆಂದರೆ ಕಲೆ ಒಂದು ಮಹಾತಪಸ್ಸು, ಚೇತನ ಸ್ವರೂಪವುಳ್ಳದ್ದು, ನಾವು ಅದರಲ್ಲಿ ತಲ್ಲೀನರಾಗಬೇಕು. ಅದನ್ನು ಸಾಧಿಸಲು ಶ್ರದ್ಧಾಪೂರ್ಣರಾಗಬೇಕು. ಅದಕ್ಕಾಗಿ ಏಕಾಗ್ರತೆಯನ್ನು ಸಾಧಿಸಿಕೊಳ್ಳಬೇಕು. ಎಲ್ಲಕ್ಕಿಂತ ಮುಖ್ಯವಾಗಿ ಕಲಿಯುವ ಆ ಶಕ್ತಿ ನಮ್ಮಲ್ಲಿ ತುಂಬಿರಬೇಕು. ಆ ಆಸೆಯ ಜೊತೆಗೆ ಅದನ್ನು ಕತೃತ್ವಶಕ್ತಿಯ ಮುಖಾಂತರ ಕೃತಿಗಿಳಿಸುವ ಛಲಬೇಕು.[೧] ಈ ಎಲ್ಲ ಗುಣಗಳನ್ನು ಹಾಲಭಾವಿಯರಲ್ಲಿ ಗುರುತಿಸಬಹುದಾಗಿದೆ.

**ಹಾಲಭಾವಿ ಮನೆತನ**

ಚಿತ್ರಕಲಾ ಕ್ಷೇತ್ರಕ್ಕೆ ಅನುಪಮ ಸೇವೆ ಸಲ್ಲಿಸಿದ ಶ್ರೀ ಡಿ.ವಿ.ಹಾಲಭಾವಿಯವರ ಪೂರ್ವಜರು ವಿಜಾಪೂರ ಜಿಲ್ಲೆಯ ಗೋಟೆ ಗ್ರಾಮದಲ್ಲಿ ಹೇರಲಗಿ ಮನೆತನದವರಾಗಿದ್ದು, ಅವರು ಶ್ರೇಷ್ಠ ಬಣ್ಣಗಾರರೂ, ಕಲಾವಿದರೂ, ಸಾಹಿತ್ಯ, ಧರ್ಮಸಂಸ್ಕೃತಿಗಳಲ್ಲಿಯ ಅಪಾರವಾದ ಭಕ್ತಿ ನಿಷ್ಠೆಯನ್ನು ಹೊಂದಿದವರಾಗಿದ್ದರು. ವಿಜಾಪೂರ, ಕಮತಗಿ, ನಿಪ್ಪಾಣಿ, ತಿಕೋಟಾ ಮೊದಲಾದ ಸ್ಥಳಗಳಲ್ಲಿಯ ಚಿತ್ರಗಳನ್ನು ಚಿತ್ರಿಸುವ ಕಾರ್ಯದಲ್ಲಿ ನೆರವಾಗಿದ್ದರೆಂದು ಅವರ ಪೂರ್ವಜರಿಂದ ತಿಳಿದುಬರುತ್ತದೆ.

ಹಾಲಭಾವಿಯವರ ಪೂರ್ವಜರ ಚರಿತ್ರೆ ತುಂಬಾ ಕುತೂಹಲಕಾರಿಯಾಗಿದೆ. ಅವರ ತಂದೆಯವರಿಂದ ಇವರ ಮನೆತನದ ಚರಿತ್ರೆಯನ್ನು ಇಲ್ಲಿ ಗುರುತಿಸಬಹುದಾಗಿದೆ. ವೀರಭದ್ರಪ್ಪ ಹಾಲಭಾವಿಯವರು ಪ್ರಸಿದ್ಧ ನ್ಯಾಯಾಧೀಶರು ಆಗಿದ್ದರು. ಚಿಕ್ಕ ವಯಸ್ಸಿನಲ್ಲಿಯೇ ತಂದೆಯನ್ನು ಕಳೆದುಕೊಂಡ ಹಾಲಭಾವಿ ವೀರಭದ್ರಪ್ಪನವರು ಗೋಟೆ ಗ್ರಾಮದಿಂದ ಬೆಳಗಾವಿ ಜಿಲ್ಲೆಯ ಗೋಕಾಕ ನಗರಕ್ಕೆ ತಾಯಿಯ ಜೊತೆಯಲ್ಲಿ ಬಂದು ಅಲ್ಲಿ ತಾಯಿಯ ಅಕ್ಕನ ಪತಿ ದಿ.ಬಸಪ್ಪ ಹಾಲಭಾವಿಯವರ ಮನೆಯಲ್ಲಿ ಬೆಳೆದರು. ಅಲ್ಲಿಂದ ಅವರ ಮನೆತನದ ಹೆಸರು **'ಹೇರಲಗಿ'** ಹೋಗಿ **'ಹಾಲಭಾವಿ'** ಎಂದು ಆಯಿತು.

ವೀರಭದ್ರಪ್ಪ ಹಾಲಭಾವಿ ತಾವು ವಕೀಲರೆಂಬುವುದನ್ನು ಮರೆತು ಕನ್ನಡ ಸಾಹಿತ್ಯದ ಅಧ್ಯಯನದಲ್ಲಿ ತೊಡಗಿಸಿಕೊಂಡ ವೀರಭದ್ರಪ್ಪನವರಿಗೆ ವಿದ್ಯೆಗೆ ತಕ್ಕ ಹುದ್ದೆ ತಾನಾಗಿಯೇ ಹುಡುಕಿಕೊಂಡು ಬಂದಿತು. ೧೯೦೭ರಲ್ಲಿ ಅವರು ಧಾರವಾಡದ ಜಡ್ಜ ಕೋರ್ಟಿನಲ್ಲಿ ಕೆಲಸಕ್ಕೆ ಸೇರಿದರು. ಅವರ ಕರ್ತವ್ಯ ನಿಷ್ಠೆಯನ್ನು ಗುರುತಿಸಿದ ಮೇಲಾಧಿಕಾರಿಗಳು ಅದೇ ವರ್ಷ ಡಿಸೆಂಬರ ತಿಂಗಳಲ್ಲಿ ಅವರನ್ನು ಸಬ್‌ಜಡ್ಜ್ ಕೆಲಸಕ್ಕೆ ನಿಯಮಿಸಿದರು.

ವೀರಭದ್ರಪ್ಪನವರ ಮೊದಲ ಹೆಂಡತಿ ಗಂಗಾ ಒಂದು ಹೆಣ್ಣು ಮಗುವನ್ನು ಹೆತ್ತು ೧೮೯೮ರಲ್ಲಿ ಪ್ಲೇಗ್‌ಗೆ ತುತ್ತಾದರು. ಮುಂದೆ ಕೆಲವೇ ದಿನಗಳಲ್ಲಿ ಮಗುವು ಮೃತ್ಯುವಿಗೀಡಾಯಿತು. ಆಗಿನ್ನು ೨೧ವರ್ಷದ ಯುವಕರಾಗಿದ್ದ ವೀರಭದ್ರಪ್ಪನವರು ೧೯೦೦ರಲ್ಲಿ ಚೆನ್ನಬಸವ್ವನನ್ನು ಎರಡನೆಯ ಮದುವೆ ಮಾಡಿಕೊಂಡರು.

ವೀರಭದ್ರಪ್ಪನವರಿಗೆ ಪುಣ್ಯಕ್ಷೇತ್ರ , ಐತಿಹಾಸಿಕ ಸ್ಥಳಗಳ ಹಾಗೂ ಕಲಾ ಸಂಘಗಳ ಸಂಸ್ಥೆಗಳ ಸಂದರ್ಶನವೆಂದರೆ ಬಲು ಪ್ರೀತಿ. ದೈವಭಕ್ತರೂ, ಭಾವುಕರೂ, ಇತಿಹಾಸ ಪ್ರೇಮಿಗಳೂ ಆದ ಅವರು ತಮ್ಮ ಜೀವನದಲ್ಲಿ ಕಂಡ ಪುಣ್ಯ ಕ್ಷೇತ್ರಗಳು ಅನೇಕ. ಅವರು ಸಂದರ್ಶಿಸಿದ ಪ್ರಮುಖ ಸ್ಥಳಗಳಲ್ಲಿ ಗುಡ್ಡಾಪೂರ ದಾನಮ್ಮ ಒಂದು. ದಾನಮ್ಮ ಅವರ ಮನೆಯ ದೇವರು.[೨]

---

೧. ಡಾ.ಎಸ್.ಸಿ.ಪಾಟೀಲ, ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು, ಪುಟ ೧೬

೨. ಡಾ. ವೀರಣ್ಣ ರಾಜೂರು, ಹಾಲಭಾವಿ ವೀರಭದ್ರಪ್ಪನವರು, ಪುಟ ೨೨

# ಹಾಲಭಾವಿ ಮನೆತನದ ವಂಶವೃಕ್ಷ



ವೀರಭದ್ರಪ್ಪ ಹಾಲಭಾವಿಯರು ಎರಡನೆಯ ಮದುವೆಯಾದ ನಂತರ ಮೊದಲ ಮಗು ಸಿದ್ದಪ್ಪ. ನಂತರದಲ್ಲಿ ಮೂರು ಗಂಡು ಮಕ್ಕಳಾಗಿ ಹುಟ್ಟಿದ ದಿನವೇ ತೀರಿಕೊಂಡವು. ಅದರಿಂದ ನೊಂದ ದಂಪತಿಗಳು ಅವರು ತಮ್ಮ ಮನೆ ದೇವತೆ ಗುಡ್ಡಾಪೂರದ ದಾನಮ್ಮನಲ್ಲಿಗೆ ಹೋಗಿ ಪೂಜೆ ಸಲ್ಲಿಸಿ ಬಂದರು. ಆ ವರ್ಷದಲ್ಲಿಯೇ ಅಂದರೆ ೧೯೦೭ರ ನವೆಂಬರ್ ೨೮ರಂದು ಧಾರವಾಡದಲ್ಲಿ ಜನಿಸಿದ ಗಂಡು ಮಗುವಿಗೆ ಆ ದೇವತೆಯ ಹೆಸರಿಟ್ಟರು. ಆಕೆಯ ಹೆಸರು ಧರಿಸಿದ ಮಗುವೇ ದಾನಪ್ಪ ವೀರಭದ್ರಪ್ಪ ಹಾಲಭಾವಿ.

ಧಾರವಾಡದಲ್ಲಿ ಯು.ಬಿ.ಹಿಲ್ಸ್ ಎಂದೇ ಹೆಸರಾದ ಉಳುವಿ ಬಸವಣ್ಣನ ಗುಡ್ಡದ ಆವರಣದಲ್ಲಿ ಪ್ರಕೃತಿ ತಾನೇ ತಾನಾಗಿ ಮೆರೆಯುವ ಸುಂದರವಾದ ಬಡಾವಣೆ. ವಿಶಾಲವಾದ ಬಂಗಲೆಗಳು, ತರಾವರಿ ಹಂಚಿನ ಮನೆಗಳು, ಹೀಗೆ ಪ್ರಕೃತಿಯ ಸೌಂದರ್ಯದೊಂದಿಗೆ ಬಣ್ಣದಾಟವಾಡುತ್ತ ಬೆಳದವರು ದಾನಪ್ಪ ಹಾಲಭಾವಿಯವರು.[೩]

### ಬಾಲ್ಯಜೀವನ

ಬಾಲ್ಯದಲ್ಲಿ ದಾನಪ್ಪ ಹಾಲಭಾವಿಯರಿಗೆ "ಮನೆಯೇ ಮೊದಲ ಶಾಲೆ" ಎಂಬಂತೆ ಅವರು ಮನೆಯಲ್ಲಿಯೇ ಮೂರನೆಯತ್ತೆವರೆಗೆ ಅವರ ತಂದೆ ವೀರಭದ್ರಪ್ಪನವರ ಹತ್ತಿರವೇ ಪಾಠ ಹೇಳಿಸಿಕೊಂಡರು. ದಾನಪ್ಪ ಬಾಲ್ಯದಲ್ಲಿ ರೋಗಗ್ರಸ್ತ ಕೂಸು. ತಾಯಿ ಚನ್ನಬಸವ್ವನವರ ಮನೆಯ ದೇವತೆ ಗುಡ್ಡಾಪುರದ ಶ್ರೀ ದಾನಮ್ಮ ದೇವಿಗೆ ಪ್ರಾರ್ಥನೆ, ಪೂಜೆ ಸಲ್ಲಿಸಿದ ಮೇಲೆ ಇವರ ಆರೋಗ್ಯದಲ್ಲಿ ಸುಧಾರಣೆಯಾಯಿತೆಂದು ಅವರ ನಂಬುಗೆಯಿದೆ.

ದಾನಪ್ಪನವರ ಬಾಲ್ಯವು ಒಳ್ಳೆಯ ಪರಿಸರದಲ್ಲಿ ಕಳೆಯಿತು. ದಿವಂಗತ ವೆಂಕಟರಂಗೋ ಕಟ್ಟಿಯವರ ಮನೆ, ದಿವಂಗತ ಶಾಂತವೀರ ರಾಜದೇವ ಕಿತ್ತೂರ ಇವರ ಚಿರಂಜೀವರ ವೈದ್ಯಶಾಲೆ, ಕನ್ನಡ ಕವಿಗಳಿಗೆ ಪ್ರಭಾತ, ಜಯಕರ್ನಾಟಕ, ಸ್ವಧರ್ಮ, ಒದಗಿಸಿದ ಯಶವಂತ ಉರ್ಫ್ ಬಳವಂತರಾವ್ ಜಡಾರ ಇವರ ನಿವಾಸ, ಮುದ್ರಣಾಲಯ, ಅದರ ನೆಲೆಯಲ್ಲಿ ದಿವಂಗತ ಮುದುವಿಡು ಕೃಷ್ಣರಾಯರ "ಕರ್ನಾಟಕ ಪತ್ರಿಕೆ" ಕಾರ್ಯಾಲಯ, ಮುಂದೆ ದಿವಂಗತ ಕವಿ ಶ್ರೀಧರ ಬನೋಳಕರ ಅವರ ಮೂಲೆಯ ಕೂಟದ ಮನೆ, ಈ ಗುಂಪಿನಲ್ಲಿ ಹಾಲಭಾವಿಯವರು ಹೊಸಮನೆ ಕಟ್ಟಿಸಿದ ಹಳೆವಾಸ್ತು, ಈ ಸಾಲಿನಲ್ಲಿಯೇ ದಾನವೀರ ದಿವಂಗತ ಸಾವರ್ಕರ ಕಚೇರಿ, ಅದರ ಮುಂದೆ ದಿವಂಗತ ಕಬ್ಬೂರ ಮಧ್ವಾಚಾರ್ಯರ ರಾಜನೈತಿಕ ಆಶ್ರಮ, ಇದಕ್ಕೆ ಹತ್ತಿರ ಸಿದ್ಧಲಿಂಗಪ್ಪನವರ ಮನೆ, ನಾಟಕ ಶಾಲೆ, ಇವೆಲ್ಲವನ್ನು ನೋಡಿದರೆ ಇದೊಂದು ಅಗ್ರಹಾರವಿದ್ದಂತೆ. ಈ ಬಿಡಾರಗಳ ಗುಂಪು. ಅದೊಂದು ವಿದ್ಯಾಕೇಂದ್ರ. ಇಂತಹ  ಪರಿಸರದಲ್ಲಿ ಬೆಳೆದ ಬಾಲಕ ದಾನಪ್ಪನವರಿಗೆ ಈ ಪರಿಸರ ಕಲೆಯ ಸ್ಫೂರ್ತಿಯ ಕೇಂದ್ರವಾಗಿ ಪರಿಣಮಿಸಿತು.

ತಾಯಿ ಚನ್ನಬಸಮ್ಮ ಧಾರ್ಮಿಕ ಮನೋವೃತ್ತಿಯವರು, ಸಹಜವಾಗಿಯೇ ಮಗು ದಾನಪ್ಪನದು ಧಾರ್ಮಿಕತೆಯ ಕಡೆಗೆ ಒಲವು. ಹೀಗಾಗಿ ಧಾರ್ಮಿಕ ಸನ್ನಿವೇಶಗಳನ್ನು ಕುರಿತು ಚಿತ್ರಿಸುತ್ತಿದ್ದರು. ಇವರ ತಂದೆಯವರ ಹವ್ಯಾಸ ಪ್ರವಾಸ ಮಾಡುವುದು. ಆದ್ದರಿಂದ ದಾನಪ್ಪನವರು ಅವರೊಂದಿಗೆ ಪ್ರವಾಸಕ್ಕೆ ತೆರಳಿ ನಿಸರ್ಗದ ಸೌಂದರ್ಯವನ್ನು ವೀಕ್ಷಿಸಿ ಚಿತ್ರಿಸುವುದು ಅವರ ಬಾಲ್ಯದಿಂದಲೇ ಇರುವ ಹವ್ಯಾಸವಾಗಿತ್ತೆಂದು ಅವರ ಪೂರ್ವಜರಿಂದ ತಿಳಿದುಬರುತ್ತದೆ.[೪] ಹಾಲಭಾವಿಯವರ ಸಹ ತಮ್ಮ ಜೀವಿತದ ಬಹುಭಾಗವನ್ನು ಪ್ರವಾಸ ಮಾಡುತ್ತಲೇ ಕಳೆದುದು ಅವರ ಜೀವನ ಚರಿತ್ರೆಯಿಂದ ತಿಳಿದು ಬರುತ್ತದೆ.

### ಹಾಲಭಾವಿಯವರ ಶಿಕ್ಷಣ

'ಶಿಕ್ಷಣ' ಎಂಬ ಪದಕ್ಕೆ ಇಂದು ಉದ್ಯೋಗದ ಅರ್ಥವನ್ನೇ ನೀಡಲಾಗುತ್ತಿದೆ. ಶಿಕ್ಷಣ ಪಡೆಯುವದು ಉದ್ಯೋಗಕ್ಕೆ ಎಂತಲೇ ಭಾವಿಸಲಾಗುತ್ತಿದೆ. ಆದರೆ ನಮ್ಮ ಪುರಾತನ ಸಂದರ್ಭದಲ್ಲಿ ಶಿಕ್ಷಣವು ಬದುಕಿಗಾಗಿ,

---

೩. ಎಸ್.ಕೆ.ಹೂಗಾರ, ಡಿ.ವಿ.ಹಾಲಭಾವಿ, ಪುಟ ೩/೪

೪. -ಅದೇ-ಪುಟ ೪/೫

ಸಂಸ್ಕೃತಿ ಸಂವರ್ಧನೆಗಾಗಿ ಕಲಿಸಿಕೊಡುವುದೇ ಆಗಿತ್ತೆಂದು ನಮ್ಮ ಲಾಕ್ಷಣಿಕರು ಹೇಳಿದ್ದನ್ನು ಅನೇಕ ಗ್ರಂಥಗಳಲ್ಲಿ ನೋಡಬಹುದಾಗಿದೆ. ಶಿಕ್ಷಣಕ್ಕೆ ಉದ್ಯೋಗದ ಅರ್ಥವನ್ನು ನೀಡಿದ್ದೇ ಭಾರತದ ಇಂದಿನ ಸಂದರ್ಭದ ಈ ಸ್ಥಿತಿಗೆ ಕಾರಣವಾಗಿರಬಹುದು. ಉದ್ಯೋಗ ಪ್ರಧಾನವಾದ ಶಿಕ್ಷಣಕ್ಕಿಂತಲೂ ಸಂಸ್ಕೃತಿ ಪ್ರಧಾನ ಶಿಕ್ಷಣ ನಮ್ಮ ಬದುಕನ್ನು ಹೆಚ್ಚು ಶ್ರೀಮಂತಗೊಳಿಸುತ್ತದೆ. ಈ ಹಿಂದೆಯೇ ಅಂತಹ ಶಿಕ್ಷಣವಿತ್ತು.

ಬಾಲ್ಯದಲ್ಲಿ ಪ್ರಾಥಮಿಕ ಶಿಕ್ಷಣ ಆ ಮಗುವಿನ ಭವಿಷ್ಯವನ್ನೇ ರೂಪಿಸುತ್ತದೆ. ಕಾರಣ ಬಾಲ್ಯದಲ್ಲಿಯೇ ಅವನ ಅಭಿರುಚಿಗಳು ಅವನ ಬರವಣಿಗೆ, ವರ್ತನೆ ಇತ್ಯಾದಿಗಳ ಮೂಲಕ ಬೆಳಕಿಗೆ ಬರಲಾರಂಭಿಸುತ್ತದೆ. ಇವುಗಳನ್ನು ಗುರುತಿಸಿ ಅವುಗಳನ್ನೇ ಪ್ರೋತ್ಸಾಹಿಸುವ ಪ್ರವೃತ್ತಿ ಇಂದಿನ ಸಂದರ್ಭದ ಶಿಕ್ಷಣದಲ್ಲಿ ಅಪರೂಪವಾಗುತ್ತದೆ. ಆದರೆ ದಾನಪ್ಪ ಹಾಲಭಾವಿಯವರಿಗೆ ನ್ಯಾಯಾಧೀಶ ತಂದೆ ಸರಿಯಾದ ನ್ಯಾಯವನ್ನು ಒದಗಿಸುತ್ತಾರೆ. ಮಗನ ಆಸಕ್ತಿಗೆ ಅನುಗುಣವಾಗಿ ಚಿತ್ರಕಲೆಗೆ ಸಾಕಷ್ಟು ಪ್ರೋತ್ಸಾಹ ಕೊಡುತ್ತಾರೆ. ತಂದೆಯ ಪ್ರೋತ್ಸಾಹದಿಂದ ಇವರ ಬಾಲ್ಯದ ಚಿತ್ರಕಲಾ ಅಭ್ಯಾಸ ಪ್ರಾರಂಭವಾಗುತ್ತದೆ.

ನ್ಯಾಯಾಂಗ ಇಲಾಖೆಯಲ್ಲಿ ಹಿರಿಯ ನ್ಯಾಯಾಧೀಶರಾಗಿ ನಿವೃತ್ತರಾದ ತಂದೆಯವರಿಗೆ ತಮ್ಮ ಮಗ ಉಚ್ಚ ಶಿಕ್ಷಣ ಪಡೆದು ಪ್ರಸಿದ್ಧ ನ್ಯಾಯಾಧೀಶರಾಗಬೇಕೆಂಬ ಹಂಬಲವಿದ್ದರೂ, ಇವರು ಕಲೆಗೆ ಮರುಳಾಗಿ ಬಣ್ಣ ಕುಂಚದೊಂದಿಗೆ ಗೆಳೆತನ ಬೆಳೆಸಿದರು. ಮುಂಬೈ ಪ್ರಾಂತ್ಯದ ತುಂಬೆಲ್ಲಾ ವರ್ಗವಾದಂತೆ ಊರೂರು ತಿರುಗುತ್ತಿದ್ದರಿಂದ ದಾನಪ್ಪನವರು, ಮರಾಠಿ, ಆಂಗ್ಲಭಾಷೆ ಕಲಿಯಬೇಕಾಯಿತು. ದಾನಪ್ಪನವರಿಗೆ ಶಾಲೆ ಎಂದರೆ ತಲೆನೋವಾಗಿತ್ತು. ಸದಾಕಾಲವು ಬಾಲಕ ದಾನಪ್ಪನವರು ಚಿತ್ರಕಲೆಯ ಗೀಳು ಅಂಟಿಸಿಕೊಂಡರು. ಪ್ರಕೃತಿಯ ಒಳ ಹೊರಹುಗಳನ್ನು ಅರಿಯುವ ಕುತೂಹಲ ತುಂಬಿತ್ತು.

ನ್ಯಾಯಾಧೀಶ ವೀರಭದ್ರಪ್ಪ ಹಾಲಭಾವಿಯವರಿಗೆ ೧೯೨೦ರಲ್ಲಿ ಹೊನ್ನಾವರಕ್ಕೆ ವರ್ಗವಾಯಿತು. ಆಗ ಬಾಲಕ ದಾನಪ್ಪನಿಗೆ ತುಂಬಾ ಸಂತಸವಾಯಿತು. ಜುಳು ಜುಳು ನಿನಾದದೊಂದಿಗೆ ಹರಿವ ತೊರೆ, ನದಿಗಳು, ಗಗನ ಚುಂಬಿ ವೃಕ್ಷಗಳು ಕಣ್ಸೆಳೆಯುವ ನಿಸರ್ಗ ದಾನಪ್ಪನವರಿಗೆ ಹುಚ್ಚು ಹಿಡಿಸಿದವು. ಹಗಲು ರಾತ್ರಿಯನ್ನದೇ ಕಾಡು ಮೇಡು ಅಲೆಯಲಾರಂಭಿಸಿದರು. ನಿಸರ್ಗದೊಂದಿಗೆ ನಲಿಯುವ ಸಂತಸ. ನಾಲ್ಕು ಗೋಡೆಯ ನಡುವಿರುವ ಶಾಲೆಯಲ್ಲಿ ಎಲ್ಲಿ ಸಿಕ್ಕೀತು. ಅದುವರೆಗೆ ಬರೀ ಹವ್ಯಾಸವಾಗಿದ್ದ ನಿಸರ್ಗ ರಸಸ್ವಾದನೆಯನ್ನು ಕುಂಚ ಹಿಡಿದು ನೂರಾರು ಕನಸು ರೂಪಿಸುವ, ಹೊಸ ಅರ್ಥ ಹುಡುಕುವ ಛಲದಿಂದ ಚಿತ್ರಕಲೆಯನ್ನೇ ಜೀವನದ ಗುರಿಯನ್ನಾಗಿಸಿಕೊಂಡು ಬೆಳೆದರು ಹಾಲಭಾವಿ ದಾನಪ್ಪನವರು.

ತಮ್ಮ ಇಚ್ಛೆಗೆ ಮಣಿಯದ ಮಗನನ್ನು ಕಂಡು ಅವನ ದಾರಿಯಲ್ಲಿ ಅವನು ಹೋಗಲು ಉದಾರ ಮನಸ್ಸಿನ ತಂದೆ ವೀರಭದ್ರಪ್ಪನವರು ದಾನಪ್ಪನವರಿಗೆ ಎಲ್ಲ ಅನುಕೂಲ ಮಾಡಿಮಾಡಿಕೊಟ್ಟರು. ಹೊನ್ನಾವರದಲ್ಲಿದ್ದಾಗ ದಾನಪ್ಪನವರಿಗೆ ಪ್ರಥಮವಾಗಿ ಚಿತ್ರಕಲೆ ಅಭಿರುಚಿ ಉಂಟು ಮಾಡಿದವರು ಡ್ರಾಯಿಂಗ್ ಮಾಸ್ತರ ದಾಸಪ್ಪೈ ಇವರು ದಾನಪ್ಪನಲ್ಲಿದ್ದ ಚಿತ್ರಕಲಾ ಪ್ರತಿಭೆ ಗುರುತಿಸಿ ಪ್ರೋತ್ಸಾಹ ನೀಡಿದರು. ದಾನಪ್ಪನವರು ಪ್ರಾಥಮಿಕ ಹಾಗೂ ಪ್ರೌಢಶಾಲೆಯನ್ನು ಕೂಡ ಓದಿದವರಲ್ಲ. ನೇರವಾಗಿ ಚಿತ್ರಕಲೆಯನ್ನೇ ದೃಷ್ಟಿ ಇಟ್ಟುಕೊಂಡು ಚಿತ್ರಕಲೆಯನ್ನೇ ಕಲಿಯಲು ಪ್ರಾರಂಭಿಸಿದರು.[೫] ಮುಂದೆ ತಮ್ಮ ಐವತ್ತನೆಯ ವಯಸ್ಸಿನಲ್ಲಿ ಎಸ್.ಎಸ್.ಎಲ್.ಸಿ ಪರೀಕ್ಷೆಯನ್ನು ಪಾಸು ಮಾಡುತ್ತಾರೆ.

### ಹಾಲಭಾವಿಯವರ ವ್ಯಕ್ತಿತ್ವ ಮತ್ತು ಹವ್ಯಾಸ

ತಮ್ಮ ಬದುಕಿನುದ್ದಕ್ಕೂ ಒಳ್ಳೆಯ ಹವ್ಯಾಸಗಳನ್ನು ಇಟ್ಟುಕೊಂಡು ಬಂದವರು ಹಾಲಭಾವಿಯವರು. ತಮ್ಮ ಬದುಕಿನಲ್ಲಿ ಪಾಲಿಸಿಕೊಂಡು ಬಂದ ಶಿಸ್ತು, ಅಚ್ಚುಕಟ್ಟುತನ ಹಾಗೂ ನಿರ್ಮಲತೆ. "ಶಿಸ್ತಿಲ್ಲದ ಸಂಸಾರ

೫. ಡಾ.ಎಸ್.ಸಿ.ಪಾಟೀಲ, ಚಿತ್ರಾಕ್ಷಿ, ಪುಟ ೧೯/೨೦

ಸುಂದರವಾಗುವುದಿಲ್ಲ. ಅಚ್ಚುಕಟ್ಟುತನವಿಲ್ಲದಿದ್ದರೆ ಜೀವನ ಅಸ್ತವ್ಯಸ್ತವಾಗುತ್ತದೆ" ಎಂಬ ಮಾತನ್ನು ಬದುಕಿನುದ್ದಕ್ಕೂ ಅಳವಡಿಸಿಕೊಂಡು ಬಂದವರು, ಯಾವುದೇ ಕೆಲಸವಾಗಿರಲಿ ಅದನ್ನು ಮಾಡಬೇಕು. ಅಂದರೆ ಎಷ್ಟೆ ಕಷ್ಟವಾದರೂ, ಸಮಸ್ಯೆ ಬಂದರೂ ಮಾಡುವ ಕೆಲಸವನ್ನು ಎಂದೂ ಕೈ ಬಿಟ್ಟವರಲ್ಲ. ಅವರ ಉಡಿಗೆ ತೊಡಿಗೆಗಳೂ ಅಷ್ಟೇ ನೀಟಾಗಿ ಶುಭ್ರವಾಗಿರುತ್ತಿದ್ದವು. ಅವರು ಧರಿಸುವಂತಹ ಬಟ್ಟೆಗಳು ಯುರೋಪಿನ ಶೈಲಿಯಲ್ಲಿ ಇರುತ್ತಿದ್ದವು. ಮನೆಯಿಂದ ಹೊರಗಡೆ ಹೊರಟರು ಎಂದರೆ ಇಸ್ತ್ರಿ ಮಾಡಿದ ಪ್ಯಾಂಟ್ ಶರ್ಟ್, ಕೋಟ್ ಧರಿಸಿ, ಮತ್ತೆ ತಮ್ಮ ಮನೆಯ ಕುಟುಂಬದವರಿಗೆ ತಾವು ಧರಿಸಿರುವ ಡ್ರೆಸ್‌ನ್ನು ಕರೆಕರೆದು ತೋರಿಸಿ ನಾನು ಹೇಗೆ ಕಾಣುತ್ತೇನೆ ಎಂದು ತೋರಿಸುತ್ತಿದ್ದರು. ಅವರ ಸಮಯ ಪ್ರಜ್ಞೆಯು ಕೂಡ ಅಷ್ಟೆ ಶಿಸ್ತಿನಿಂದ ಕೂಡಿರುತ್ತಿತ್ತು. ೪ ಗಂಟೆಗೆ ಹೊರಗಡೆ ಹೋಗಬೇಕೆಂದರೆ ೩-೩೦ಕ್ಕೆ ಅಂದರೆ ಅರ್ಧ ಘಂಟೆಯ ಮೊದಲೇ ಹೋಗಬೇಕಾದ ಸಮಾರಂಭಕ್ಕೆ ಅಥವಾ ಕೆಲಸಕ್ಕೆ ಹಾಜರಿರುತ್ತಿದ್ದರು. ಸಾಮಾನ್ಯವಾಗಿ ವ್ಯಕ್ತಿಗಳು ಯಾವುದಾದರೊಂದು ಹವ್ಯಾಸಕ್ಕೆ ಅಧೀನರಾಗಿರುವದನ್ನು ನೋಡುತ್ತೇವೆ. ಹಾಲಭಾವಿಯವರು ತಮ್ಮ ಮನಸ್ಸಿನ ದೌರ್ಬಲ್ಯದಿಂದ ಯಾವುದೇ ದುರ್ಬಲ ಗುಣಗಳಿಂದ ದುಶ್ಚಟಕ್ಕೆ ಬಲಿಯಾಗಲಿಲ್ಲ. ಅವರಿಗೆ ಚಿತ್ರಕಲೆ ಕೇಂದ್ರಬಿಂದು ಆಗಿದ್ದರೂ ದಾನಪ್ಪನವರಿಗೆ ಬದುಕನ್ನು ಕ್ರಿಯಾಶೀಲವಾಗಿಸಿಕೊಳ್ಳುವ ಹವ್ಯಾಸಗಳು ತಬಲಾ ಬಾರಿಸುವುದು, ತಾವೇ ಸ್ವತಃ ಹಾಡುವುದು, ಹಾರ್ಮೋನಿಯಂ ನುಡಿಸುವುದು, ಜೊತೆಗೆ ಛಾಯಾಗ್ರಹಣದಲ್ಲಿಯೂ ಇವರು ಕುಂಚದಷ್ಟೆ ಹಿಡಿತವನ್ನು ಸಾಧಿಸಿಕೊಂಡಿದ್ದರು.

### ಚಿತ್ರಕಲಾ ಶಿಕ್ಷಕರಾಗಿ ಡಿ.ವಿ.ಹಾಲಭಾವಿಯವರು

ಕಲೆ ಬರಿಯ ಅಲಂಕರಣ ಸಾಮಗ್ರಿಯಲ್ಲ. ಗೋಡೆಯ ಚಂದಕ್ಕೆ ತೂಗಿಸುವ ಚಿತ್ರಪಟವಲ್ಲ, ರಮಣೀಯ ಕಥಾನಕವೂ ಅಲ್ಲ, ಮನೋಹರ ದೃಶ್ಯಾವಳಿಯೂ ಅಲ್ಲ, ಅದು ನಮ್ಮ ಭಾವನೆಗಳನ್ನು ಎಚ್ಚರಿಸಬೇಕು, ಕೆರಳಿಸಬೇಕು, ವ್ಯಕ್ತಿತ್ವವನ್ನು ಎತ್ತರಿಸಬೇಕು, ಅರಳಿಸಬೇಕು. ಈ ವಾಕ್ಯದ ಅರ್ಥವನ್ನು ಅಕ್ಷರಶಃ ದಾನಪ್ಪ, ಹಾಲಭಾವಿಯವರು ಪಾಲಿಸಿದ್ದಾರೆ.

೧೯೧೭ರಲ್ಲಿ ಎಲಿಮೆಂಟರಿ ಡ್ರಾಯಿಂಗ್ ಗ್ರೇಡ್ ಪರೀಕ್ಷೆಯನ್ನು ಪ್ರಥಮ ಶ್ರೇಣಿಯಲ್ಲಿ ಪಾಸಾದರು. ಇಂಟರ ಮಿಡಿಯೇಟ ಡ್ರಾಯಿಂಗ್ ಗ್ರೇಡ್ ಪರೀಕ್ಷೆ ಬೆಳಗಾವಿಯಿಂದ ಉಚ್ಚ ಶ್ರೇಣಿಯಲ್ಲಿ ಪಾಸಾದರು. ಇವರಿಗೆ ಚಿತ್ರಕಲೆಯಲ್ಲಿ ಇದ್ದ ಅಪಾರ ಆಸಕ್ತಿ, ಮತ್ತು ಅಗಾಧವಾದ ಕಲಾಪ್ರತಿಭೆಯನ್ನು ಕಂಡು ಚಿಕ್ಕೋಡಿಯ ಆರ್.ಡಿ.ಎ.ವಿ. ಸಂಸ್ಥೆಯವರು ತಮ್ಮ ಸ್ಕೂಲಿನಲ್ಲಿ ಇವರನ್ನು ಚಿತ್ರಕಲಾ ಶಿಕ್ಷಕರನ್ನಾಗಿ ನೇಮಿಸಿಕೊಂಡರು. ಇದೇ ವೇಳೆಯಲ್ಲಿ ಅವರ ಕುಟುಂಬ ವರ್ಗದವರು ಮಗನಿಗೆ ನೌಕರಿ ಸಿಕ್ಕ ಸಂತೋಷದ ಸಂದರ್ಭದಲ್ಲಿ ಮದುವೆ ಮಾಡಲು ನಿಶ್ಚಯಿಸಿದರು. ಆಗಿನ್ನು ದಾನಪ್ಪ ಹಾಲಭಾವಿಯವರಿಗೆ ೧೭ನೇ ವಯಸ್ಸು ಕುಟುಂಬದ ನಿರ್ಬಂಧಕ್ಕೆ ತಲೆಬಾಗಿ ಅಕ್ಕೊಳದ ನಲಗೆ ಮನೆತನದ ನರ್ಮದಾಳೊಡನೆ ೧೯೨೪ರಲ್ಲಿ ಇವರ ವಿವಾಹವಾಯಿತು.

ಹಾಲಭಾವಿಯವರು ಚಿಕ್ಕೋಡಿಯಲ್ಲಿ ಎರಡು ವರ್ಷ ಚಿತ್ರಕಲಾ ಶಿಕ್ಷಕರಾಗಿ ಸೇವೆ ಮಾಡಿ ಅನೇಕ ವಿದ್ಯಾರ್ಥಿಗಳಿಗೆ ಚಿತ್ರಕಲೆಯಲ್ಲಿ ಮಾರ್ಗದರ್ಶನ ಮಾಡಿದರು. ತದನಂತರ ಇನ್ನೂ ಮುಂದೆ ಚಿತ್ರಕಲೆಯಲ್ಲಿ ಹೆಚ್ಚಿನ ವ್ಯಾಸಂಗ ಮಾಡಬೇಕು. ಎನ್ನುವ ಹಂಬಲದಿಂದ ಉನ್ನತ ಕಲಾ ಶಿಕ್ಷಣ ಪಡೆಯಲು ಮುಂಬೈಗೆ ತೆರಳಿದರು. ಅಲ್ಲಿ ಪ್ರತಿಷ್ಠಿತ ಚಿತ್ರಕಲಾ ಶಾಲೆಯಾದ ಜೆ.ಜೆ. ಸ್ಕೂಲ ಆಫ್ ಆರ್ಟ್‌ಗೆ ಸೇರಿದರು. ಅಲ್ಲಿ ೧೯೨೭-೨೮ರಲ್ಲಿ ಚಿತ್ರಕಲಾ ಶಿಕ್ಷಕರ ತರಬೇತಿ (ಡಿ.ಟಿ.ಸಿ.) ಪಡೆದು ಸ್ವಕ್ಷೇತ್ರಕ್ಕೆ ಮರಳಿದರು. ೧೯೨೮ರಲ್ಲಿ ಮತ್ತೆ ನಿಪ್ಪಾಣಿ ಮುನಸಿಪಲ್ ಹೈಸ್ಕೂಲನಲ್ಲಿ ಆರು ತಿಂಗಳು ಕಾಲ ಚಿತ್ರಕಲಾ ಶಿಕ್ಷಕರಾಗಿ ಸೇವೆ ಮಾಡುತ್ತಲೇ, ಅನೇಕ ವಿದ್ಯಾರ್ಥಿಗಳಿಗೆ ಕಲೆಯ ಮಾರ್ಗವನ್ನು, ತಿಳಿಯಪಡಿಸಿದವರು.[೬] ಕಲಾಶಿಕ್ಷಕ ವೃತ್ತಿ ಇಲ್ಲಿಂದಲೇ ಪ್ರಾರಂಭವಾಯಿತು.

೬. ಎಸ್.ಕೆ.ಹೂಗಾರ, ಡಿ.ವಿ.ಹಾಲಭಾವಿ, ಪುಟ ೫/೬

೧೯೨೮ರಲ್ಲಿ ದಾನಪ್ಪ ಹಾಲಭಾವಿಯವರ ತಾಯಿ ಬಿಜಾಪೂರದಲ್ಲಿ ನಿಧನವಾಗುತ್ತಾರೆ. ಇದೇ ಸಂದರ್ಭದಲ್ಲಿ ಅವರ ಮಮತೆಯ ಬಾಳಸಂಗಾತಿಯೂ ಕೂಡ ಆಕಸ್ಮಿಕವಾಗಿ ಮರಣವನ್ನಪ್ಪುತ್ತಾಳೆ. ಒಂದೇ ವರ್ಷದಲ್ಲಿ ಪ್ರೀತಿಯ ತಾಯಿ ಹಾಗೂ ಹೆಂಡತಿಯನ್ನು ಕಳೆದುಕೊಂಡ ಅವರ ಮನಸ್ಸಿಗೆ ದೊಡ್ಡ ಆಘಾತವಾಯಿತು. ಸಂಗಾತಿ ಸತಿ ಇಲ್ಲದ ಸಂಸಾರ ಮತಿಹೀನನ್ನಾಗಿ ಮಾಡಿ ಸರಿಯಾದ ಮಾರ್ಗದಲ್ಲಿ ಕ್ರಮಿಸಲು ಬಿಡುವುದಿಲ್ಲ. ಅದಕ್ಕೆ ದಾನಪ್ಪನವರು ಎರಡನೇ ಮದುವೆ ಮಾಡಿಕೊಳ್ಳಲು ಸಿದ್ಧರಾದರು. ವಿಚಾರ ಶೀಲ ತಂದೆ ವೀರಭದ್ರಪ್ಪನವರು ಇನ್ನೂ ೨೫ ವರ್ಷ ವಯಸ್ಸಿನಲ್ಲಿರುವ ವಾತ್ಸಲ್ಯದ ಪುತ್ರ ದಾನಪ್ಪನವರಿಗೆ ಬೈಲಹೊಂಗಲದ ಜವಳಿಯವರ ಸಿದ್ದರಾಮಪ್ಪ-ಪಾರ್ವತೆವ್ವ ದಂಪತಿಗಳ ಪುತ್ರಿ ಸರ್ವಮಂಗಳಾದೇವಿಯನ್ನು ನಿಶ್ಚಯಿಸಿ ೨೪.೦೨.೧೯೭೨ರಂದು ಮತ್ತೆ ಮದುವೆ ಮಾಡಿದರು. ಸರ್ವಮಂಗಳಾದೇವಿ ಪತಿಗೆ ತಕ್ಕ ಸತಿಯಾಗಿ ಅವರ ಕೆಲಸ ಕಾರ್ಯಗಳಲ್ಲಿ ನೆರಳಿನಂತೆ ನೆರವಾಗುತ್ತ ಬಂದಳು. ಒಬ್ಬರ ಮನಸ್ಸನ್ನು ಒಬ್ಬರು ಅರಿತು, ಬೆರೆತು ಅನ್ಯೋನ್ಯವಾಗಿ ಸಾಗಿದ ಸಂತೃಪ್ತ ಜೀವನ ಇವರದಾಗಿತ್ತು. ಎರಡನೇ ಮದುವೆಯಾದ ನಂತರವೂ ಮತ್ತೆ ಉನ್ನತ ವ್ಯಾಸಂಗಕ್ಕಾಗಿ ಮುಂಬೈ ಜೆ.ಜೆ. ಸ್ಕೂಲ ಆಫ್ ಆರ್ಟ್‌ಗೆ ಸೇರಿದರು.[೭] ಹಾಲಭಾವಿಯವರಲ್ಲಿ ಕಲೆಗೆ ಇರುವ ಉತ್ಕಟ ಇಚ್ಛೆಯನ್ನು ಇಲ್ಲಿ ಗುರುತಿಸಬಹುದಾಗಿದೆ.

### ಮುಂಬೈ ಕಲಾಶಾಲೆಯ ವಾತಾವರಣ

ಸರ್.ಜೆ.ಜೆ. ಕಲಾ ಶಾಲೆಯಲ್ಲಿ ವಿದ್ಯಾರ್ಥಿಗಳ ಸರ್ವಾಂಗೀಣ ಬೆಳವಣಿಗೆಯ ಹಿನ್ನೆಲೆಯಾಗಿ ಅನೇಕ ಚಟುವಟಿಕೆಗಳು ನಡೆಯುತ್ತಿದ್ದವು. ಶೈಕ್ಷಣಿಕ ಪ್ರವಾಸ, ಶಾಲೆಯಲ್ಲಿ ಚಿತ್ರಕಲೆಗಳ ಪ್ರದರ್ಶನ, ಮುಂಬಯಿ ಆರ್ಟ್ ಸೊಸೈಟಿ, ಇನ್ನಿತರ ಸೊಸೈಟಿಗಳು ನಡೆಸುವ ಕಲಾಪ್ರದರ್ಶನದಲ್ಲಿ ಭಾಗವಹಿಸುವುದು. ಹೀಗೆ ಹಲವಾರು ಸ್ಫೂರ್ತಿ ನೀಡುವ ಕಲಾವಾತಾವರಣವನ್ನು ಅಲ್ಲಿ ಕಾಣುತ್ತೇವೆ. ಶಾಲೆಯ ವಾರ್ಷಿಕ ಪರೀಕ್ಷೆಗಳಲ್ಲಿ ಚೆನ್ನಾಗಿ ರಚಿಸಿದ ಚಿತ್ರಗಳಿಗೂ ಬಹುಮಾನಗಳನ್ನು ನೀಡಿ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುತ್ತಿದ್ದರು. ಅಲ್ಲದೇ ನಮ್ಮ ದೇಶದಲ್ಲಷ್ಟೇ ಅಲ್ಲದೇ ಹೊರ ದೇಶಗಳಲ್ಲಿಯೂ ಕಲಾಪ್ರದರ್ಶನಗಳನ್ನು ಏರ್ಪಡಿಸುತ್ತಿದ್ದರು.

ಶೈಕ್ಷಣಿಕ ಪ್ರವಾಸವೆಂದು ಅನೇಕ ಐತಿಹಾಸಿಕ ಸ್ಥಳಗಳಿಗೆ ವಿದ್ಯಾರ್ಥಿಗಳನ್ನು ಕರೆದುಕೊಂಡು ಹೋಗುತ್ತಿದ್ದರು. ಅದರಲ್ಲೂ ಅಜಂತಾ ಎಲ್ಲೋರಾ ಚಿತ್ರಗಳ ಅಭ್ಯಾಸ ಪ್ರವಾಸವಂತೂ ಎಲ್ಲ ವಿದ್ಯಾರ್ಥಿಗಳಿಗೂ ಕಡ್ಡಾಯವಾಗಿ ಮಾಡಿಸುತ್ತಿದ್ದರಂತೆ. ಯಾಕೆಂದರೆ ಅಜಂತಾ ಭಾರತದ ಅತ್ಯಂತ ಪುರಾತನ ಚಿತ್ರಗಳನ್ನು ಹೊಂದಿದ ಸ್ಥಳ. ಇವಾಗಿವೆ. ಇವುಗಳನ್ನು ವಿದ್ಯಾರ್ಥಿಗಳು ನಕಲು ಮಾಡಿಕೊಂಡು ಬರುತ್ತಿದ್ದರು ಮತ್ತು ಅಧ್ಯಯನ ಮಾಡವುದು ಒಂದು ಪದ್ಧತಿಯಾಗಿದೆ. ಜೆ.ಜೆ. ಕಲಾಶಾಲೆಯಲ್ಲಿ ಕಲಿತ ಅನೇಕ ವಿದ್ಯಾರ್ಥಿಗಳ ಮೇಲೆ ಈ ಅಜಂತಾ ಶೈಲಿಯ ಪ್ರಭಾವವನ್ನು ಸಹಜವಾಗಿ ಕಾಣುತ್ತೇವೆ. ಶಿಕ್ಷಕರು ಸಹಿತ ಅಷ್ಟೇ ಒಳ್ಳೆಯ ರೀತಿಯಿಂದ ವಿದ್ಯಾರ್ಥಿಗಳಿಗೆ ಅಭ್ಯಾಸ ಹೇಳಿಕೊಡುತ್ತಿದ್ದರು. ಇದರಿಂದಾಗಿ ಅಜಂತಾದ ಭಿತ್ತಿಚಿತ್ರಗಳನ್ನು ಯುರೋಪಿಯನ್ನರಿಗಿಂತ ಈ ವಿದ್ಯಾರ್ಥಿಗಳೇ ಅತ್ಯಂತ ಸುಂದರವಾಗಿ ನಕಲು ಮಾಡುತ್ತಿದ್ದರು. ಇದರಿಂದ ಅಲ್ಲಿಯ ವಿದ್ಯಾರ್ಥಿಗಳಿಗೆ ಕಲಾ ಶಿಕ್ಷಣಕ್ಕಾಗಿ ಯಾವ ರೀತಿಯಲ್ಲಿ ಶಿಕ್ಷಕರು ಪ್ರಾರಂಭಿಕ ಅಡಿಪಾಯ ಹಾಕಿದ್ದರೆಂದು ತಿಳಿಯುತ್ತದೆ. ಹಾಲಭಾವಿಯವರ ಚಿತ್ರಗಳಲ್ಲೂ ಸಹಿತ ಆಕೃತಿಗಳ ಉದ್ದನೆಯ ಮೂಗು ಕೈಬೆರಳುಗಳು ಅಜಂತಾ ಶೈಲಿಯ ಮಾದರಿಯನ್ನೇ ಗುರುತಿಸಬಹುದಾಗಿದೆ. ೧೯೨೬ರಲ್ಲಿ ಶ್ರೀ ಹಾಲಭಾವಿ, ಎಂ.ವಿ.ಮಿಣಜಗಿ. ಡಿ.ಜಿ.ಬಡಿಗೇರ, ಅಮೀನಸಾಬ್ ಕಮಡೊಳ್ಳಿ, ಎಂ.ಎ.ಚೆಟ್ಟಿ, ಸಿ.ವಿ.ಕಾರಡಗಿ, ಜಿ.ಎಸ್.ದಂಡಾವತಿಮಠ ಇವರೆಲ್ಲರೂ 'ಸಪ್ತರಂಗದ ಗುಂಪು' ಎಂದು ಕರೆಯಿಸಿಕೊಂಡು ಆತ್ಮೀಯತೆಯಿಂದ ಇರುತ್ತಿದ್ದರು. ಎಲ್ಲೆಡೆಯಲ್ಲೂ ಸ್ಕೆಚ್ ಮಾಡಲು ಹೋಗುತ್ತಿದ್ದರಲ್ಲದೆ ಅಜಂತಾ. ಎಲ್ಲೋರಾ, ಹಂಪಿ ಮುಂತಾದೆಡೆಗಳಲ್ಲಿ ಹೋಗಿ ಸ್ಕೆಚ್ ಮಾಡಿ ಬರುತ್ತಿದ್ದರು.[೮] ಈಗಲೂ ಬಾಂಬೆ ಜೆ.ಜೆ.ಕಲಾಶಾಲೆಯ ವಿದ್ಯಾರ್ಥಿಗಳು ಕರ್ನಾಟಕದ ಈ ಸ್ಥಳಗಳಿಗೆ ಪ್ರತಿ ವರ್ಷ ಅಧ್ಯಯನ ಪ್ರವಾಸಕ್ಕೆ ಬರುವುದನ್ನು ಕಾಣುತ್ತೇವೆ.

---

೭. ಎಸ್.ಕೆ.ಹೂಗಾರ, ಡಿ.ವಿ.ಹಾಲಭಾವಿ, ಪುಟ ೬

೮. ಡಾ.ಲಕ್ಷ್ಮೀ ದೇವಿ ಗವಾಯಿ, ಎಂ.ಎ.ಚೆಟ್ಟಿ ಜೀವನ ಹಾಗೂ ಕಲಾಕೃತಿಗಳು, ಪುಟ ೬೦

ಆಗಿನ ಯುರೋಪಿಯನ್ ಡೈರೆಕ್ಟರ್‌ಗಳು ಎಷ್ಟೊಂದು ಕಟ್ಟುನಿಟ್ಟಾಗಿದ್ದರೆಂದರೆ ೧೯೨೫ರಲ್ಲಿ ಗ್ರಿಫಿತ್ಸ್‌ರವರ ಆದೇಶದಂತೆ ಇಂಪೀರಿಯಲ್ ಸೈಜ್‌ನಲ್ಲಿ ಅಜಂತೆಯ ಗುಹೆ ಚಿತ್ರ ತೆಗೆದದ್ದನ್ನು ಇಲ್ಲಿ ಉದಾಹರಿಸಬಹುದಾಗಿದೆ. ಆ ಚಿತ್ರಗಳು ಹೇಗೆ ತೆಗೆದವೆಂದರೆ, ಗುಹೆಯ ಗುಡ್ಡದ ಮೇಲೆ ಹತ್ತಿಹೋಗಿ ಗುಹೆಯ ನಿಸರ್ಗಚಿತ್ರ ಮಾಡಲಾಯಿತು. ಅದು ಬಹಳ ಕಷ್ಟದ ಕೆಲಸವೂ ಅಗಿತ್ತು. ಜನೆವರಿಯಲ್ಲಿ ತುಂಬಾ ಥಳಿ ಆದರೂ ಬೂಟನ್ನು ಹೆಗಲ ಮೇಲೆ ಹಾಕಿಕೊಂಡು ಹತ್ತುವಾಗ ಮೈ ಎಲ್ಲ ಬೆವರು. ಅಲ್ಲದೇ ಅಲ್ಲಿ ಕಾಡುಪ್ರಾಣಿಗಳ ಹೆದರಿಕೆ ಬೇರೆ. ಒಂದು ದಿನ ೧೨ ಗಂಟೆಗೆ ಜೋರಾದ ಸಪ್ಪಳ ಕೇಳಿಸಿತು. ಎಲ್ಲರೂ ಹೆದರಿ ನಡುಗಲಾರಂಭಿಸಿದರು. ಆದರೂ ಚಿತ್ರ ತೆಗೆಯುವ ಕಾರ್ಯ ನಿಲ್ಲಿಸುವ ಹಾಗಿಲ್ಲ. ಅಂಥದ್ದರಲ್ಲಿ ನನ್ನ ಚಿತ್ರ ಒಂದು ಹುಲಿಗೆ ಹೆದರಿ ಅರ್ಧ ಆಗಿತ್ತು. ತಿರುಗಿ ಹೋದ ನಂತರ ಎಲ್ಲ ಚಿತ್ರಗಳನ್ನು ಪರೀಕ್ಷಿಸಿದ ಪ್ರಿನ್ಸಿಪಾಲರು. ಕೊನೆಯ ಚಿತ್ರ ಅರ್ಧ ಆಗಿರುವದನ್ನು ಕುರಿತು ಪ್ರಶ್ನಿಸಿದಾಗ ನಡೆದ ವಿಷಯ ತಿಳಿಸಿದೆ. ಆಗ ಅವರು ಹುಲಿ ತಿಂದರೆ ಏನಾಗುತ್ತಿತ್ತು ಎಂದು ನಕ್ಕರು. ನಂತರ ತಾವೇ ಪೂರ್ತಿಗೊಳಿಸಿದರು ಎಂಬ ವಿಚಾರ ತಿಳಿದು ಬರುತ್ತದೆ. ಹಾಲಭಾವಿಯವರು ಉದಯಪುರ, ಚಿತ್ತೋಡ ಮುಂತಾದ ಸ್ಥಳಗಳಿಗೆ ಶೈಕ್ಷಣಿಕ ಪ್ರವಾಸ ಹೋಗಿ ಬಂದಿದ್ದಾರೆ. ಆಗಿನ ಶಿಕ್ಷಕರು ಎಲ್ಲಿಯೇ ಕಲಾಪ್ರದರ್ಶನ ನಡೆಯಲಿ ಅಥವಾ ಯಾವುದಾದರೂ ಭಿತ್ತಿಚಿತ್ರ ರಚಿಸಲು ಆದೇಶ ಬಂದರೆ ವಿದ್ಯಾರ್ಥಿಗಳನ್ನು ಸಹಿತ ತಮ್ಮ ಜೊತೆಗೆ ಸೇರಿಸಿಕೊಂಡು ಚಿತ್ರ ರಚಿಸಲು ಅವಕಾಶ ಕೊಡುತ್ತಿದ್ದರು.

೧೯೧೦ರಲ್ಲಿ ದಿಲ್ಲಿ ದರಬಾರದಲ್ಲಿ ಅಖಿಲ ಭಾರತೀಯ ಔದ್ಯೋಗಿಕ ಪ್ರದರ್ಶನ ಮಾಡಿದ್ದರು. ಅದರಲ್ಲಿ ಜೆ.ಜೆ.ಕಲಾ ಶಾಲೆಯು ಭಾಗವಹಿಸಿತ್ತು. ಆ ಪ್ರದರ್ಶನದಲ್ಲಿ ಪ್ಲಾಸ್ಟರ್ ಆಫ್ ಪ್ಯಾರಿಸ್‌ನಿಂದ ಮಾಡಿದ ಮೂರ್ತಿಗಳು ಕಟ್ಟಿಗೆಯಲ್ಲಿಯ ಕೆತ್ತನೆಗಳು, ಬೆಳ್ಳಿ ಹಾಗೂ ಹಿತ್ತಾಳೆಯಿಂದ ಕೂಡಿದ ಸಾಮಾನುಗಳು, ಅಲಂಕಾರಿಕ ಪರದೆ ಮತ್ತು ವರ್ಣಚಿತ್ರಗಳು ಎಲ್ಲಾ ಭಾರತೀಯ ಶೈಲಿಗಳನ್ನು ಒಳಗೊಂಡಂಥವು. ಕೆ.ಆರ್.ಕೀರ್ತಿಕರ್, ಆರ್.ಡಬ್ಲ್ಯೂ. ದೇವುಸ್ಕರ್. ನೆರಲೇಕರ್ ಮುಂತಾದ ವಿದ್ಯಾರ್ಥಿಗಳು ಈ ಕೆಲಸ ಮಾಡಿದ್ದರು. ಇವರು ಮಾಡಿದ ಎಲ್ಲಾ ವಸ್ತುಗಳನ್ನು ಮಾರಾಟವಾದವು. ಅದೇ ರೀತಿ ಗ್ಲಾಡ್‌ಸನ್ ಸೋಲೋಮನ್ನರಿಗೆ ಕನ್ನಡ ಕಲಾವಿದರ ಗುಂಪಿನ ಮೇಲೆ ಬಹಳ ಪ್ರೀತಿ ಇತ್ತು. ಕರ್ನಾಟಕದವರೇ ಶ್ರೇಷ್ಠ ದರ್ಜೆಯ ಕಲಾವಿದರೆನ್ನುತ್ತಿದ್ದರು. ಅಷ್ಟೇ ಅಲ್ಲದೆ. ದಿಲ್ಲಿಯ ರಾಷ್ಟ್ರಪತಿ ಭವನ (ಮೊದಲಿಗೆ ಇದಕ್ಕೆ ವೈಸ್‌ರಾಯ್ ಹೌಸ್ ಎಂದು ಕರೆಯುತ್ತಿದ್ದರು) ಗುಮ್ಮಟಗಳ ಮೇಲೆ ಚಿತ್ರಗಳನ್ನು ರಚಿಸಲು ಕನ್ನಡ ಕಲಾವಿದರನ್ನೇ ಆಯ್ಕೆ ಮಾಡಿ ಕರೆದೊಯ್ದರು. ಇದೇ ಭಿತ್ತಿಚಿತ್ರವನ್ನು ಯಾರ್‍ಯಾರು ಯಾವ ರೀತಿಯಲ್ಲಿ ಚಿತ್ರಿಸಿದರೆಂಬುದನ್ನು ಶ್ರೀ ಧುರಂಧರ ಅವರು ಈ ರೀತಿ ಬರೆದಿದ್ದಾರೆ. "ಹತ್ತು ಫೂಟಿನ ಒಂದು ಡೋಮ್ ಇತ್ತು ಅದರ ಮೇಲೆ ಆರು ಚಿತ್ರ ರಚಿಸಿದರು. ಮೊದಲನೆಯದು ಅಜಂತಾ ಶೈಲಿ, ಎರಡನೆಯದು ಗುಪ್ತರ, ಮೂರನೆಯದು ಗಾಂಧಾರ, ನಾಲ್ಕನೆಯದು ಶಹಾಜಹಾನನ ಕಾಲ, ಐದನೆಯದು ರಜಪೂತ ಮತ್ತು ಆರನೆಯದು ಮಾಡರ್ನ ಇಂಡಿಯಾ, ಶೈಲಿಯನ್ನು ಪ್ರತಿಬಿಂಬಿಸುವಂತೆ ಅನುಕ್ರಮವಾಗಿ ಈ ಚಿತ್ರಗಳನ್ನು ರಚಿಸಿದರು.[೯] ಇವುಗಳನ್ನು ಶೆಣೈ, ರಾಣೆ, ವೈದ್ಯ, ನಗರಕರ, ಬಡಿಗೇರ ಮತ್ತು ಭೋಸ್ಲೆ ಎಂಬ ಕಲಾವಿದರು ಚಿತ್ರಿಸಿದರು. ಅದೇ ರೀತಿ ಕಮಾನಿನ ಮೇಲೆ ಎಂಟು ಚಿತ್ರಗಳು ವಾಸ್ತುವಿನ್ಯಾಸ. ಸಂಗೀತ, ನೃತ್ಯ, ನಾಟಕ, ಕಾವ್ಯ ಮತ್ತು ಶಿಲ್ಪಕ್ಕೆ ಸಂಬಂಧಿಸಿದ್ದು. ಇದನ್ನು ಕ್ರಮವಾಗಿ ಹಾಲಭಾವಿ, ಅಹಿವಾಸಿ, ಮಿಣಜಗಿ, ಧೂಪೇಶವರಕರ, ಶೆಣೈ, ಕೊಲೆಕೊ, ಕಾಂಬಳಿ ಇವರು ಚಿತ್ರಿಸಿದರು". ಹೀಗೆ ಶಿಕ್ಷಕರು ವಿದ್ಯಾರ್ಥಿಗಳು ಕೂಡಿಯೇ ಕೆಲಸ ಮಾಡುತ್ತಿದ್ದುದರಿಂದ ವಿದ್ಯಾರ್ಥಿಗಳಿಗೂ ಒಂದು ರೀತಿಯ ಸ್ಫೂರ್ತಿ ಸಿಗುತ್ತಿತ್ತು.

೧೯ನೇ ಶತಮಾನದ ಕೊನೆಗೆ ಜರ್ಮನಿಯಿಂದ ಚಿತ್ರಕಲಾ ವಿದ್ಯಾಭ್ಯಾಸ ಮುಗಿಸಿ ಬಂದ ರಾಜಾ ರವಿವರ್ಮನು ಚಿತ್ರಿಸಿದ ಚಿತ್ರಗಳು ಮುಂಬಯಿಯ ಜೆ.ಜೆ. ಶಾಲೆಯ ವಿದ್ಯಾರ್ಥಿಗಳ ಮೇಲೆ ಅಷ್ಟೇ ಅಲ್ಲದೆ ಇಡೀ ಭಾರತದ ತುಂಬಾ ಕಲಾವಿದನಾಗಬೇಕೆಂಬ ಹಂಬಲವನ್ನು ಹೊಂದಿದಂಥ ಪ್ರತಿಯೊಬ್ಬರ ಮೇಲೆ ಪ್ರಭಾವ ಬೀರಿವೆ. ಈ ಪ್ರಭಾವದಿಂದ ಹಾಲಭಾವಿಯವರೇನು ಹೊರತಾಗಿಲ್ಲ. ಜರ್ಮನಿಯಿಂದ ಲಿಥೋಗ್ರಾಫ್‌ನಲ್ಲಿ

೯. ಡಾ.ಲಕ್ಷ್ಮೀ ದೇವಿ ಗವಾಯಿ, ಎಂ.ಎ.ಚೆಟ್ಟಿ ಜೀವನ ಹಾಗೂ ಕಲಾಕೃತಿಗಳು, ಪುಟ ೬೧

ಅಚ್ಚಾಗಿ ಬಂದ ಅನೇಕ ವರ್ಣಛಾಯೆಯನ್ನು ಹೊಂದಿದ ಬೇಕಾದ ಅಳತೆಯಲ್ಲಿ ಸಿಗುವ ಚಿತ್ರಗಳು ಪೇಟೆಗೆ ಮಾರಲು ಬಂದಾಗ ಜನರು ಇದರಿಂದ ಆಕರ್ಷಿತರಾದರು. ವಿದ್ಯಾರ್ಥಿಗಳೂ ಕೂಡಾ ಆ ನೈಜ ಚಿತ್ರಣ ಅವುಗಳ ಸಂಯೋಜನೆ. ವರ್ಣ ಇವರ ಮೇಲೆ ಬಹಳ ಪ್ರಭಾವ ಬೀರಿತು. ರೊಮ್ಯಾಂಟಿಕ್ ಶೈಲಿಯನ್ನು ಹೊಂದಿದ ಈ ಚಿತ್ರಗಳಿಗೆ ವಾಣಿಜ್ಯೋದ್ಯಮ ನಗರಿಯಾದ ಮುಂಬಯಿ ಬಹಳಷ್ಟು ಮನಸೋತಿತು.[೧೦]

ಆಗಿನ ದಿನಮಾನಗಳಲ್ಲಿ ಹೊರದೇಶದ ಕಲಾಕೃತಿಗಳ ಬಗ್ಗೆಯಾಗಲಿ, ನಮ್ಮ ದೇಶದ ಇತರ ಪ್ರದೇಶಗಳ ಕಲಾಕೃತಿಗಳನ್ನಾಗಲಿ ಯಾವುದೇ ಕಲಾಕೃತಿಗಳ ಛಾಯಾಚಿತ್ರ ಹೊಂದಿದ ಪುಸ್ತಕಗಳಿರಲಿಲ್ಲ. ಹೀಗಾಗಿ ವಿದ್ಯಾರ್ಥಿಗಳಿಗೆ ಆ ಕ್ಷೇತ್ರ ಸೀಮಿತವಾಗಿತ್ತು. ಬಹಳ ಎಂದರೆ ಮ್ಯಾಕ್‌ಮಿಲನ್ ಮತ್ತು ಲೊಂಗಮನ್-ಗ್ರೀನ್‌ರ ಪ್ರಸ್ತಕಗಳಲ್ಲಿ ಮಾತ್ರ ಕೆಲವು ನೋಡಲು ಸಿಗುತ್ತಿದ್ದವು. ಇನ್ನು ಆಗ ಕಲಾಪ್ರದರ್ಶನಗಳಲ್ಲಿ ಹೆಚ್ಚಾಗಿ ನಿಸರ್ಗ ಚಿತ್ರಗಳು ಇರುತ್ತಿದ್ದವು. ಜಲ ಹಾಗೂ ತೈಲವರ್ಣಗಳಿಂದ ಮಾಡಿರುತ್ತಿದ್ದರು. ಇದರಿಂದ ಅಲ್ಲಿಯೇ ಇರುವ ಕಲಾವಿದರಿಗೆ ತಮ್ಮನ್ನು ಗುರುತಿಸಿಕೊಳ್ಳಲು ಇದೊಂದು ಒಳ್ಳೆಯ ಅವಕಾಶ ಸಿಕ್ಕಿತು. ಜನರಿಂದ ಮೆಚ್ಚುಗೆ ಬಹುಮಾನಗಳನ್ನೂ ಹಣವನ್ನೂ ಪಡೆಯತೊಡಗಿದರು. ಅದರಲ್ಲಿಯೂ ಅದೇ ತಾನೆ ಬೆಳೆಯುತ್ತಿರುವ ಕಲಾವಿದ್ಯಾರ್ಥಿಗಳಿಗೂ ಈ ಪ್ರದರ್ಶನಗಳು ಬಹಳ ಲಾಭ ತಂದುಕೊಟ್ಟವು. ಈ ಪ್ರದರ್ಶನಗಳು ಕಲಾಶಾಲೆಯ ಮಕ್ಕಳ ಮೇಲೂ ಬಹಳ ಪ್ರಭಾವ ಬೀರಿದವು.

೧೮೮೮ರಲ್ಲಿ ಪ್ರಾರಂಭವಾದ ಮುಂಬಯಿ ಆರ್ಟ್ ಸೊಸೈಟಿಯು ಅಸಂಖ್ಯಾತ ಕಲಾವಿದರನ್ನು ಅವರ ಪ್ರದರ್ಶನದ ಮೂಲಕ ಮೊಟ್ಟ ಮೊದಲಿಗೆ ಬೆಳಕಿಗೆ ತಂದಿರುವ ಸಂಸ್ಥೆ. ರಾವ್ ಬಹದ್ದೂರ ಧುರಂಧರ ಅವರು ೧೮೯೫ರಲ್ಲಿ ತಮ್ಮ ಕಲಾಕೃತಿಗೆ ಮೊದಲ ಚಿನ್ನದ ಪದಕ ಪಡೆದರು. ನಂತರ ೧೮೯೬ರಲ್ಲಿ ರಾವ್‌ಬಹದ್ದೂರ ಮಹಾತ್ರೆಯವರಿಗೆ ದೊರೆಯಿತು. ಇದರಿಂದ ಹಳೆಯ ಪದ್ಧತಿಯ ಹಾದಿಯಲ್ಲೆ ಕಲಾಭ್ಯಾಸ ಮಾಡಿದ ಜೆ.ಜೆ.ಕಲಾಶಾಲೆಯ ವಿದ್ಯಾರ್ಥಿಗಳಿಗೂ ಅಲ್ಲಿ ನಡೆಯುವ ಕಲಾಪ್ರದರ್ಶನದಲ್ಲಿ ಭಾಗವಹಿಸಲು ಅವಕಾಶ ಕಲ್ಪಿಸಿದಂತಾಯಿತು. ಇಂತಹ ಅವಕಾಶ ಹಾಲಭಾವಿಯವರಿಗೂ ಒದಗಿ ಬಂದಿತು. ವರ್ಗಗಳಿಲ್ಲದ ವೇಳೆಯಲ್ಲಿ ಬೇರೆ ಬೇರೆ ಚಿತ್ರಗಳನ್ನು ಹಾಲಭಾವಿಯವರು ರಚಿಸುತ್ತಿದ್ದರು. "ಹೀಗೆ ಒಂದು ಸಾರಿ ಸ್ಕೂಲ್ ಆಫ್ ಆರ್ಟ್‌ದ ತೋಟದಲ್ಲಿದ್ದ ಗಿಡದ ಬೊಡ್ಡೆಯ ಪೇಂಟಿಂಗ್ ಮಾಡಿದೇನು. ಶನಿವಾರ ಹಾಗೂ ರವಿವಾರ ಮತ್ತು ವೇಳೆ ಸಿಕ್ಕಾಗಲೆಲ್ಲ ಮೂರು ನಾಲ್ಕು ಘಂಟೆ ಕುಳಿತು ಪೇಂಟಿಂಗ್ ಮಾಡುತ್ತಿದ್ದೆ. ಆ ಚಿತ್ರವನ್ನು ಬಾಂಬೆ ಆರ್ಟ್ ಸೊಸೈಟಿ ಪ್ರದರ್ಶನಕ್ಕೆ ಕಳಿಸಿದೆ. ಆ ಕಾಲದಲ್ಲಿ ಕಲಾ ಪ್ರದರ್ಶನ ನೋಡಲು ದೊಡ್ಡ ದೊಡ್ಡ ಶ್ರೀಮಂತರು, ಸಂಸ್ಥಾನಿಕರು, ನವಾಬರು ಬರುತ್ತಿದ್ದರು. ಪ್ರದರ್ಶನ ಪ್ರಥಮ ದಿನವೇ ಎಲ್ಲರ ಗಮನ ಸೆಳೆದಿತ್ತು. ನಾನು ತೆಗೆದ ಗಿಡದ ಬೊಡ್ಡೆಯ ಚಿತ್ರವನ್ನು ನಮ್ಮ ಪ್ರಿನ್ಸಿಪಾಲರು ಗ್ಲಾಡ್‌ಸನ್ ಸಲೋಮನ್ ಯಾರಾದರೂ ಸಂಸ್ಥಾನಿಕರು ನೋಡಿದರೆ ಬಿಡುವುದಿಲ್ಲವೆಂದು ತಿಳಿದು ಪ್ರದರ್ಶನ ಪ್ರಾರಂಭವಾಗುವುದಕ್ಕಿಂತ ಮೊದಲೇ ಮಾರಾಟವಾಗಿದೆ ಎಂದು ಕೆಂಪು ಲೇಬಲ್ ಹಚ್ಚಿಬಿಟ್ಟಿದ್ದರು. ಅದನ್ನು ಸಂಸ್ಥೆಯ ಮ್ಯೂಸಿಯಂಗಾಗಿ ಕೂಡಲೇ ಖರೀದಿಸಿದರು." ಎಂದು ಹಾಲಭಾವಿಯವರು ಹೇಳುತ್ತಾರೆ.[೧೧]

ಹೀಗೆ ಮೊದಲಿನಿಂದಲೂ ಕಲಾ ಚಟುವಟಿಕೆಗಳು ನಡೆಯುತ್ತಾ ಬಂದಿದ್ದವು. ಆದರೆ ಗ್ಲ್ಯಾಡ್‌ಸನ್ ಸಲೋಮನ್ನರು ಅಧಿಕಾರಕ್ಕೆ ಬಂದನಂತರ ಕಲಾವಾತಾವರಣದಲ್ಲಿ ಇನ್ನಷ್ಟು ಉತ್ತೇಜನಕಾರಿ ಗಾಳಿ ಬೀಸಿತು. ಇವರ ಬರೀ ಚಿತ್ರಕಲಾವಿದರಾಗಿರದೇ ಸಾಹಿತಿಗಳೂ ಆಗಿದ್ದರು ಹಾಗೂ ಇಲ್ಲಿಯ ಅಧ್ಯಾಪಕರ, ವಿದ್ಯಾರ್ಥಿಗಳ ಕಲೆಯ ಸಾಧನೆಯನ್ನು ಮೆಚ್ಚುಕೊಂಡು ಇನ್ನಷ್ಟು ಸುಧಾರಿಸಲು ಪ್ರಯತ್ನ ಮಾಡಿದರು. ಅಲ್ಲದೇ ಅಧ್ಯಾಪಕ ವರ್ಗ, ವಿದ್ಯಾರ್ಥಿಗಳಿಗೆ ಸಾಕಷ್ಟು ಸೌಲಭ್ಯ ಒದಗಿಸಿಕೊಟ್ಟು ಹೊಸ ಹೊಸ ಕೃತಿಗಳಿಂದ ಕಲಾ ಪ್ರದರ್ಶನ ಮಾಡಲು ಉತ್ತೇಜನ ನೀಡಿದರು. ಜೆ.ಜೆ.ಕಲಾ ಶಾಲೆಯ ಮಧ್ಯದ ಕೋಣೆಯಲ್ಲಿ ದೊಡ್ಡದಾದ ಭಿತ್ತಿ ಚಿತ್ರ

---

೧೦. ಡಾ.ಲಕ್ಷ್ಮೀ ದೇವಿ ಗವಾಯಿ, ಎಂ.ಎ.ಚೆಟ್ಟಿ ಜೀವನ ಹಾಗೂ ಕಲಾಕೃತಿಗಳು, ಪುಟ ೬೨
೧೧. -ಅದೇ- ಪುಟ ೬೨

ಮಾಡಿಸಿದರು. ೩೩೧೨ ಚೌರಸ್ ಅಡಿಗಳ ಅಳತೆಯ The recrowining of Indian Art ಎಂಬ ವಿಷಯದಿಂದ ಕೂಡಿದೆ. ಅಲ್ಲದೇ ಅನೇಕ ಭಾಗಗಳು ಹೊಸ ಶೈಲಿಯ ಅಲಂಕಾರಿಕ ಚಿತ್ರಗಳಿಂದ ತುಂಬಿತು. ಇಲ್ಲಿಯೂ ಚಪ್ಪಟೆಯ ಬಣ್ಣ ಹಾಗೂ ರೇಖೆಗಳಿಂದ ಕೂಡಿದ ಹೊರಮೈ ಭಾರತೀಯ ಶೈಲಿಯಂತೆಯೇ ಇತ್ತು.[೧೨] ಸಲೋಮನ್‌ರು ಅಜಂತಾ ಎಲ್ಲೋರಾ ಹಾಗೂ ಎಲಿಫೆಂಟಾ ಗುಹೆಗಳಿಗೆ ಭೇಟಿ ನೀಡಿ, ಭಾರತೀಯ ಚಿತ್ರಕಲೆಯ ಪರಂಪರೆ ಭವ್ಯತೆಯ ಬಗ್ಗೆ ಕಿರುಹೊತ್ತಿಗೆ ಬರೆದಿದ್ದಾರೆ. ಅಲ್ಲದೆ ವಿದ್ಯಾರ್ಥಿಗಳಿಗೂ ಭಾರತೀಯ ಶೈಲಿಯನ್ನು ಅಳವಡಿಸಿಕೊಳ್ಳಲು ಉತ್ತೇಜನ ನೀಡುತ್ತಿದ್ದರು ಎಂದು ತಿಳಿದು ಬರುತ್ತದೆ.

ಶಿಕ್ಷಕರು ಹಾಗೂ ವಿದ್ಯಾರ್ಥಿಗಳಿಂದ ಅನೇಕ ಕಡೆಗಳಲ್ಲಿ ಚಿತ್ರಕಲಾ ಪ್ರದರ್ಶನ ನಡೆದವು. ಮುಂಬಯಿ, ಪೂನಾ, ದೆಹಲಿ ಮತ್ತು ಸಿಮ್ಲಾ ಇತರ ಅನೇಕ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಜರುಗಿದವು. ಅಲ್ಲದೇ ಅನೇಕ ಬಹುಮಾನಗಳನ್ನು ಪಡೆಯುತ್ತಿದ್ದರು. ಸಲೋಮನ್‌ರು ಬ್ರಿಟೀಷ ಕೊಲೋನಿಯಲ್ಸ್‌ನಿಂದ ಕೆಲವು ಕಲಾಕೃತಿಗಳನ್ನು ಭಾರತಕ್ಕೆ ತರಿಸಿ ಪ್ರಿನ್ಸ್ ಆಫ್ ವೇಲ್ಸ್ ಮ್ಯೂಸಿಯಮ್‌ನಲ್ಲಿ ಪ್ರದರ್ಶನ ಮಾಡಿದರು. ಇದರಲ್ಲಿ ೫೦ ಕ್ಕೂ ಹೆಚ್ಚು ಕಲಾವಿದರ ಕೃತಿಗಳು ಪ್ರದರ್ಶಿಸಲ್ಪಟ್ಟಿದ್ದವು. ಹೀಗೆ ಭಾರತೀಯ ಕಲಾವಿದರ ಅದು ಜೆ.ಜೆ.ಕಲಾ ಶಾಲೆಯಲ್ಲಿ ಅಭ್ಯಸಿಸಿದ ಕಲಾಕಾರರ ಕೃತಿಗಳನ್ನು ಲಂಡನ್ನಿನಲ್ಲಿ ಪ್ರದರ್ಶಿಸಿದರು. ಈ ರೀತಿಯ ಕಲಾಪ್ರದರ್ಶನಗಳ ವಿನಿಮಯದಿಂದ ಇಲ್ಲಿನ ಕಲಾವಿದರು ಯುರೋಪ್ ದೇಶಗಳಿಗೆ ಹೋಗಲು ಅವಕಾಶ ಸಿಗುತ್ತದೆಂಬ ಆಶಾವಾದವನ್ನು ಹೊಂದಿದ್ದರು. ಅದರಂತೆ ಅನೇಕರು ಹೋಗಿಯೂ ಬಂದರು. ಭಾರತೀಯ ಚಿತ್ರಗಳು ಲಂಡನ್ನಿಗೆ ಕಳಿಸುವ ಮೊದಲು ಸಲೋಮನ್‌ರು ಚಿತ್ರ ಸಹಿತ ಒಂದು ಪುಸ್ತಕ ಹೊರತಂದರು. ಭಾರತೀಯ ಚಿತ್ರಕಲೆ ಕಲಾವಿದರೆಂದರೆ ಸಲೋಮನ್‌ರಿಗೆ ತುಂಬಾ ಪ್ರೀತಿ ಮತ್ತು ಆದರ.

ಈ ಎಲ್ಲ ಚಟುವಟಿಕೆಗಳ ಜೊತೆಗೆ ಶಾಲೆಯ ವಾರ್ಷಿಕ ಸ್ನೇಹ ಸಮ್ಮೇಳನವನ್ನು ಆಚರಿಸುತ್ತಿದ್ದರು. ವಿದ್ಯಾರ್ಥಿಗಳ ಕಲಾಕೃತಿಗಳ ಪ್ರದರ್ಶನ. ಬಹುಮಾನ ವಿತರಣೆ ಮನರಂಜನೆ ಎಲ್ಲವೂ ಏರ್ಪಡಿಸಲಾಗುತ್ತಿತ್ತು. ೧೯೧೭ರಲ್ಲಿ ಆದ ಸ್ನೇಹ ಸಮ್ಮೇಳನದ ಬಗ್ಗೆ ಧುರಂಧರ ಅವರು ಈ ರೀತಿ ಹೇಳುತ್ತಾರೆ. ಈ ವರ್ಷ ಸ್ನೇಹ ಸಮ್ಮೇಳನದ ಕೆಲಸ ನನ್ನ ಕೈಯಲ್ಲಿತ್ತು. ಮುಂಬಯಿಯ ಎಲ್ಲ ಕಲಾಕಾರರಿಗೆ ಹಳೆಯ ವಿದ್ಯಾರ್ಥಿಗಳಿಗೆ ಎಲ್ಲರಿಗೂ ಆಮಂತ್ರಣ ಕಳಿಸಲಾಗಿತ್ತು. ಅಲ್ಲದೇ ಪೂನಾ, ನಾಸಿಕ್, ಸಾತಾರಾ, ಅಹ್ಮದಾಬಾದ ಎಲ್ಲಾ ಕಡೆಯಿಂದ ಚಿತ್ರಕಲಾ ಶಿಕ್ಷಕರು ಬಂದಿದ್ದರು ಎಂದು ಆ ಸಂದರ್ಭದ ನೆನಪು ಮಾಡಿಕೊಟ್ಟಿದ್ದಾರೆ.

ಇಂದಿಗೂ ಸಹಿತ ಮುಂಬಯಿ ಆರ್ಟ್ ಸೊಸೈಟಿ ಕಲಾಕೃತಿಗಳ ಪ್ರದರ್ಶನಗಳನ್ನು ಮಾಡುತ್ತಲೇ ಇದೆ. ೧೯೮೮ನೇ ಇಸ್ವಿಯಲ್ಲಿ ಮುಂಬಯಿ ಆರ್ಟ್ ಸೊಸೈಟಿಯು ಶತಾಬ್ದಿ ವರ್ಷ ಎಂದು ಆಚರಿಸಲ್ಪಟ್ಟಿತು. ಆ ವರ್ಷ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತ್ತು. ಅದರಲ್ಲಿ ಎಲ್ಲಕ್ಕಿಂತ ಮಹತ್ವದ್ದೆನ್ನಿಸಬಹುದಾದ ಪ್ರದರ್ಶನವೊಂದು ಏರ್ಪಡಿಸಿತ್ತು. ಕಳೆದ ಒಂದು ನೂರು ವರ್ಷಗಳಲ್ಲಿನ ಭಾರತೀಯ ದೃಶ್ಯಕಲೆಯ ಇತಿಹಾಸವನ್ನೇ ಹಿಂತಿರುಗಿಸಿ ತೋರಿಸುವ ಕೆಲಸವನ್ನು ಮುಂಬಯಿ ಆರ್ಟ್ ಸೊಸೈಟಿಯು ಈ ಪ್ರದರ್ಶನದಲ್ಲಿ ಮಾಡಿತು.[೧೩]

ಆದರೆ ಈ ಪ್ರದರ್ಶನದಲ್ಲಿ ಅನೇಕ ಹೊರರಾಜ್ಯದ ಕಲಾಕಾರರನ್ನು ಮರೆತಿದ್ದಾರೆ. ಯಾಕೆಂದರೆ ಪ್ರದರ್ಶನಕಾರರಿಗೆ ಸರಿಯಾಗಿ ಸಿಗದೇ ಇರುವ ಮಾಹಿತಿ. ವಿಷಯದ ತಿಳುಳಿಕೆಯ ಕೊರತೆ ಇಲ್ಲಿ ಕಂಡುಬರುತ್ತದೆ. ಈ ಪ್ರದರ್ಶನದ ವಿಷಯ ಚೆಟ್ಟಿಯವರಿಗೆ ಅವರ ಗೆಳೆಯರಾದ ನೀಲಕಂಠ ಅವರು ಸೊಲ್ಲಾಪೂರದಿಂದ ೨೪-೧-೧೯೮೮ರಂದು ಬರೆದ ಪತ್ರ: ಮುಂಬಯಿ ಆರ್ಟ್ ಸೊಸೈಟಿಯ ಶತಾಬ್ದಿಯನ್ನು ಮಾಡುವವರು ಇರುವರು. ತಮ್ಮ ಹೆಸರು. ಶ್ರಿ ದಂಡಾವತಿಮಠ, ಶ್ರೀ ಡಿ.ಜಿ.ಬಡಿಗೇರ: ಎಸ್.ಎಮ್. ಪಂಡಿತರ, ಹಾಲಭಾವಿ, ಎಸ್.ಪಿ.ಅಕ್ಕಿ ಅವರೆಲ್ಲರ ಹೆಸರುಗಳು ಅಥವಾ ಕರ್ನಾಟಕದಲ್ಲಿ ನೆಲೆಸಿರುವ ಇನ್ನೂ ಅನೇಕ ಚಿತ್ರಕಲಾವಿದರ ಹೆಸರುಗಳು ಲೋಕಪ್ರಭಾದಲ್ಲಿ ಮುದ್ದಾಮ ಬರೆದಿಲ್ಲವೆಂಬುದು ತಿಳಿದು ದುಃಖ ಮತ್ತು ವಿಷಾದವಾಯಿತು. ತಮ್ಮ ಸಂಗಡ

೧೨. ಡಾ.ಲಕ್ಷ್ಮೀ ದೇವಿ ಗವಾಯಿ, ಎಂ.ಎ.ಚೆಟ್ಟಿ ಜೀವನ ಹಾಗೂ ಕಲಾಕೃತಿಗಳು, ಪುಟ ೬೩
೧೩. -ಅದೇ- ಪುಟ ೬೪

ಕಲಿತ, ಆಚರೇಕರ, ಗುರ್ಜರ, ಹಳದಣಕರ ಇವರ ಹೆಸರುಗಳು ಇರುವವು. ಎಂದು ಪತ್ರದಲ್ಲಿ ಪ್ರಸ್ತಾಪಿಸಿದ್ದಾರೆ. ಕಳೆದು ಒಂದನೂರು ವರ್ಷಗಳಲ್ಲಿ ಯಾವ ಯಾವ ಚಿತ್ರಕಾರರಿಗೆ ಪಾರಿತೋಷಕಗಳು ದೊರಕಿದವು ಎಂಬುದನ್ನು ಇಂದು ಹೇಳಲಿಕ್ಕೆ ಯಾರಿಗೂ ಶಕ್ಯವಿಲ್ಲ. ಇದೊಂದು ಅತೀ ಲಜ್ಜಾಸ್ಪದ ಸಂಗತಿಯಾಗಿದೆ.[೧೪] ಎಂದು ಸತೀಶ ನಾಯಕ ಲೇಖನದಲ್ಲಿ ಉಲ್ಲೇಖಿಸಿದ್ದಾರೆ.

ಆ ಪ್ರದರ್ಶನದಲ್ಲಿ ಭಾಗವಹಿಸುತ್ತಿರುವವರು ಎಂದು ತಮ್ಮ ಲೇಖನದಲ್ಲಿ ಸತೀಶ ನಾಯಕ ಅವರು ಕೆಲವರು ಕಲಾಕಾರರ ಹೆಸರುಗಳನ್ನು ಸೂಚಿಸಿದ್ದಾರೆ. ಪೆಸ್ತೋಂಜಿ ಬೊಮನ್‌ಜಿ. ರಾವ್‌ಬಹಾದೂರ ಧುರಂಧರ, ಪಿತಾವಾಲಾ, ಜೆ.ಪಿ.ಗಂಗೂಲಿ, ರಾಜಾರವಿವರ್ಮ, ಪಂ.ಸಾತವಳೇಕರ, ಜಿ.ಕೆ.ಮ್ಹಾತ್ರೆ, ಸೆಸಿಲ್ ಬರ್ನ್ಸ, ಮುಲ್ಲರ್, ಮಾಧವರಾವ್ ಜೋಶಿ, ಮಾಳಿ, ತ್ರಿಂದಾದ, ನಿಕೋಲಸ್ ರೋರಿಕ್, ಬೋಸ್ಲೆ ಮಾಸ್ತರ, ಶರದಾ ಉಕಿಲ, ಠಾಕೂರ ಸಿಂಗ್, ಹಳದಣಕರ ತಂದೆ-ಮಗ, ಆದಾಲಾಲ್ ರೆಹಮಾನ್, ಪಾನವಲಕರ, ನಗರಕರ, ಚುಡೇಕರ, ಸರದೇಸಾಯಿ, ತಾಸಕರ ಮಾಸ್ತರ, ಆಚರೇಕರ, ಗ್ಲಾಡ್‌ಸ್ಟನ್ ಸಲೋಮನ್, ಕರಮರಕರ, ಆಗಾಸಕರ, ತಾಲೀಮ, ಪರಾಂಡೆಕರ, ಗೋರೇಗಾಂವಕರ, ಸೋಲೇಗಾಂವಕರ, ಅಹಿವಾಸೀ, ಮರಿಯಾ ಆ್ಯಂಡರ್ಸನ್, ಮ್ಯಾಕ್‌ಮಿಲನ್, ರಸಿಕಲಾಲ ಪಾರೇಖ, ಚಿಮುಲಕರ, ಧೋಪೇಶ್ವರಕರ, ಅಮೃತಾ ಶೇರಗಿಲ್, ಭಾಂದಿವಡೇಕರ, ವ್ಹಿ.ಜಿ.ಕುಲಕರ್ಣಿ, ಮುಝುಮದಾರ, ಲಾಂಗ್ ಹ್ಯಾಮರ್, ಗುರ್ಜರ, ಪಿ.ಟಿ.ರೆಡ್ಡಿ, ಬೇಂದ್ರೆ, ವಾಯ್.ಕೆ. ಶುಕ್ಲಾ, ಸೂಜಾ, ಭಗತ್, ಜೋಗ್, ಬಾಬೂರಾವ್ ಪೇಂಟರ್ ಹೆಬ್ಬಾರ್, ಡಿ.ಜೆ.ಜೋಶಿ, ರಝಾ, ಪಳಶೀಕರ, ಹಜರನೀಸ, ಆರಾ.ಹುಸೇನ ಚಾವಡಾ, ಆಲಮೇಲಕರ, ಮೋಹನ ಸಾಮಂತ, ಲಕ್ಷ್ಮಣ ಪೈ. ದ್ಯಾವಿಯೇರ್ ವಾಲಾ. ವಾಯ್ ಬಾ. ಪಾನಸರೆ, ಗಾಡೇ, ಪೋಚಖನವಾಲಾ ಧೋಂಡ್, ರವೀಂದ್ರ ಮೇಸ್ತ್ರಿ, ಬಾಬೂರಾವ್ ಸಡವೇಲಕರ, ಸಾಬವಾಲಾ ಹರಕಿಶನ್‌ಲಾಲ್, ಶಾಂತಿದವೆ, ಬಿ.ಪ್ರಭಾ, ರಾಘವ್ ಕನೇರಿಯಾ, ಗಾಯತೊಂಡೆ, ಬಿ.ವಿಠ್ಠಲ, ಆವರಡೇ ಸಂತೋಷ, ಹರೀಷ ರಾವುತ್, ಸೋನಾವಡೇಕರ್, ಕೋಲತೆ ಕಲಾವಿದರ ಕಲಾಕೃತಿಗಳು ಈ ಪ್ರದರ್ಶನದಲ್ಲಿ ಪ್ರದರ್ಶಿಸಲ್ಪಟ್ಟಿವೆ.[೧೫]

**ಆಗಿನ ಕಾಲದ ಪಠ್ಯಕ್ರಮ**

ಲಂಡನ್ನಿನ ರಾಯಲ್ ಅಕಾಡೆಮಿ ಆಫ್ ಆರ್ಟ ಸಂಸ್ಥೆಯ ಮಾದರಿಯಲ್ಲಿ ಬ್ರಿಟೀಷರು ಸ್ಥಾಪನೆ ಮಾಡಿದ ಭಾರತ ಏಕೈಕ ಕಲಾ ಶಾಲೆ ಎಂದರೆ ಮುಂಬಯಿಯ ಸರ್. ಜೆ.ಜೆ. ಸ್ಕೂಲ್ ಆರ್ಟ್ ಆ್ಯಂಡ್ ಕ್ರಾಫ್ಟ್. ಕಲಾವಿದನಾಗುವ ಆಪೇಕ್ಷೆಯುಳ್ಳ ಪ್ರತಿಯೊಬ್ಬರಿಗೂ ಜೆ.ಜೆ.ಸ್ಕೂಲ್ ಮಹತ್ತರವಾದ ಆಕರ್ಷಣೆ. ಈ ಶಾಲೆಯ ಸ್ಥಾಪನೆಗೆ ಮೊದಲೇ ಭಾರತೀಯ ಕಲಾಸಂಪ್ರದಾಯ ಅಧೋಗತಿಯ ಹಂತ ತಲುಪಿತ್ತು. ಈಸ್ಟ್ ಇಂಡಿಯಾ ಕಂಪನಿ ಬರುವುದಕ್ಕೂ ಮೊದಲು ನಮ್ಮಲ್ಲಿ ರೂಢಿಯಲ್ಲಿದ್ದ-ಜೈನ, ರಜಪೂತ ಮತ್ತು ಮೊಗಲ್ ಕಲೆಯಲ್ಲಿ ತನ್ನ ಪರಮೋಚ್ಛ ಸಿದ್ಧಿಯನ್ನು ಪಡೆದಿದ್ದ ಭಾರತೀಯ ಕಲೆಯ ಪರಂಪರೆ ಕಡಿದು ಹೋಗಿತ್ತು. ಎಂಬ ಅಭಿಪ್ರಾಯ ಸೂಕ್ತವಾಗಿದೆ.[೧೬]

೧೮೫೭ ಮಾರ್ಚ್ ೨ ರಂದು ಈ ಕಲಾ ಶಾಲೆ ಅಸ್ತಿತ್ವಕ್ಕೆ ಬಂದಿತು. ಇದಕ್ಕೆ ಮೂಲ ಕಾರಣಿ ಪುರುಷ ಪಾರ್ಸಿ ಮನೆತನದಲ್ಲಿ ಹುಟ್ಟಿದ ವಿಶಾಲ ಹೃದಯಿಯಾದ ಜೀಜಾಭಾಯಿ ಜೆಮಶೇಡಜಿ, ಲಂಡನ್‌ದಲ್ಲಿ ಕ್ರಿ.ಶ.೧೮೫೧ರಲ್ಲಿ ಅಂತರ್‌ರಾಷ್ಟ್ರೀಯ ಚಿತ್ರಕಲಾ ಪ್ರದರ್ಶನ ನಡೆದಿತ್ತು. ಅದನ್ನು ನೋಡಲು ಹೋದಾಗ ಅವರ ಮನಸ್ಸಿನಲ್ಲಿಯೂ ಸಹ ಇಂತಹ ಕಲಾ ಶಾಲೆಯನ್ನು ನಮ್ಮ ಭಾರತದಲ್ಲೂ ಪ್ರಾರಂಭಿಸಬೇಕೆಂಬ ಇಚ್ಛೆ ಉಂಟಾಯಿತು. ಎಂದು ಶ್ರೀ ಧುರಂಧರ ಅವರು ಹೇಳಿದ್ದಾರೆ. ಅಂತೆಯೇ ರೂಪಾ ಭೇಡ್ ಅವರ ಪ್ರಕಾರ ಇನ್ನೊಂದು ವಿಷಯವೆಂದರೆ ನೇಕಾರ ಮನೆತನದಲ್ಲಿ ಹುಟ್ಟಿದ ಜೀಜಾಬಾಯಿ ಜೆಮಶೇಡಜಿ ಅವರು ಹಡಗುಗಳಿಗೆ

---

೧೪. ಡಾ.ಲಕ್ಷ್ಮೀ ದೇವಿ ಗವಾಯಿ, ಎಂ.ವಿ.ಚೆಟ್ಟಿ ಜೀವನ ಹಾಗೂ ಕಲಾಕೃತಿಗಳು, ಪುಟ ೬೪

೧೫. -ಅದೇ- ಪುಟ ೬೫

೧೬. -ಅದೇ- ಪುಟ ೪೪

ನೆಲಹಾಸಿಗೆಗಳನ್ನು ತಯಾರಿಸಿ ಕೊಡುತ್ತಿದ್ದರಲ್ಲದೆ. ಹೊರದೇಶಗಳಿಗೂ ವ್ಯಾಪಾರಕ್ಕಾಗಿ ಹೋಗುತ್ತಿದ್ದರರು. ಆಗ ಚೈನಾ ದೇಶದ ಕರಕುಶಲ ಕಲೆಯಿಂದ ಪ್ರಭಾವಿತರಾಗಿ ಅವರ ಮನಸ್ಸಿನಲ್ಲಿ ಹಾಗೆ ಅದು ರೂಪ ತಾಳುತ್ತ ಬಂದಿತು. ಅದರ ಪರಿಣಾಮವೆ ಸರ್ ಜೆ.ಜೆ. ಕಲಾಶಾಲೆಯ ಸ್ಥಾಪನೆ.

೧೮೫೬ರಲ್ಲಿ ಮಿ. ಪೈಥಾನ ಎಂಬ ಕಲಾವಿದ ಲಂಡನ್ನಿನ ಕಲಾಪ್ರದರ್ಶನದಲ್ಲಿ ಜೆ.ಜೆ. ಅವರಿಗೆ ಭೇಟಿಯಾದ. ಆತನು ಅತ್ಯಂತ ಪ್ರಭಾವಶಾಲಿಯಾದ ಕಲಾವಿದನಾಗಿದ್ದ. ಅವನನ್ನೇ ಮೊದಲು ಭಾರತಕ್ಕೆ ಕರೆಸಿ ಕಲಾಶಾಲೆ ಪ್ರಾರಂಭಿಸಬೇಕೆಂದುಕೊಂಡು ಸರಕಾರಕ್ಕೆ ಮನವಿ ಸಲ್ಲಿಸಿದರು. ಅಲ್ಲದೆ ಉದಾರಿಗಳಾದ ಇವರು ನೂರುಸಾವಿರ ರೂಪಾಯಿಗಳನ್ನು ಸರಕಾರಕ್ಕೆ ನೀಡಿ ಕಲಾಶಾಲೆ ಪ್ರಾರಂಭಿಸಬೇಕೆಂದುಕೊಂಡು ಸರಕಾರಕ್ಕೆ ಮನವಿ ಸಲ್ಲಿಸಿದರು. ಆಗ ಮುಂಬಯಿ ಸರಕಾರ ಕಮೀಟಿಯನ್ನು ರಚಿಸಲು ನಿರ್ಧರಿಸಿತು. ಇಂತಹದೇ ಶಾಲೆಯನ್ನು ಈಗಾಗಲೇ ಡಾ. ಹಂಟರ್ ಮದ್ರಾಸಿನಲ್ಲಿ ಪ್ರಾರಂಭಿಸಿದ್ದರು. ಅವರ ಸಲಹೆ ಮೇರೆಗೆ ಕಮೀಟಿಯನ್ನು ರಚಿಸಲಾಯಿತು. ಈ ರೀತಿ ಸರಕಾರದ ಆದೇಶದ ಮೇರೆಗೆ ಪ್ರಾರಂಭವಾದ ಸರ್ ಜೆಮಶೇಡಜಿ ಜೀಜಾಭಾಯಿ ಕಲಾ ಶಾಲೆಯಲ್ಲಿ ಮೊಟ್ಟಮೊದಲು ಎಲಿಮೆಂಟರಿ ಡ್ರಾಯಿಂಗ್ ಮತ್ತು ಡಿಜೈನ್‌ನಿಂದ ವರ್ಗ ಪ್ರಾರಂಭಿಸಿದರು. ಆಗ ಮಿ. ಜೇಮ್ಸ್ ಪೈಥಾನ ಅದರ ಮೇಲ್ವಿಚಾರಕರಾಗಿದ್ದು. ಮೊದಲು ಕೇವಲ ೨೫ ವಿದ್ಯಾರ್ಥಿಗಳಿಂದ ವರ್ಗ ಪ್ರಾರಂಭ ಮಾಡಬೇಕೆಂದುಕೊಂಡಿದ್ದರು. ಆದರೆ ೪೯ ವಿದ್ಯಾರ್ಥಿಗಳು ಅರ್ಜಿ ಸಲ್ಲಿಸಿದ್ದರು. ರೇಖಾಚಿತ್ರಗಳನ್ನು ಚಿತ್ರಿಸಿ ಆನಂತರ ಅದನ್ನು ಸಂಪೂರ್ಣವಾಗಿ ನೆರಳು – ಬೆಳಕಿನ ಛಾಯೆಯಿಂದ ಚಿತ್ರಿಸಿದಾಗಲೇ ಮುಂದಿನ ವಸ್ತುವನ್ನು ಚಿತ್ರಿಸಲು ಅವಕಾಶ ದೊರೆಯುತ್ತಿತ್ತು. ಈ ರೀತಿ ಮೂರು ತ್ರೈಮಾಸಿಕ ಪರೀಕ್ಷೆಗೆ ಗುರಿಪಡಿಸುತ್ತಿದ್ದರು. ನಾಲ್ಕನೆಯದರಲ್ಲೂ ಪಾಸಾಗದಿದ್ದರೆ ಆ ವಿದ್ಯಾರ್ಥಿ ಚಿತ್ರಕಲೆ ಕಲಿಯಲು ಅರ್ಹನಲ್ಲ ಎಂದು ಹೊರಹಾಕುತ್ತಿದ್ದರು. ಸರಿಯಾಗಿ ಪ್ರಮಾಣಬದ್ಧವಾದ ನಿಖರವಾದ ರೇಖಾಚಿತ್ರ ರಚಿಸಲು ಸರಳ ಹಾಗೂ ಸುಂದರವಾಗಿ ರಚಿಸಲು ಬರುವಂತೆ ನಿಸರ್ಗದ ಎಲ್ಲ ರೀತಿಯ ಜಾಮಿತಿಕ ಆಕೃತಿಗಳ ಮೂಲಕ ಕೆಲವು ಸಾರಿ ತ್ರಿಕೋನ, ವರ್ತುಳ, ಚೌಕ ಹೀಗೆ ಅಭ್ಯಾಸ ಮಾಡಿಸುತ್ತಿದ್ದರು. ಅಲ್ಲದೆ ನಿಸರ್ಗದ ಹೊಸ ವಾತಾವರಣಕ್ಕೆ ವಿದ್ಯಾರ್ಥಿಗಳನ್ನು ಕರೆದುಕೊಂಡು ಹೋಗಿ ನಿಖರವಾದ ರೇಖೆಗಳನ್ನು ಅರ್ಥೈಸಿಕೊಳ್ಳಲು ಬರುವಂತೆ ಅಭ್ಯಾಸ ನೀಡುತ್ತಿದ್ದರು. ಪ್ರಾರಂಭಿಕ ದೃಗ್ದರ್ಶನ ಈ ಎಲ್ಲಾ ವಿಷಯಗಳನ್ನ ಆರ್ಥೈಸಿಕೊಳ್ಳಲು ಸಾಧ್ಯ. ಈ ರೀತಿಯ ಅಭ್ಯಾಸ ಹಾಲಭಾವಿಯವರು ಕಲಿಯುವ ಸಂದರ್ಭದಲ್ಲಿಯೂ ಇತ್ತು. ಯಾಕೆಂದರೆ ಈ ರೀತಿ ಅಭ್ಯಾಸ ಕ್ರಮದಲ್ಲಿ ಕಲಿತಂತಹ ಧುರಂಧರ ಚೂಡೇಕರ ಮತ್ತು ತಾಸ್ಕರ್ ಇವರ ಗುರುಗಳಾಗಿದ್ದರು. ಅಲ್ಲಿ ಗುರುಗಳು ಬಹಳ ಶಿಸ್ತು ಹಾಗೂ ಕಠೀಣ ಸ್ವಭಾವದವರಾಗಿದ್ದರಂತೆ. ಮೊದಲನೇ ವರ್ಗಕ್ಕೆ ಮೊದಲು ಒಂದು ಕಬ್ಬಿಣದ ಗುಂಡು ಎದುರಿಗೆ ಇಟ್ಟು ಚಿತ್ರಿಸಲಿಕ್ಕೆ ಹೇಳುತ್ತಿದ್ದರು. ಅದೊಂದೇ ಚಿತ್ರ ೬ ತಿಂಗಳುಗಳವರೆಗೂ ಮಾಡಿಸುತ್ತಿದ್ದರಂತೆ. ಕಾರಣ ಪೂರ್ತಿ ಮನನವಾಗಬೇಕೆಂಬುದೇ ಇದರ ತಾತ್ಪರ್ಯವಾಗಿತ್ತು.[೧೬]

ಎರಡನೇ ವರ್ಷಕ್ಕೆ ಸರಳಗೈ ಚಿತ್ರ, ಜ್ಯಾಮಿತಿಕ, ಮೂರ್ತಿ ಚಿತ್ರ ಮತ್ತು ದೃಗ್‌ದರ್ಶನ ಇವುಗಳ ಪೂರ್ವಸಿದ್ಧತೆಯ ಚಿತ್ರವನ್ನು ಮೊದಲು ಮಾಡಿ ತೋರಿಸಬೇಕು. ಅವು ಮಾನ್ಯತೆ ಪಡೆದರೆ ಮಾತ್ರ ಅವುಗಳನ್ನು ಪೂರ್ತಿಅಳತೆಯಲ್ಲಿ ಚಿತ್ರಿಸುವುದು. ಅದರಲ್ಲಿ ಯಾವುದಾದರೂ ಒಂದು ಮಾನ್ಯತೆ ಪಡೆಯದಿದ್ದರೆ ಅವರು ಮರುವರ್ಷ ಮತ್ತೆ ಪರೀಕ್ಷೆಗೆ ಕುಳಿತುಕೊಳ್ಳಬೇಕು. ಈ ಪದ್ಧತಿ ಥರ್ಡ್ ಗ್ರೇಡ್ ಪರೀಕ್ಷೆಗೂ ಇತ್ತು.

ಮೂರನೇ ಪರೀಕ್ಷೆಯಲ್ಲಿ ಛಾಯಾಚಿತ್ರ ಇದ್ದಿಲು ಕಡ್ಡಿಯಿಂದ ಚಿತ್ರ ರಚಿಸಿ ಪುಡಿಬಣ್ಣಗಳಿಂದ ಛಾಯಾಪ್ರಕಾಶನವನ್ನು ವ್ಯಕ್ತಗೊಳಿಸುವುದು. ಮಣ್ಣಿನ ಶಿಲ್ಪ ಇರಿಸಿ ಮಸಿಕಡ್ಡಿಯಲ್ಲಿ ಹೊರರೇಖೆ ಹಾಕಿ ಪುಡಿಬಣ್ಣಗಳನ್ನು ಹಚ್ಚಿ, ಶಿಲ್ಪದ ಉಬ್ಬು-ತಗ್ಗುಗಳನ್ನು ಗುರುತಿಸುವದು. ಛಾಯಾಚಿತ್ರದಂತೆ ನೆರಳು-ಬೆಳಕುಗಳನ್ನು ತೋರಿಸುವ ಮಾದರಿ ಮತ್ತು (ಅರ್ಥೊಗ್ರಾಫಿಕ್ ಪ್ರೊಜೆಕ್ಷನ್) ಇಷ್ಟು ವಿಷಯಗಳು ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿಗಳಿಗೆ

೧೬. ಡಾ.ಲಕ್ಷ್ಮೀ ದೇವಿ ಗವಾಯಿ, ಎಂ.ಎ.ಚೆಟ್ಟಿ ಜೀವನ ಹಾಗೂ ಕಲಾಕೃತಿಗಳು, ಪುಟ ೪೫

ಪ್ರವೇಶ ನೀಡಬೇಕೆಂದರೆ ಬೇರೆ ಕಡೆಯಿಂದ ಬರುವ ವಿದ್ಯಾರ್ಥಿಗಳಿಗೆ ಇರಲು ವಸತಿಯ ತೊಂದರೆ ಇತ್ತು. ಇಂತಹ ಪರಿಸ್ಥಿತಿಯನ್ನು ಕಲಾ ಶಾಲೆ ಮೊದಲಿಗೆ ಎದುರಿಸಿತು.[೧೮]

ಒಂದೇ ಚಿತ್ರಕಲಾ ವಿಭಾಗದಿಂದ ಪ್ರಾರಂಭವಾದ ಈ ಸಂಸ್ಥೆ ಮುಂದೆ ಬೇರೆ ಬೇರೆ ಉಪಶಾಖೆಗಳನ್ನು ಹೊಂದಿ ಬೆಳೆಯಿತು. ಅವುಗಳೆಂದರೆ ಮಾಡಲಿಂಗ್ ವಿಭಾಗ, ವಾಸ್ತುಶಿಲ್ಪ, ಶಿಲ್ಪ ವಿಭಾಗ ಟೀಚರ ಟ್ರೇನಿಂಗ್ ವಿಭಾಗ, ಆರ್ಟ್ ಆ್ಯಂಡ್ ಕ್ರಾಫ್ಟ್ ಆಫ್ ಇಂಡಿಯಾ ಮತ್ತು ಲಾರ್ಡ್‌ರೇ ವರ್ಕಶಾಪ್ ಅಲ್ಲದೆ ಅಪ್ಲೈಡ್ ಆರ್ಟ್ (ವಾಣಿಜ್ಯ ಕಲೆ) ವಿಭಾಗ.

ಮೊದಲಿಗೆ ಮೂರು ಗ್ರೇಡ್ ಪರೀಕ್ಷೆಗಳ ಕೋರ್ಸ್ ಇದಾಗಿತ್ತು. ಪ್ರವೇಶ ಪಡೆದ ತಕ್ಷಣ ಇವರಿಗಿರುವ ಪಾಠವೆಂದರೆ ಒಂದು ಘನಕೃತಿಯನ್ನು ಮುಂದೆ ಇರಿಸುತ್ತಿದ್ದರು. ಅದನ್ನು ಏನಿಲ್ಲ ಎಂದರೂ ೩೫ ಬಾರಿ ಚಿತ್ರಿಸುತ್ತಿದ್ದೆವು. ಯಾರು ಈ ಮೂರು ಗ್ರೇಡ್ ಪರೀಕ್ಷೆಗಳನ್ನು ಪಾಸಾಗುವರೋ ಅವರು ಎಂಥಾ ಚಿತ್ರವನ್ನೂ ಸೃಷ್ಟಿಸುವ ಸಾಮರ್ಥ್ಯವನ್ನು ಹೊಂದಿರುತ್ತಿದ್ದರಲ್ಲದೇ ಅವರು ಜೆ.ಜೆ.ಕಲಾಶಾಲೆಯ ಬೇರೆ ಬೇರೆ ವಿಭಾಗಗಳಿಗೆ ಹೋಗಲು ಯೋಗ್ಯ ಎಂದು ತಿಳಿಯುತ್ತಿದ್ದರು.

ಚಿತ್ರಕಲೆ ಅಭ್ಯಾಸದ ರೇಖಾಚಿತ್ರದೊಂದಿಗೆ ವಿಶೇಷ ಅಭ್ಯಾಸವನ್ನು ಸೇರಿಸಿದರಲ್ಲದೆ ಅಲ್ಲಿ ಇನ್ನೂ ಕಲಿಯುತ್ತಿದ್ದ ಶ್ರೀ ಧುರಂಧರ ಅವರಿಗೆ ಒಂದು ವರ್ಷದವರೆಗೆ ಮಾಡೆಲಿಂಗ್ ವಿಭಾಗದಲ್ಲಿ ಕೆಲಸ ಮಾಡಲು ಹೇಳಿದರಲ್ಲದೇ ಭಾವಚಿತ್ರ, ದೃಗ್‌ದರ್ಶನ ಚಿತ್ರ ಇವುಗಳನ್ನು ಸಹ ಕಲಿಸಬೇಕಾಗುತ್ತಿತ್ತು. ಇದರಿಂದ ಅಲ್ಲಿಯ ವಿದ್ಯಾರ್ಥಿಗಳು ಎಲ್ಲಾ ವಿಷಯಗಳಲ್ಲಿಯೂ ಜ್ಞಾನವನ್ನು ಪಡೆಯಲು ಅವಕಾಶ ಸಿಕ್ಕಹಾಗೆ ಆಗುತ್ತಿತ್ತು. ಅತ್ಯಂತ ಹೆಸರುವಾಸಿಯಾದ ಶಿಲ್ಪಕಾರ ಶ್ರೀ ಆರ್.ಬಿ.ಗಣಪತರಾವ್ ಮತ್ತು ಅವರ ಮಗ ಶ್ಯಾಮರಾವ್ ಮೂಲತಃ ಚಿತ್ರಕಲಾ ವಿಭಾಗದ ವಿದ್ಯಾರ್ಥಿಗಳಾಗಿದ್ದರು. ಹೀಗಾಗಿ ಮೊದಲು ಪ್ರಾರಂಭಿಸಿದ ಕೋರ್ಸ್‌ಗಳಿಂದ ವಿದ್ಯಾರ್ಥಿಗಳು ಪ್ರತಿಭಾವಂತರಾಗಿ ಬೆಳೆಯುತ್ತಿದ್ದರು. ಅಲಂಕಾರ ಚಿತ್ರಗಳನ್ನು ಉದ್ಯೋಗಿಕ ದೃಷ್ಟಿಯಿಂದ ಚಿತ್ರಿಸುತ್ತಿದ್ದರಿಂದ ಮಿ.ಟೇರಿ ಹಾಗೂ ಮಿ.ಗ್ರಿಫಿತ್ಸ್‌ರವರ ಕಾಲದಿಂದಲೂ ಚಿತ್ರಕಲಾ ಮತ್ತು ಮಾಡೆಲಿಂಗ್‌ದ ವಿದ್ಯಾರ್ಥಿಗಳಿಗೆ ಮನುಷ್ಯ ಹಾಗೂ ಪ್ರಾಣಿಗಳ ಪ್ರಮಾಣಬದ್ಧವಾದ ಚಿತ್ರರಚಿಸಲು ಹೇಳಿಕೊಡುತ್ತಿದ್ದರು. ಇದರಿಂದ ಅಲಂಕಾರಿಕ ಚಿತ್ರ ರಚಿಸಲು ಬಹಳ ಸಹಾಯವಾಗುತ್ತಿತ್ತು. ಆಗ ಲೈಫ್ ಮಾಡೆಲ್ ಅಂದರೆ ಜೀವಂತ ಮನುಷ್ಯರನ್ನು ಎದುರಿಗೆ ಕೂಡಿಸಿ ಎಲ್ಲ ಕೋನಗಳಿಂದಲೂ ಚಿತ್ರ ರಚಿಸಲು ಹೇಳುತ್ತಿದ್ದರು. ಅಲ್ಲದೆ ಟೈಮ್‌ಡ್ರಾಯಿಂಗ್ ಇಷ್ಟೇ ವೇಳೆಯಲ್ಲಿ ಚಿತ್ರ ರಚಿಸಬೇಕೆಂಬ ಅಭ್ಯಾಸವೂ ಇತ್ತು. ಈಗಲೂ ಇದೆ.[೧೯]

೧೯೧೫ ರಲ್ಲಿ ಇನ್ಸಪೆಕ್ಟರ್ ಡ್ರಾಯಿಂಗ್ ಮತ್ತು ಕ್ರಾಫ್ಟ್‌ವರ್ಕ್ಸ್ ಎಂಬ ಪರೀಕ್ಷೆ ಜಾರಿಗೆ ತಂದರು. ಈ ಚಿತ್ರಕಲೆಯ ಅಡ್ವಾನ್ಸ್ ಕೋರ್ಸ್ ಎಲಿಮೆಂಟರಿ ಹಾಗೂ ಇಂಟರ್‌ಮಿಡಿಯೆಟ್ ಪರೀಕ್ಷೆಗಳಿಗೆ ಸಂಬಂಧಿಸಿದಂತೆಯೇ ಇತ್ತು. ಮೊದಲಿಗೆ ಸ್ಥಿರ ವಸ್ತುಚಿತ್ರಣ ಎಲೆಯ ಟೊಂಗೆ ಚಿತ್ರ ಎಲೆಗಳಿಂದ ನಕ್ಷೆ ತಯಾರಿಸುವುದು. ಮೂರ್ತಿಯ ಚಿತ್ರ ಹಾಗೂ ನೆಲಗಳಿಗೆ ಸಂಬಂಧಿಸಿದಂತೆ ನಕ್ಷೆಗಳು. ನಂತರದಲ್ಲಿ ನಿಸರ್ಗ ಚಿತ್ರಗಳು ಪಠ್ಯಕ್ರಮದಲ್ಲಿರದೆ ವರ್ಣಗಳ ಅಭ್ಯಾಸಕ್ಕೋಸ್ಕರವಾಗಿ ಹೇಳಿಕೊಡುತ್ತಿದ್ದರು. ಅನಾಟಮಿ ಹಾಗೂ ಎಲಿಮೆಂಟರಿ ಪರ್‌ಸ್ಪೆಕ್ಟಿವ್ ಜೊತೆಗೆ ಸಂಯೋಜನಾ ಹಾಗೂ ಭಿತ್ತಿಚಿತ್ರಗಳನ್ನು ಅಭ್ಯಾಸ ಮಾಡಿಸುತ್ತಿದ್ದರು ಎಂಬ ಅಂಶ ಕಂಡುಬರುತ್ತದೆ.

೧೯೧೬ರಲ್ಲಿ ಆರ್ಟ್ ಮಾಸ್ಟರ ಪರೀಕ್ಷೆ ಪ್ರಾರಂಭವಾಯಿತು. ಆಗ ಯಾರು ಶಿಕ್ಷಕರಾಗಿದ್ದರೋ ಅವರು ಪುನಃ ಈ ಪರೀಕ್ಷೆಗೆ ಕುಳಿತು ಪಾಸಾಗಬೇಕಾಯಿತು. ಈ ಪರೀಕ್ಷೆಯಲ್ಲಿ ಅಂಕ ಕೊಡುವ ರೀತಿಯೇ ಬೇರೆ ಆಗಿತ್ತು. ಗ್ರೇಡ್‌ಗಳನ್ನು ಕೊಡುತ್ತಿದ್ದರು. A:Excellent,B:Good, F:Fair, D:Pass, E:Fail, F:Indiffernt ಇವು ಪರೀಕ್ಷೆಯಲ್ಲಿ ಕೊಡುವ ಗ್ರೇಡ್‌ಗಳು. ಈ ರೀತಿ ಬಹಳ ಕಠಿಣ ತರಹದ ಅಭ್ಯಾಸ ಕ್ರಮವಾಗಿತ್ತು.

---

೧೮. ಡಾ.ಲಕ್ಷ್ಮೀ ದೇವಿ ಗವಾಯಿ, ಎಂ.ಎ.ಚೆಟ್ಟಿ ಜೀವನ ಹಾಗೂ ಕಲಾಕೃತಿಗಳು, ಪುಟ ೪೭

೧೯. -ಅದೇ- ಪುಟ ೪೭

ಬರ್ನಿಸ್ ಅವರ ಆಡಳಿತದ ಮಧ್ಯಂತರದಲ್ಲಿ ಆರ್.ಡಬ್ಲ್ಯೂ. ರೋಬೋಥೋಮ್ ಅವರು ಸ್ವಲ್ಪ ಕಾಲ ಡೈರೆಕ್ಟರ್ ಆಗಿ ಕೆಲಸ ಮಾಡಿದರು. ಅದು ೧೯೦೭ರಲ್ಲಿ. ಇವರೂ ರಾಯಲ್ ಸ್ಕೂಲ್ ಆಫ್ ಆರ್ಟ್‌ನಿಂದ ಶಿಕ್ಷಣ ಪಡೆದಿದ್ದರಿಂದ ಆ ಪದ್ಧತಿಯಲ್ಲೇ ನಾಲ್ಕು ವರ್ಷದ ಪಠ್ಯಕ್ರಮ ಮಾಡಿದರು. ಇದೇ ಪಠ್ಯ ಕ್ರಮ ಮುಂದುವರಿಯಿತು. ಇದನ್ನೇ ಡಿಪ್ಲೋಮಾ ಕೋರ್ಸ್ ಎಂದು ಮಾಡಿ ಇದು ಬ್ಯಾಚುಲರ್ಸ್ ಡಿಗ್ರಿ ಎಂದು ೧೯೨೨ರಲ್ಲಿ ವಿಶ್ವವಿದ್ಯಾಲಯದಿಂದ ಪರಿಗಣಿಸಲ್ಪಟ್ಟಿತು.[೨೦]

ನಂತರ ಕ್ಯಾಪ್ಟನ್ ಗ್ಲ್ಯಾಡ್‌ಸನ್ ಸಲೋಮನ್‌ರು ೧೯೧೯ರಲ್ಲಿ ಬಂದರು. ಇವರು ಸಹಿತ ರಾಯಲ್ ಅಕಾಡೆಮಿ ವಿದ್ಯಾರ್ಥಿಯಾಗಿದ್ದರು. ಆಗ ಮೊದಲ ವಿಶ್ವ ಮಹಾಯುದ್ಧದ ನಂತರದ ದಿನಗಳು ಫ್ರೆಂಚ್ ಮೂವ್‌ಮೆಂಟ್ ಮುಂತಾದವುಗಳ ಪ್ರಭಾವ ಕಲೆಯ ಮೇಲೆ ಆಗಿತ್ತು. ಆಗ ಕಲೆಯ ಕ್ಷೇತ್ರದಲ್ಲಿ ನವಯುಗ ಪ್ರಾರಂಭವಾಗಿತ್ತು. ಆದರೆ ಸಲೋಮನ್‌ರು ರಾಯಲ್ ಅಕಾಡೆಮಿಯ ವಿದ್ಯಾರ್ಥಿಯಾಗಿದ್ದರಿಂದ ಕ್ಲಾಸಿಕಲ್ (ಪಾರಂಪರಿಕ) ಅಭ್ಯಾಸಕ್ಕೆ ಬಹಳ ಮಹತ್ವ ನೀಡಿದ್ದರು. ಇವರ ಆಡಳಿತದಲ್ಲೇ ಡಿ.ವಿ.ಹಾಲಭಾವಿ ವಿದ್ಯಾರ್ಥಿಯಾಗಿ ಆ ಕಲಾಶಾಲೆಯನ್ನು ಪ್ರವೇಶಿಸಿದ್ದರಿಂದ ಅದೇ ಅಭ್ಯಾಸ ಕ್ರಮ ಕರಗತವಾಯಿತಲ್ಲದೆ, ಅದೇ ರೀತಿಯ ಕಲಾವಾತಾವರಣ ಅವರ ಮೇಲೆ ಪ್ರಭಾವ ಬೀರಿದವು. ಅವರು ಪಾರಂಪರಿಕ ಕಲಾವಿದರಾಗಿ ಬೆಳೆದರು. ಇವರ ಸಮಕಾಲೀನ ಎಲ್ಲಾ ಕಲಾವಿದರು ಅದೇ ಜಾಡಿನಲ್ಲಿ ಬೆಳೆದರು. ಅವರೆಂದರೆ ದಂಡಾವತಿಮಠ ಮಿಣಜಗಿ ಎಂ.ಎ. ಚೆಟ್ಟಿ, ಕಮಡೊಳ್ಳಿ, ಕಾರಡಗಿ, ಬಡಿಗೇರ, ವೈ.ಸುಬ್ರಹ್ಮಣ್ಯರಾಜು, ಎನ್.ಹನುಮಯ್ಯ ಮುಂತಾದವರು ಬೆಳೆದು ಬಂದರು.[೨೧]

ಗ್ಲ್ಯಾಡ್‌ಸನ ಸಲೋಮನ್‌ರು ಬಂದನಂತರ ನಾಲ್ಕನೇ ವರ್ಷದ ತರಗತಿಗಳಿಗೆ ನಗ್ನ ಆಕೃತಿಗಳನ್ನು ಚಿತ್ರಿಸುವ ಪದ್ಧತಿ ಪಠ್ಯ ಕ್ರಮದಲ್ಲಿ ಸೇರಿಸಿದರು. ಇದರಿಂದ ವಿದ್ಯಾರ್ಥಿಗಳು ಇನ್ನೂ ಚೆನ್ನಾಗಿ ಮನುಷ್ಯಾಕೃತಿಗಳನ್ನು ಚಿತ್ರಿಸುವಲ್ಲಿ ಪರಿಣಿತರಾದರು. ಇದರಿಂದ ಮನುಷ್ಯಾಕೃತಿಗಳನ್ನೊಳಗೊಂಡ ಸಂಯೋಜನ ಚಿತ್ರಗಳನ್ನೂ ಸಹ ಚೆನ್ನಾಗಿ ಚಿತ್ರಿಸತೊಡಗಿದರು. ಮ್ಯೂರಲ್ ಚಿತ್ರದ ಅಭ್ಯಾಸದ ಸಲುವಾಗಿ ಅಜಂತಾಕ್ಕೆ ವಿದ್ಯಾರ್ಥಿಗಳು ಮೊದಲು ಹೋಗುತ್ತಿದ್ದರು. ಈ ಮೊದಲು ಮ್ಯೂರಲ್(ಭಿತ್ತಿ ಚಿತ್ರ) ಕಲಿಸುವ ಅವಧಿ ಇರಲಿಲ್ಲ. ಕ್ಯಾಪ್ಟನ್ ಸಲೋಮನ್‌ರಿಗೆ ಇದೇ ರೀತಿಯ ಚಿತ್ರಕಲೆಯಲ್ಲಿ ಪ್ರಶಸ್ತಿ ಸಿಕ್ಕ ಕಾರಣ ಜೆ.ಜೆ.ಶಾಲೆಗೆ ಬಂದ ಕೂಡಲೇ ಈ ಭಿತ್ತಿಚಿತ್ರ ರಚಿಸುವ ಒಂದು ಅವಧಿಯನ್ನು ಸೇರಿಸಿದರು. ಎಂದು ಧುರಂಧರ ಅವರು ಉಲ್ಲೇಖಿಸಿದ್ದಾರೆ.

ಜೆರಾರ್ಡ್ ಅವರು ನವ್ಯತೆಯ ಪರಿಚಯವನ್ನು ಮಾಡಿಕೊಡಲು ತಮ್ಮ ಕೃತಿಗಳದೇ ಒಂದು ಪ್ರದರ್ಶನವನ್ನು ಮಾಡಿದರು. ಇದರಿಂದ ವಿದ್ಯಾರ್ಥಿಗಳು ಹೊಸ ಪ್ರಯೋಗದತ್ತ ಗಮನ ಸೆಳೆಯಲು ಸಾಧ್ಯವಾಯಿತು.ನಂತರ ನವ್ಯಕಲೆ ಅಭ್ಯಾಸ ಪ್ರಾರಂಭವಾದ ತಕ್ಷಣ ಚಿತ್ರಕಲಾ ಅಭ್ಯಾಸದಲ್ಲಿ ಬೇರೆ ಬೇರೆ ವಿಷಯಗಳನ್ನು ಪ್ರಧಾನ ವಿಷಯವಾಗಿ ಸ್ವಿಕರಿಸುವ ಪದ್ಧತಿ ಜಾರಿಗೆ ಬಂದಿತು.[೨೨]

**ಜೆ.ಜೆ. ಸ್ಕೂಲ್ ಅಧ್ಯಾಪಕ ವರ್ಗ**

ಸರ್.ಜೆ.ಜೆ. ಕಲಾ ಶಾಲೆಯಲ್ಲಿಯ ಅಧ್ಯಾಪಕ ವರ್ಗ ಬ್ರಿಟಿಷ್ ಡೈರೆಕ್ಟರ್‌ರ ಕೆಳಗೆ ಪಳಗಿದಂಥವರು. ಆದ್ದರಿಂದ ಅದೇ ಶಿಸ್ತು, ಠೀವಿ, ಕಾರ್ಯನಿಷ್ಠೆ, ಎಲ್ಲಾ ಕಾರ್ಯಗಳು ನಿಯಮಬದ್ಧವಾಗಿ ನಡೆಯಬೇಕು ಮತ್ತು ಅಹಿತಕರ ವಾತಾವರಣವನ್ನು ಎಂದೂ ಸಹಿಸುವಂಥವರಲ್ಲ. ಸರ್.ಜೆ.ಜೆ.ಸ್ಕೂಲ್ ಆಫ್ ಆರ್ಟ್‌ನ ನಿಯಮಕ್ಕನುಗುಣವಾಗಿ ಮನಸ್ಸುಗೊಟ್ಟು ಅಭ್ಯಾಸ ಮಾಡುತ್ತಿದ್ದರು. ನಮಗೆ ಕಲಿಸತಕ್ಕ ಗುರುವರ್ಯರು ಸಹ ಅಂಥವರೇ. ದಪ್ಪಮೀಸೆಯ ಅವರ ಗಂಭೀರ ಮುಖಮುದ್ರೆಯನ್ನು ನೆನಸಿದರೆ ಸಾಕು. ಭಯ ಭಕ್ತಿಯಿಂದ

---

೨೦. ಡಾ.ಲಕ್ಷ್ಮೀ ದೇವಿ ಗವಾಯಿ, ಎಂ.ಎ.ಚೆಟ್ಟಿ ಜೀವನ ಹಾಗೂ ಕಲಾಕೃತಿಗಳು, ಪುಟ ೪೮
೨೧. -ಅದೇ- ಪುಟ ೪೯
೨೨. -ಅದೇ- ಪುಟ ೫೦

ಮಸ್ತಕವು ತಾನೇ ತಾನಾಗಿ ಬಾಗುತ್ತಿತ್ತು. ಅಂದಿನ ಆ ಗುರುಗಳ ಪೋಷಾಕು ಸಹಿತ ಅಷ್ಟೇ ಠೀವಿಯಿಂದ ಇರುತ್ತಿತ್ತು. ಶ್ರೀ ಧುರಂಧರರ ಥ್ರೀ-ಪೀಸ್ ಸೂಟು, ಕನ್ನಡಕ, ಕನ್ನಡಕದ ರೇಶಿಮೆದಾರ, ಶ್ರೀ ತಾಸ್ಕರರವರ ತಲೆಯ ಮೇಲೆ ಜರತಾರಿಯ ಸುಂದರ ಕೆಂಪು ಪಗಡಿ. ನೀಳವಾದ ಕಪ್ಪುಕೋಟು ಉತ್ತರೀಯ ಮತ್ತು ಧೋತರ. ಆಗ ಬ್ರಿಟೀಷ ವ್ಯಕ್ತಿ ಕ್ಯಾಪ್ಟನ್ ಗ್ಲ್ಯಾಡ್‌ಸನ್ ಸಲೋಮನ್‌ರವರು ಪ್ರಿನ್ಸಿಪಾಲರಾಗಿದ್ದರು. ಅವರು ಕೂಡಾ ಯುರೋಪಿಯನ್ ರೀತಿಯ ಶಿಸ್ತಿನ ಪೋಷಾಕು ಧರಿಸುತ್ತಿದ್ದರು. ಪೊಷಾಕಿನ ಜೊತೆ ಅವರ ವ್ಯಕ್ತಿತ್ವ ಕೂಡಾ ಅಷ್ಟೇ ಶಿಸ್ತಿನದಾಗಿತ್ತು. ಶಿಸ್ತಿನ ಪೋಷಾಕು ಮೇಲೆ ದಪ್ಪ ಮೀಸೆ ವಯಸ್ಸು ಮೀರಿದರೂ ಕಪ್ಪು ಕಾಣುವಂಥ ಮೀಸೆ.[೨೩] ಹೀಗೆ ಪ್ರತಿಯೊಂದು ದಿಸೆಯಲ್ಲಿ ಆಗಿನ ಅಧ್ಯಾಪಕರ ಭಾವ ಕಾಣುತ್ತೇವೆ.

ಜೆ.ಜೆ.ಕಲಾಶಾಲೆಯ ಮೊದಲ ಶಿಕ್ಷಕ ವರ್ಗ ಈ ರೀತಿ ಇತ್ತು. ಶ್ರೀ ಕೃಷ್ಣರಾವ್ ಭಾಯಿ, ಶ್ರೀಗಣಪತರಾವ್ ಕೇದಾರಿ, ಶ್ರೀ ಸೊಕರ ಬಾಪೂಜಿ, ಶ್ರೀ ಮಂತ್ರಿ ಗೋಮ್ಸ್ ಹಾಗೂ ಶ್ರೀ ಪಾವಂಜೆ ಮುಂತಾದವರು. ರಾವಬಹದ್ದೂರ್ ದುರಂಧರ ಅವರು ತಮ್ಮ ಗುರುಗಳು ಕ್ಲಾಸಿನಲ್ಲಿ ಕಲಿಸುತ್ತಿದ್ದ ಬಗ್ಗೆ ಬಹಳ ಚೆನ್ನಾಗಿ ಹೇಳಿದ್ದಾರೆ. ಈ ವಿಷಯಗಳನ್ನು ಇಲ್ಲಿ ಪ್ರಸ್ತುತಪಡಿಸಲು ಕಾರಣ ಅದೇ ಪರಂಪರೆ ಜೆ.ಜೆ. ಶಾಲೆಯಲ್ಲಿ ಮುಂದುವರಿದದ್ದನ್ನು ನೋಡುತ್ತೇವೆ. ಅದಕ್ಕೆ ಆ ಪರಂಪರೆಯ ವಿದ್ಯಾರ್ಥಿಗಳ ಅನಿಸಿಕೆಗಳನ್ನು ಇಲ್ಲಿ ಹೇಳುವುದು ಪ್ರಸ್ತುತ ಅಂತ ನನ್ನ ಅನಿಸಿಕೆ.

ಶ್ರೀ ಗಣಪತರಾವ್ ಕೇದಾರಿ ಅವರು ಮೊಟ್ಟ ಮೊದಲು ಹೆಡ್‌ಮಾಸ್ತರ ಆಗಿದ್ದರು. ಅವರು ನೆರಳು ಬೆಳಕನ್ನು ಚಿತ್ರಿಸುವಲ್ಲಿ ಬಹಳ ಪರಿಣತಿಯನ್ನು ಹೊಂದಿದ್ದರು. ಅಲ್ಲದೇ ಪುಡಿ ಬಣ್ಣದ ರೇಖಾಚಿತ್ರವನ್ನು ರಚಿಸುವಲ್ಲಿ ಸಾಧನೆ ಗೈದಿದ್ದರು. ಅವರು ಎಲೆಯ ಹೊರರೇಖೆಯನ್ನು ಬಹಳ ಜಾಣ್ಮೆಯಿಂದ ಚಿತ್ರಿಸುತ್ತಿದ್ದರು. ಅಲ್ಲದೇ ಸಮೀಪ ದೂರಗಳನ್ನು ಅತ್ಯಂತ ತೆಳು ರೇಖೆಯಿಂದ ವರ್ಗೀಕರಿಸಿ ತೋರಿಸುತ್ತಿದ್ದರು. ಅಲ್ಲದೇ ಅವರು ದೃಗ್‌ದರ್ಶನದಲ್ಲಿ ಬರುವ ಪ್ರತಿಯೊಂದು ರೇಖೆಯನ್ನು ಕರಿ ಹಲಗೆಯ ಮೇಲೆ ಚಿತ್ರಿಸಿ ವಿವರಿಸುತ್ತಿದ್ದರು. ಶ್ರೀಮಂತ್ರಿ ಗುರುಗಳು ಚಿತ್ರವನ್ನು ಸರಿಪಡಿಸಲು ಬಂದಾಗ ಅತ್ಯಂತ ಕಠೋರವಾಗಿ ನಡೆದುಕೊಳ್ಳುತ್ತಿದ್ದರು. ಹಾಗೆ ಚಿತ್ರದಲ್ಲಿ ತಪ್ಪುಗಳನ್ನು ಎತ್ತಿ ತೋರಿಸುವಾಗ ವಿದ್ಯಾರ್ಥಿಗಳಿಗೆ ರೀತಿ ಹೇಳುತ್ತಿದ್ದರು. ದಿ ಡ್ರಾಯಿಂಗ್ ಸ್ಟಿಂಕ್ಸ್ ಅಂದರೆ ಇದು ಕೆಟ್ಟಿದೆ. ಇದರಿಂದ ಬಹಳ ದುರ್ವಾಸನೆ ಬರುತ್ತಿದೆ ಎಂದು. ಇಲ್ಲದಿದ್ದರೆ ವ್ಯಂಗ್ಯವಾಗಿ ಬಹಳ ಚೆನ್ನಾಗಿ ಕಸದ ಬುಟ್ಟಿಗೆ ಹಾಕಬಹುದು ಎಂದು ಹೇಳುತ್ತಿದ್ದರು. ಹೀಗೆ ವಿದ್ಯಾರ್ಥಿಗಳು ಹೆದರಿ ಒಮ್ಮೆ ಮಾಡಿದ ತಪ್ಪನ್ನು ಮತ್ತೆಂದೂ ಮಾಡಿರಬಾರದು ಆ ರೀತಿ ತಿದ್ದಿ ಕಲಿಸುತ್ತಿದ್ದರು.[೨೪]

ಪ್ರಿನ್ಸಿಪಾಲ್‌ರಾಗಿದ್ದ ಗ್ರಿಫಿತ್ಸ್‌ರವರೇ ಜಲವರ್ಣದ ಚಿತ್ರಗಳನ್ನು ಕಲಿಸುತ್ತಿದ್ದರು. ಒಬ್ಬ ವಿದ್ಯಾರ್ಥಿಗೆ ಅದನ್ನು ಸರಿಪಡಿಸುತ್ತ ಹೇಳಿಕೊಡುತ್ತಿದ್ದರೆ ಉಳಿದ ವಿದ್ಯಾರ್ಥಿಗಳು ಸುತ್ತಲೂ ನಿಂತು ನೋಡುತ್ತಿದ್ದರು, ಚಿತ್ರ ಸರಿ ಇರದಿದ್ದರೆ ಬಹಳ ಸಿಟ್ಟಿಗೇಳುತ್ತಿದ್ದರು. ಪ್ರತಿ ಶುಕ್ರವಾರ ಮುಂಜಾನೆ ೧೦-೩೦ರ ವರೆಗೆ ವೇಳೆ ಹಚ್ಚಿ ಚಿತ್ರ ರಚಿಸುವುದು ಮಾಡಿಸುತ್ತಿದ್ದರು. ೩-೪ ಕಾಲ್ಪನಿಕ ಚಿತ್ರಗಳನ್ನು ಮಾಡಿಸುತ್ತಿದ್ದರು. ಸೋಮವಾರ ಈ ಚಿತ್ರಗಳ ಗುಣದೋಷಗಳನ್ನು ಬೋರ್ಡ್‌ಮೇಲೆ ಹಚ್ಚಿ ಹೇಳುತ್ತಿದ್ದರು. ಎಲ್ಲವೂ ನಿಯಮಬದ್ಧ ಅಭ್ಯಾಸಕ್ರಮವಾಗಿತ್ತು. ಮನುನಕಾ ಮೀ ರಾಗಾನಿ ಮಾರಲೊ, ತಮ್ಹಿ ರಾಗ್ ಮನುಕಾ ಅಂತ ಮರಾಠಿಯಲ್ಲಿ ಹೇಳಿ ಸಮಾಧಾನ ಪಡಿಸಿದರು. ಅಂದರೆ ಅಂದಿನ ಗುರುಗಳು ಚಿತ್ರಕಲೆ ಕಲಿಸುವುದರಲ್ಲಿ ಎಷ್ಟು ದಕ್ಷರಿದ್ದರೋ ಅಷ್ಟೇ ಕರುಣಾಮಯಿಗಳೂ ಆಗಿದ್ದರೆಂಬುದು ಈ ಪ್ರಸಂಗದಿಂದ ತಿಳಿದುಬರುತ್ತದೆ.

ರೇಖಾಚಿತ್ರಗಳ ಅಭ್ಯಾಸ ದಿನಾಲೂ ವಿದ್ಯಾರ್ಥಿಗಳು ಹೊರಗಡೆ ಹೋಗಿ ರೇಖಾಚಿತ್ರಗಳನ್ನು ಮಾಡಿಕೊಂಡು ಬರಲೇಬೇಕು. ಇದೊಂದು ಒಳ್ಳೆಯ ಹವ್ಯಾಸವಾಗಿತ್ತು. ಇದರಿಂದ ವಿದ್ಯಾರ್ಥಿಗಳು ಮನುಷ್ಯ ಚಿತ್ರಗಳಾಗಲೀ, ಪ್ರಾಣಿ ಚಿತ್ರಗಳನ್ನಾಗಲೀ ಅತ್ಯಂತ ಸರಳವಾಗಿ ಚಿತ್ರಿಸುತ್ತಿದ್ದರು. ಶಿಕ್ಷಕರು ಹೊರಗಡೆ ಹೋದಾಗ ಅಲ್ಲಿ ಯಾರಾದರೂ

೨೩. ಡಾ.ಲಕ್ಷ್ಮೀ ದೇವಿ ಗವಾಯಿ, ಎಂ.ಎ.ಚೆಟ್ಟಿ ಜೀವನ ಹಾಗೂ ಕಲಾಕೃತಿಗಳು, ಪುಟ ೫೨
೨೪. -ಅದೇ- ಪುಟ ೫೩

ವಿದ್ಯಾರ್ಥಿಗಳು ರೇಖಾಚಿತ್ರ ಮಾಡುತ್ತಿದ್ದರೆ ಅವರಿಗೆ ಸಲಹೆ ಸೂಚನೆಗಳನ್ನು ನೀಡುತ್ತಿದ್ದರು. ಅಷ್ಟೊಂದು ತಾಳ್ಮೆ ಮತ್ತು ಶಿಕ್ಷಣದ ಪ್ರೇಮ. ರೇಖಾಚಿತ್ರ ಬಿಡಿಸುತ್ತಾ ಕುಳಿತಾಗ ಅಲ್ಲಿಗೆ ವಾಯುವಿಹಾರಕ್ಕೆ ಬರುತ್ತಿದ್ದ ಪ್ರಿನ್ಸಿಪಲ್ ಗ್ರಿಫಿತ್ಸ್ ಹಿಂದಿನಿಂದ ಬಂದು ಶಹಭಾಷ್ ನೀಡಿ ಸ್ಕೆಚ್ ಪುಸ್ತಕ ತೆಗೆದುಕೊಂಡು ಇದೇ ರೀತಿ ಚಿತ್ರ ರಚಿಸಬೇಕೆಂದು ಹೇಳುತ್ತಿದ್ದರು. ಚಿತ್ರದಲ್ಲಿಯ ತಪ್ಪನ್ನು ತಿದ್ದಿ ಉಪದೇಶ ಮಾಡಿ ಮುಂದೆ ವಾಯುವಿಹಾರಕ್ಕೆ ಹೋಗುತ್ತಿದ್ದರು. ಹಾಲಭಾವಿಯವರು ಚಿತ್ರಕಲೆಯಲ್ಲಿ ಉತ್ಕೃಷ್ಟ ಸ್ಥಾನ ಗಳಿಸಿರುವ ಹಿನ್ನೆಲೆಯಲ್ಲಿ ಎರಡು ಮೂರು ಪೆಟ್ಟಿಗೆಗಳನ್ನು ತುಂಬಿದ ಸ್ಕೆಚ್ ಪುಸ್ತಕಗಳೇ ಸಾಕ್ಷಿ. ರೇಖಾಚಿತ್ರಗಳಿಗೆ ಬಹಳ ಮಹತ್ವ ಕೊಡುತ್ತಿದ್ದರು.[೨೫] ಹೊರ ವಲಯಗಳಿಗೆ ಹೋಗಿ ರೇಖಾಚಿತ್ರ ಬಿಡಿಸಲು ಹೇಳುತ್ತಿದ್ದರಲ್ಲದೆ ತಾವು ಸಹಿತ ನಮ್ಮ ಜೊತೆ ಚಿತ್ರ ರಚಿಸಿ ತೋರಿಸುತ್ತಿದ್ದರು. ಅಲ್ಲದೆ ಪ್ರತಿದಿನ ಇಷ್ಟು ರೇಖಾಚಿತ್ರಗಳನ್ನು ರಚಿಸಿಕೊಂಡು ತರಬೇಕು. ಇಲ್ಲದಿದ್ದರೆ ವರ್ಗದ ಹಾಜರಿಯನ್ನು ಕೊಡುತ್ತಿರಲಿಲ್ಲ. ಇಂತಹ ಶಿಸ್ತಿನ ಶಿಕ್ಷಣ ನೀಡುವಂಥ ಶಿಕ್ಷಕರು ಸರ್ ಜೆ.ಜೆ.ಕಲಾ ಶಾಲೆಯಲ್ಲಿದ್ದರು.

ಅಲ್ಲಿಯ ಅಧ್ಯಾಪಕ ವರ್ಗ ಅಷ್ಟೇ ಕಟ್ಟುನಿಟ್ಟಾಗಿ ಅಭ್ಯಾಸ ಕ್ರಮವನ್ನು ಜಾರಿಗೆ ತಂದಿದ್ದರು. ವಿದ್ಯಾರ್ಥಿ ಮೊದಲಿನ ಪಾಠವನ್ನು ಮುಗಿಸಿದ ನಂತರವೇ ಮುಂದಿನ ಪಾಠ. ಮೊದಲಿಗೆ ಸರಳವಾದ ಜಾಮಿತಿ ಆಕೃತಿಯ ನಿಖರವಾದ ಚಿತ್ರ ಮತ್ತು ಅದರ ನೆರಳು–ಬೆಳಕು. ನಂತರ ಪುಡಿ ಬಣ್ಣದಿಂದ ಛಾಯೆಯನ್ನು ಮಾಡುವುದು. ಮೊದಲಿಗೆ ಪೆನ್ಸಿಲ್, ಚಾರ್‌ಕೋಲ್ ನಂತರ ಕ್ರೆಯಾನ್, ಜಲವರ್ಣ, ಕೊನೆಗೆ ತೈಲವರ್ಣದಲ್ಲಿ ಮಾಡುವುದು. ಹಲವಾರು ಬಣ್ಣಗಳಿಂದ ಚಿತ್ರಿಸುವ ಮೊದಲು ಈ ರೀತಿಯಲ್ಲಿ ಪರಿಣಿತಿಯನ್ನು ಪಡೆಯುವ ಹಾಗೆ ಮಾಡುತ್ತಿದ್ದರು. ಯಾಕೆಂದರೆ ವಿದ್ಯಾರ್ಥಿಗಳು ರೇಖಾಚಿತ್ರ ಹಾಗೂ ವಸ್ತುಗಳ ಪ್ರಮಾಣ ಬದ್ಧತೆ ಹಾಗೂ ಬಣ್ಣಗಳ ಮೌಲ್ಯ ಚೆನ್ನಾಗಿ ಗ್ರಹಿಸಿ ಕರಗತ ಮಾಡಿಕೊಳ್ಳಲೆಂಬ ಉದ್ದೇಶವಾಗಿತ್ತು.

ಡಿ.ವ್ಹಿ.ಹಾಲಭಾವಿಯವರು ಜೆ.ಜೆ.ಕಲಾಶಾಲೆಗೆ ಪ್ರವೇಶ ಪಡೆದಾಗ ಶ್ರೀ ಎಲ್.ಎನ್.ತಾಸ್ಕರ್ ಅವರು ಹೆಡ್‌ಮಾಸ್ತರಿದ್ದರು. ಶ್ರೀ ಎಮ್.ವಿ.ದುರಂಧರ ವ್ಹಾಯಿಸ್ ಪ್ರಿನ್ಸಿಪಾಲರಿದ್ದರು. ಶ್ರೀ ಗ್ಲ್ಯಾಡಸನ್ ಸಲೋಮನ್ ಪ್ರಿನ್ಸಿಪಾಲರಾಗಿದ್ದರು. ಶ್ರೀ.ಕೆ.ಬಿ.ಚೂಡೇಕರ, ಶ್ರೀ ಅಗಸಕರ, ಶ್ರೀ ತಿರಂದಾದ ಮುಂತಾದ ಅಧ್ಯಾಪಕ ವರ್ಗ ಇತ್ತು.[೨೬]

### ಸಪ್ತವರ್ಣ ಕಲಾವಿದರು

ಮುಂಬಯಿಯಲ್ಲಿ ಹಾಲಭಾವಿಯವರು ಕಲಾಭ್ಯಾಸ ಮಾಡುವಾಗ ಆವರ ಸಹಪಾಠಿಗಳಾಗಿದ್ದ ಕಲಾವಿದ ದಂಡಾವತಿಮಠ ಅವರು ತಮ್ಮ ವಿದ್ಯಾರ್ಥಿ ಜೀವನದ ಮಧುರ ನೆನಹುಗಳನ್ನು ತಮ್ಮ ಲೇಖನವೊಂದರಲ್ಲಿ ಈ ರೀತಿ ವ್ಯಕ್ತ ಮಾಡಿದ್ದಾರೆ. ಮುಂಬಯಿಯಲ್ಲಿ ಕರ್ನಾಟಕದವರೆ ಆದ ಶ್ರೀ ಗಂಗಾಧರಪ್ಪ ಸಾಬೋಜಿಯವರ ಉದಾರಾಶ್ರಯದಲ್ಲಿ ಸಪ್ತವರ್ಣಗಳಂತಿದ್ದ ನಮ್ಮ ಕನ್ನಡ ಗುಂಪು ಪ್ರತಿದಿನ ಸಂಜೆ ಊಟವಾದ ನಂತರ ಸಾಬೋಜಿಯವರ ಆಟ್ಟದ ಮೇಲೆ ಕೂಡುತ್ತಿದ್ದೆವು. ನಿತ್ಯ ಕ್ಲಾಸಿನಲ್ಲಿ ನಡೆದ ಅಭ್ಯಾಸ ಸುಖದುಃಖ ಚರ್ಚಿಸಿ ವಿನೋದದಿಂದ ಕಾಲಕಳೆಯುತ್ತಿದ್ದೆವು. ಎಲ್ಲೇ ಇದ್ದರೂ ಸಹ ಸಂಜೆ ಊಟವಾದ ನಂತರ ನಮ್ಮ ಕಾರ್ಯಕ್ರಮದ ರಂಗಸ್ಥಳ ಶ್ರೀ ಸಾಬೋಜಿಯವರ ಅಟ್ಟ. ಆ ದಿನಗಳನ್ನು ನೆನೆಸಿದರೆ ಮನಸ್ಸಿಗೆ ಎಷ್ಟೊಂದು ಸಂತಸ. ಒಕ್ಕಟ್ಟು ಆತ್ಮೀಯತೆ ನೆನೆಸಿದರೆ, ನಾವು ಈಗ ಯಾವ ಯುಗದಲ್ಲಿದ್ದೇವೆಯೋ ಅಂತ ಅನ್ನಿಸುತ್ತದೆ. ನಮ್ಮ ಕನ್ನಡ ಕಲಾವಿದರ ಅಚ್ಚುಮೆಚ್ಚಿನ ಗುಂಪನ್ನು ನೋಡಿ ಬಹುಜನರು ಆಶ್ಚರ್ಯಪಟ್ಟರು. ಎಲ್ಲರೂ ಒಬ್ಬರಕ್ಕಿಂತ ಒಬ್ಬರು ಶ್ರೇಷ್ಠ ದರ್ಜೆಯ ಅಭ್ಯಾಸವನ್ನು ಮಾಡುತ್ತಾ, ಹಾಡುತ್ತಾ ವಿನೋದದಿಂದಿದ್ದೆವು. ಈ ಎಲ್ಲ ಸಪ್ತವರ್ಣದ ಅಂದರೆ. ಏಳು ಜನ ಕಲಾವಿದರು. ೧.ಶ್ರೀ ಡಿ.ಜಿ.ಬಡಿಗೇರ ೨.ಶ್ರೀ ಎಂ.ವ್ಹಿ.ಮಿಣಜಗಿ ೩.ಶ್ರೀ ಡಿ.ವ್ಹಿ.ಹಾಲಭಾವಿ ೪.ಶ್ರೀ ಜಿ.ಎಸ್. ದಂಡಾವತಿಮಠ ೫.ಶ್ರೀ ಸಿ.ವ್ಹಿ. ಕಾರಡಗಿ ೬.ಶ್ರೀ ಅಮೀನಸಾಬ ಕಮಡೊಳ್ಳಿ ೭.ಶ್ರೀ ಎಂ.ಎ.ಚೆಟ್ಟಿ

---

೨೫. ಡಾ.ಲಕ್ಷ್ಮೀ ದೇವಿ ಗವಾಯಿ, ಎಂ.ಎ.ಚೆಟ್ಟಿ ಜೀವನ ಹಾಗೂ ಕಲಾಕೃತಿಗಳು, ಪುಟ ೫೪
೨೬. –ಅದೇ– ಪುಟ ೫೬

ಇವರೆಲ್ಲ ಹೆಚ್ಚೂ ಕಡಿಮೆ ಒಂದೋ ಎರಡೋ ವರ್ಷ ಹಿಂದೆ ಮುಂದೆ ಓದುತ್ತಿದ್ದವರು. ಈ ಗುಂಪನ್ನೇ ದಂಡಾವತಿಮಠರು ೧೯೨೩ರಲ್ಲಿ "ಸಪ್ತವರ್ಣದ ಕನ್ನಡ ಗುಂಪು" ಎಂದು ಕರೆದಿದ್ದಾರೆ.

ಆಗಿನ ಕಾಲದಲ್ಲಿ ಮುಂಬಯಿಗೆ ಹೋಗಿ ಅಭ್ಯಾಸ ಮಾಡುವುದೆಂದರೆ ಬಹಳ ತೊಂದರೆಯಾಗಿತ್ತು. ಅಂತೂ ಇಂತೂ ನಮ್ಮ ಗುಂಪು ಬಹಳ ಸಾಹಸದಿಂದ ಸತತ ಪರಿಶ್ರಮದಿಂದ ಶ್ರೇಷ್ಠ ದರ್ಜೆಯಲ್ಲಿ ತೇರ್ಗಡೆ ಹೊಂದುತ್ತಿದ್ದವು ಎಂದು ಹೇಳುವ ದಂಡಾವತಿಮಠರು ಯಾವ ರೀತಿ ಕಲಿಯುತ್ತಿದ್ದೇವೆಂಬುದನ್ನು ಹೇಳಿದ್ದಾರೆ.[೨೭] ನಮ್ಮ ಕಾಲದ ವೈಶಿಷ್ಟ್ಯವೆಂದರೆ. ೧೦–೩೦ರವರೆಗೆ ಅಭ್ಯಾಸ ನಂತರ ಹೊರಗೆ ಒಂದು ನಿಮಿಷ ಸಹ ವ್ಯರ್ಥ ಕಳೆಯದೆ ಶಿಸ್ತಾಗಿ ಸರ್.ಜೆ.ಜೆ. ಸ್ಕೂಲಿನ ನಿಯಮಕ್ಕನುಗುಣವಾಗಿ ಮನಸ್ಸುಗೊಟ್ಟು ಅಭ್ಯಾಸಮಾಡುತ್ತಿದ್ದೆವು. ಅಲ್ಲದೆ ಯುರೋಪಿಯನ್ ಡಾಯರೆಕ್ಟರ ಕ್ಯಾಪ್ಟನ್ ಗ್ಲ್ಯಾಡ್‌ಸನ್ ಸಲೋಮನ್ನರವರು ತುಂಬಾ ಶಿಸ್ತಿನವರು. ಉದಾರಿಗಳು ಮತ್ತು ಶ್ರೇಷ್ಠ ಕಲಾವಿದರು. ಅವರು ಪ್ರತಿದಿನ ಪ್ರತಿ ಕ್ಲಾಸಿಗೂ ಕ್ಲಾಸು ಸುರು ಆಗುವ ಮುಂಚೆ ಮತ್ತು ಸಂಜೆ ದಿನಕ್ಕೆ ಎರಡುಬಾರಿ ಸಂದರ್ಶಿಸಿ ವಿದ್ಯಾರ್ಥಿಗಳ ಕೈಚಳಕವನ್ನು ವೀಕ್ಷಿಸುತ್ತಿದ್ದರು ಎಂದು ಗುರುಗಳ ಬಗ್ಗೆ ಹೇಳಿದ್ದಾರೆ. ಹಾಲಭಾವಿ ಸಮಕಾಲೀನವರಾದ ಇವರು ಕರ್ನಾಟಕದಲ್ಲಿ ತಮ್ಮ ಕಲೆಯ ಕಾಯಕದಿಂದ ಪ್ರಸಿದ್ಧರಾಗಿದ್ದಾರೆ. ಇವರೆಲ್ಲ ಒಂದೇ ರೀತಿಯ ವ್ಯಾಕರಣ ಪದ್ಧತಿಯ ರೋಮ್ಯಾಂಟಿಕ್ ಶೈಲಿಯ ಪದ್ಧತಿಯಲ್ಲಿ ಕಲಿತಿದ್ದರೂ ನಂತರ ಬೇರೆ ಬೇರೆ ವಿಭಾಗಗಳಿಗೆ ಹೋಗಿ ತಮ್ಮದೇ ಆದ ಕಲಾಕೃತಿಗಳನ್ನು ರಚಿಸಿದ್ದಾರೆ. ಅದರಲ್ಲಿ ಸಾಕಷ್ಟು ವ್ಯತ್ಯಾಸಗಳು ಇವೆ. ಮತ್ತು ತಮ್ಮತನವನ್ನು ಸೃಷ್ಟಿಸಿಕೊಂಡು ಒಳ್ಳೆ ಸೃಜನಶೀಲ ಕಲಾವಿದರಾಗಿ ಬೆಳೆದುಬಂದರು. ಅಂತಹವರ ಕಲಾಸಾಧನೆಯ ಬಗ್ಗೆ ಇಲ್ಲಿ ಸಂಕ್ಷೇಪವಾಗಿ ವಿವರಿಸಲಾಗಿದೆ.

ಇಂದ್ರಿಯಗಳನ್ನು ಕೆರಳಿಸುವುದು ಪಾಶ್ಚಿಮಾತ್ಯ ಚಿತ್ರಕಲೆಯ ಉದ್ದೇಶವಾದರೆ, ಕೆರಳಿದ ಇಂದ್ರಿಯಗಳನ್ನು ಶಾಂತಗೊಳಿಸುವುದು ಭಾರತೀಯ ಚಿತ್ರಕಲೆಯ ಉದ್ದೇಶ ಎಂದು ತ.ರಾ.ಸು. ಅವರು ಹೇಳಿದ ಮಾತು ಇಲ್ಲಿ ರಮಣೀಯ ಈ ಎಲ್ಲ ಕಲಾವಿದರು ಪಾಶ್ಚಾತ್ಯ ಶೈಲಿಯಲ್ಲಿ ಅಭ್ಯಾಸ ಮಾಡಿದರೂ ಭಾರತೀಯ ಪರಂಪರೆ ಎರಡನ್ನೂ ಸೂಕ್ತವಾಗಿ ಸಮನ್ವಯ ದೃಷ್ಟಿಕೋನದಿಂದ ಅಭಿವ್ಯಕ್ತಪಡಿಸಿದ್ದಾರೆ.

**ಡಿ.ಜಿ.ಬಡಿಗೇರ**

ಧಾರವಾಡ ಜಿಲ್ಲೆಯ ಕಲಘಟಗಿ ತಾಲೂಕಿನಲ್ಲಿ ಒಂದು ಸಣ್ಣ ಹಳ್ಳಿ ಮಿಶ್ರಿಕೋಟಿ. ೧೯೦೨ರಲ್ಲಿ ಬಡಿಗತನದ ಮಾಡುತ್ತಿದ್ದ ಗೂಳಪ್ಪನವರಿಗೆ ಎರಡನೆಯ ಮಗನಾಗಿ ಜನಿಸಿದರು. ಬಡಕುಟುಂಬದಲ್ಲಿ ಜನಿಸಿದರೂ ಈ ಕಲಾಪ್ರಜ್ಞೆ ಅನುವಂಶಿಕವಾಗಿ, ರಕ್ತಗತವಾಗಿ ಬಂದಿತ್ತು. ಗೂಳಪ್ಪ ಬಡಿಗೇರ ಅವರು ಊರಿಗೆಲ್ಲ ತೇರು, ಪಲ್ಲಕ್ಕಿ, ಕುಸುರೆಗೆಲಸದ ಚೌಕಟ್ಟಿನ ಬಾಗಿಲುಗಳನ್ನು, ತಾಮ್ರ, ಹಿತ್ತಾಳೆಯ ಕೆಲಸವನ್ನೂ ಮಾಡುವದರಲ್ಲಿ ಸಿದ್ಧಹಸ್ತರು. ಬಾಲ್ಯದಲ್ಲಿಯೇ ತಂದೆಯ ಸಲಹೆಯಂತೆ ಹಳೆಯ ಮೈಸೂರಿನ ದೇವಾಲಯಕ್ಕೆ ತೇರೊಂದಕ್ಕೆ ಬೇಕಾದ ಸಿಂಹಾಕೃತಿಗಳನ್ನು ದೇವಪ್ಪರೇ ರಚಿಸಿದರು. ಅವರಲ್ಲಡಗಿದ ಈ ಸುಪ್ತಚೇತನವನ್ನು ಗುರುತಿಸಿದ ಶಾಲೆಯ ಮುಖ್ಯಾಧ್ಯಾಪಕ ತೊರವಿಯವರು ಹಾಗೂ ಡ್ರಾಯಿಂಗ್ ಶಿಕ್ಷಕರಾದ ಮನಿಯಾರರು ಪ್ರೋತ್ಸಾಹಿಸಿ ಈಗಾಗಲೇ ಎಂಟನೇ ತರಗತಿಯಲ್ಲಿ ಎಲಿಮಂಟರಿ ಹಾಗೂ ಇಂಟರಮಿಡಿಯೇಟ್ ಗ್ರೇಡ್ ಪರೀಕ್ಷೆಗಳಲ್ಲಿ ತೇರ್ಗಡೆ ಆಗಿದ್ದವರನ್ನು ೧೯೨೩ರಲ್ಲಿ ಮುಂಬಯಿಯ ಸರ್. ಜೆ.ಜೆ. ಸ್ಕೂಲ್ ಆಫ್ ಆರ್ಟ್‌ಗೆ ಹೋಗಲು ಅನಕೂಲ ಮಾಡಿಕೊಟ್ಟರು. ಮುಂಬಯಿಯಲ್ಲಿ ಸಾಬೋಜಿಯೆಂಬ ವ್ಯಾಪಾರಸ್ಥರ ಆಶ್ರಯ ದೊರೆಯಿತು. ಪ್ರಿನ್ಸಿಪಾಲ್ ಗ್ಲ್ಯಾಡ್‌ಸನ್ ಸಲೋಮನ್ನ ಹಾಗೂ ಇನ್ನಿತರ ಉಚ್ಚ ಮಟ್ಟದ ಕಲಾಶಿಕ್ಷಕರಿಂದ ಮಾರ್ಗದರ್ಶನ ಪಡೆದ ದೇವಪ್ಪನವರು ಸತತ ಪರಿಶ್ರಮದಿಂದ ೧೯೨೭ರಲ್ಲಿ ಡ್ರಾಯಿಂಗ್ ಮತ್ತು ಪೇಂಟಿಂಗ್ ಡಿಪ್ಲೋಮಾ ಪದವಿಯನ್ನು ರ್‍ಯಾಂಕಿನಿಂದ ಪಾಸಾಗಿ ಡಾಲಿಕರ್ಸ್ ಸೇಠಜಿ ಪಾರಿತೋಷಕ ಹಾಗೂ ಸುವರ್ಣ ಪದಕವನ್ನು ಪಡೆದರು. ಈ ಮಧ್ಯದ ಅವಧಿಯಲ್ಲಿಯೇ ಮೇಯೋ ಪದಕ, ಡಿಪ್ಲೋಮಾ ಪದಕ, ರಾಜ್ಯಪಾಲರ ವಿಶೇಷ ಪಾರಿತೋಷಕ ಮುಂತಾದವು ದೇವಪ್ಪನವರನ್ನು ಹುಡುಕಿಕೊಂಡು

೨೭. ಡಾ.ಲಕ್ಷ್ಮೀ ದೇವಿ ಗವಾಯಿ, ಎಂ.ಎ.ಚೆಟ್ಟಿ ಜೀವನ ಹಾಗೂ ಕಲಾಕೃತಿಗಳು, ಪುಟ ೬೯

ಬಂದವು. ಆರು ವರ್ಷಗಳ ಕಾಲ ಅಲ್ಲಿ ಅಭ್ಯಾಸ ಮಾಡಿ ನಂತರ ೧೯೨೮ರಲ್ಲಿ ಬಡಿಗೇರ ಆ ಸಂಸ್ಥೆಯ ಫೆಲೋ ಆಗಿ ಆಯ್ಕೆಯಾದರು. ಅಲ್ಲದೆ ದಿಲ್ಲಿಯ ವೈಸ್‌ರಾಯ್ ಹೌಸ್(ಈಗಿನ ರಾಷ್ಟ್ರಪತಿ ಭವನ)ದ ಗುಮ್ಮಟದ ಮೇಲೆ ಚಿತ್ರಿಸಲು ಸಲೋಮನ್‌ರು ದೇವಪ್ಪನವರಿಗೆ ವಹಿಸಿಕೊಟ್ಟರು. ಅವರ ಕಲಾ ಕೌಶಲ್ಯಕ್ಕೆ ದೇಶ ವಿದೇಶಗಳ ಕಲಾತಜ್ಞರು ಮೆಚ್ಚಿಗೆ ವ್ಯಕ್ತಪಡಿಸಿದರು.

ಬಡಿಗೇರ ಅವರಿಗೂ ಲಂಡನ್ನಿಗೆ ಹೋಗಿ ಉಚ್ಚ ಶಿಕ್ಷಣ ಪಡೆಯಬೇಕೆಂಬ ಆಸೆ. ನಾವು ಹೆಚ್ಚಾಗಿ ಬೆಳಗಿನ[೨೮] ಜಾವ ಇಲ್ಲವೆ ಬೆಳದಿಂಗಳ ಸಂಜೆ ಸಮುದ್ರದ ತೀರಕ್ಕೆ ತಿರುಗಾಡಲು ಹೋಗುತ್ತಿದ್ದೆವು. ಆಗ ಅನೇಕ ದೇಶ ವಿದೇಶದ ಕಲಾವಿದರ ಬಗ್ಗೆ ಕಲೆಯ ಬಗ್ಗೆ ಚರ್ಚೆಯನ್ನು ಮಾಡುತ್ತಿದ್ದೆವು. ಒಂದು ದಿನ ಹೀಗೆ ತಾವು ವಿದೇಶಕ್ಕೆ ಹೋಗಬೇಕೆಂಬ ಆಸೆಯನ್ನು ನನ್ನ ಮುಂದೆ ಹೇಳಿದರು. ಆಗ ಸಲೋಮನ್‌ರ ಸಲಹೆಯನ್ನು ಪಡೆಯಲು ತಿಳಿಸಿದೆ. ಅದರಂತೆ ಸಲೋಮನ್‌ರು ಒಪ್ಪಿಕೊಂಡು ಸಂತೋಷಪಟ್ಟರು. ಅದರಂತೆ ಇಂಗ್ಲೆಂಡಿನ ರಾಯಲ್ ಅಕಾಡೆಮಿ ಆಫ್ ಆರ್ಟ್‌ಗೆ ಕಳಿಸಿಕೊಡಲು ನಿರ್ಧರಿಸಿದರು. ಅದಕ್ಕೆ ಅವರ ತಂದೆಯಿಂದ ಅಲ್ಪಸ್ವಲ್ಪ ಹಾಗೂ ದೇಸಾಯಿ ಲಿಂಗರಾಜ ಟ್ರಸ್ಟ್‌ನಿಂದ ಹಣಕಾಸಿನ ಸಹಾಯ ದೊರೆಯಿತು. ಅದರ ಸದುಪಯೋಗ ಪಡೆದುಕೊಂಡು ಎರಡು ವರ್ಷಗಳ ಕಾಲ ಲಂಡನ್ನಿನಲ್ಲಿ ಅಭ್ಯಾಸ ನಡೆಸಿ ಗ್ರ್ಯಾಜ್ಯುಯೇಟ್ ಆಫ್ ರಾಯಲ್ ಅಕಾಡೆಮಿ ಆಫ್ ಆರ್ಟ್ ಪದವಿಯನ್ನು ೧೯೩೧ರಲ್ಲಿ ಪಡೆದುಕೊಂಡು ಬಂದರು.

ಲಂಡನ್ನನ್ನು ೧೯೩೧ರಲ್ಲಿ ಬಿಟ್ಟು ಭಾರತಕ್ಕೆ ಮರಳಿದರು. ತಾಯ್ನಾಡಿಗೆ ಬಂದ ಕೆಲವೇ ದಿನಗಳಲ್ಲಿ ಅವರು ಕೈಕೊಂಡ ಮೊದಲ ಕಾರ್ಯ ಮುಂಬಯಿಯಲ್ಲಿ ಹೊಸ ಮಾದರಿಯ ಕಲಾಶಾಲೆ ನೂತನ ಕಲಾಮಂದಿರ ಸ್ಥಾಪಿಸಿದರು. ಕಲಾವಿದರ ಸಂಘಟನೆಯನ್ನು ಮಾಡಿ ಎರಡು ಕಲಾಪ್ರದರ್ಶನಗಳನ್ನು ಏರ್ಪಡಿಸಿದರು. ಒಂದು ಜೆ.ಜೆ. ಸ್ಕೂಲ್ ಆಫ್ ಆರ್ಟ್‌ದಲ್ಲಿ ಇನ್ನೊಂದು ಬೆಳಗಾಂವದಲ್ಲಿ. ಬಡಿಗೇರರ ಎಷ್ಟೋ ಕಲಾಕೃತಿಗಳನ್ನು ಸ್ಕೂಲ್ ಆಫ್ ಆರ್ಟ್‌ದ ಮ್ಯೂಜಿಯಂನ ನಿರ್ದೇಶಕರು ಕೊಂಡುಕೊಂಡರು.[೨೯] ಬೆಳಗಾಂವದ ಲಿಂಗರಾಜ ಕಾಲೇಜಿನ ಪ್ರಿನ್ಸಿಪಾಲ ಡಾ. ಎಸ್.ಸಿ.ನಂದೀಮಠರ ನೇತೃತ್ವದಲ್ಲಿ ಕರ್ನಾಟಕ ಆರ್ಟ್ ಸೊಸೈಟಿಯೊಂದನ್ನು ಸಂಘಟಿಸಿದರು. ಅದರ ಮುಖಾಂತರ ಅನೇಕ ಕಲಾ ಚಟುವಟಿಕೆಗಳನ್ನು ಆರಂಭಿಸಿದರು. ೧೯೩೩ರಲ್ಲಿ ಬಡಿಗೇರರು ಮುಂಬಯಿ (ಇಂದು ಪಾಕಿಸ್ತಾನದಲ್ಲಿರುವ ಸಿಂಧ್ ಪ್ರಾಂಥವನ್ನೂ ಸೇರಿ) ಪ್ರಾಂತಕ್ಕೇ ಡ್ರಾಯಿಂಗ್ ಮತ್ತು ಕ್ರಾಫ್ಟ್ ಇನ್ಸ್‌ಪೆಕ್ಟರ್ ಹುದ್ದೆಗೆ ನೇಮಕಗೊಂಡರು. ತಾವೇ ಸ್ಥಾಪಿಸಿದ ನೂತನ ಕಲಾಮಂದಿರ ನಿರ್ದೇಶಕತ್ವವನ್ನು ತ್ಯಜಿಸುವ ಸಮಯ ಬಂತು. ತಮ್ಮೊಡನೆ ಲಂಡನ್ನಿನಲ್ಲಿ ಕಲಿತ ವಿಶ್ವಾಸಿ ಸ್ನೇಹಿತರಾದ ಶ್ರೀ ವಾಯ್.ಆರ್.ರಾವ್ ಅವರಿಗೆ ವಹಿಸಿಕೊಟ್ಟರು. ಅವರ ಕೆಲವರ್ಷಗಳ ಸೇವೆಯ ನಂತರ ದಂಡಾವತಿಮಠರು ಆ ಕಲಾಮಂದಿರದ ಜವಾಬ್ದಾರಿಯನ್ನು ಹೊತ್ತು ಅನೇಕ ಕಲಾವಿದ್ಯಾರ್ಥಿಗಳನ್ನು ಬೆಳೆಸಿದರು.

ಬಡಿಗೇರ ಅವರು ಡ್ರಾಯಿಂಗ್ ಮತ್ತು ಕ್ರಾಫ್ಟ್ ಇನ್ಸ್‌ಪೆಕ್ಟರ್ ಆಗುವವರೆಗಿನ ಸ್ವಲ್ಪೇ ಅವಧಿಯಲ್ಲಿ ಚಿತ್ರಗಳಲ್ಲಿ ಪ್ರಮುಖವಾದವುಗಳೆಂದರೆ. ದಿ ಟೆಂಪ್ಟೇಶನ್ ಆಫ್ ಬುದ್ಧ, ತಿಲೋತ್ತಮೆ. ಲಂಬಾಣಿ ಹುಡುಗಿ, ಸಾವಿತ್ರಿ ಮತ್ತು ಸತ್ಯವಾನ್, ನಳ–ದಮಯಂತಿ ಮತ್ತು ಮೂಕ ತಾಜಮಹಲ್‌ನ ಹಿಂದಿನ ಭಾಗ. ತಾಜ್‌ಗೆ ದಾರಿ, ವಿಜಯನಗರ, ಅಜಂತಾ ಎಲ್ಲೋರಾ ಚಿತ್ರಗಳ ಪುನರ್ ಪ್ರತಿಗಳು, ಬಾದಾಮಿ, ಪಟ್ಟದಕಲ್ಲಿನ ದೇವಸ್ಥಾನಗಳು, ಭಿಕ್ಷುಕ, ಪೂನಾದ ಖಂಡಾಲ ಹಾಗೂ ಇನ್ನೂ ಹಲವಾರು ನಿಸರ್ಗ ಚಿತ್ರಗಳಿವೆ. ಅಜಂತಾ ಶೈಲಿಯ ಚಿತ್ರಗಳು ತುಂಬಾ ಸುಂದರವಾದ ಕಲಾಕೃತಿಗಳಾಗಿವೆ. ಅದರಲ್ಲಿ ಏಂಜಲ್ ಎಂಬುದು ಒಂದು ಎಲ್ಲೋರಾದ ಪ್ರಕೃತಿ ಚಿತ್ರ. ಇದನ್ನು ರಾಷ್ಟ್ರಪತಿ ಭವನದ ಗುಮ್ಮಟದ ಮೇಲೆ ಚಿತ್ರಿಸಲಾಗಿದೆ.[೩೦]

ಇವರು ತೈಲ, ಜಲ, ಸೀಸ, ಇಂಡಿಯನ್ ಇಂಕ್ ಮುಂತಾದ ಮಾಧ್ಯಮಗಳಲ್ಲಿ ಚಿತ್ರ ರಚಿಸಿದ್ದಾರೆ. ಅಲ್ಲದೆ ರೇಖಾಚಿತ್ರಗಳನ್ನು ಚಿತ್ರಿಸಿದ್ದಾರೆ. ಅಂತವುಗಳಲ್ಲಿ ಭಾರತೀಯ ಹುಡುಗಿ, ಗಜಪಕ್ಷಿ, ಅಪ್ಸರಾ ಹಾಗೂ

೨೮. ಡಾ.ಲಕ್ಷ್ಮೀ ದೇವಿ ಗವಾಯಿ, ಎಂ.ಎ.ಚೆಟ್ಟಿ ಜೀವನ ಹಾಗೂ ಕಲಾಕೃತಿಗಳು, ಪುಟ ೭೦
೨೯. –ಅದೇ– ಪುಟ ೭೧
೩೦. –ಅದೇ– ಪುಟ ೭೨

ಬಹಳಷ್ಟು ಭಾವಚಿತ್ರಗಳಿವೆ. ಸಂಯೋಜನೆಗಳು (ಎಂ.ಎ.ಚೆಟ್ಟಿ, ಎಸ್.ಎಸ್.ಕುಕ್ಕೆ ಇತ್ಯಾದಿ) ಮುಂತಾದವುಗಳನ್ನೊಳಗೊಂಡಿದೆ. ಆದರೆ ಅವರ ಕಾಲದಲ್ಲಿ ಇಂತಹ ಕೃತಿಗಳನ್ನೇ ನಿಜವಾದ ಕಲೆ ಎಂದು ಭಾವಿಸಲಾಗುತ್ತಿತ್ತು. ಜನಸಾಮಾನ್ಯರೂ ಹಾಗೆಯೇ ಭಾವಿಸುತ್ತಿದ್ದರು. ಜೊತೆಗೆ ಕಲಾಗುರುಗಳಾದ ದಂಡಾವತಿಮಠ, ಪಾವಂಜೆ, ಮಿಣಜಗಿ ಡಿ.ವ್ಹಿ.ಹಾಲಭಾವಿ ಎಂ.ಎ. ಚೆಟ್ಟಿ, ಎಂ.ಟಿ.ವಿ. ಆಚಾರ್ಯ, ಟಿ.ಪಿ.ಅಕ್ಕಿ ಮುಂತಾದವರು ಇಂತಹ ಕಲಾಕೃತಿಗಳನ್ನೇ ಗಂಭೀರವಾದ ಕಲೆ ಎಂತಲೂ ಪರಿಗಣಿಸಿದ್ದರು.[೩೧]

**ಡಾ.ಎಂವ್ಹಿ.ಮಿಣಜಗಿ**

ಸಪ್ತವರ್ಣಗಳ ಗುಂಪಿನಲ್ಲಿ ಇವರು ಹಿರಿಯರು. ಶ್ರೀ ಮಡಿವಾಳಪ್ಪ ಮಿಣಜಗಿ ಅವರು ವ್ಯಾಪಾರಸ್ಥ ಶ್ರೀಮಂತ ಮನೆಯಲ್ಲಿ ಶ್ರೀಯುತ ವೀರಪ್ಪ ಶ್ರೀಮತಿ ಶರಣವ್ವ ದಂಪತಿಗಳ ಮಗನಾಗಿ ೧೯೦೧ ಜನೇವರಿ ೨೦ರಂದು ವಿಜಾಪೂರದಲ್ಲಿ ಜನಿಸಿದರು. ೧೧-೧೨ ವರ್ಷದ ವಿದ್ಯಾರ್ಥಿ ಜೀವನದಲ್ಲಿಯೇ ಸಂಗೀತ, ಚಿತ್ರ ಬಿಡಿಸುವುದು ಕಾಗದದಿಂದ ಸುಂದರವಾಗಿ ದೋಣಿ ಮಾಡುವುದು. ಗಣಪತಿ, ಬಸವಣ್ಣನಂತಹ ಚಿತ್ರ ಬರೆಯುವುದು. ಹಲವಾರು ಕಲಾಚಟುವಟಿಕೆಗಳಿಂದ ಗುರುಗಳ ಮನ ಮೆಚ್ಚಿಸಿದವರು. ತಮ್ಮ ಪ್ರಾಥಮಿಕ ಮಾಧ್ಯಮಿಕ ಓದನ್ನು ವಿಜಾಪೂರದಲ್ಲೇ ಮುಗಿಸಿದರು. ಓದಿದ್ದು ಮರಾಠಿ ಮಾಧ್ಯಮ. ತಂದೆಗೆ ಮಗನು ವಕೀಲನಾಗಬೇಕೆಂಬ ಆಸೆ. ಆದರೆ ಅವರ ಮನಸ್ಸಿಗೆ ವಿರೋಧವಾಗಿ ತಮ್ಮ ಗುರಿಯತ್ತ ಸಾಗಿದ ಮಿಣಜಗಿಯವರು ೧೯೨೧ರಲ್ಲಿ ಉನ್ನತ ಕಲಾಶಿಕ್ಷಣಕ್ಕಾಗಿ ಮುಂಬಯಿಯ ಸರ್.ಜೆ.ಜೆ.ಸ್ಕೂಲ್ ಆಫ್ ಆರ್ಟ್ ಸೇರಿದರು.[೩೨]

ತಮ್ಮ ಸತತ ಪ್ರಯತ್ನದಿಂದ ಪರಿಶ್ರಮದಿಂದ ಅಭ್ಯಾಸ ಮಾಡಿ ಆರ್ಟ್‌ಮಾಸ್ಟರ್ ಪರೀಕ್ಷೆಯನ್ನು ಪ್ರಥಮ ಶ್ರೇಣಿಯಲ್ಲಿ ತೇರ್ಗಡೆ ಹೊಂದಿ. ೧೯೨೭ರಲ್ಲಿ ಅದೇ ಸ್ಕೂಲಿನಿಂದ ಚಿತ್ರಕಲೆಯಲ್ಲಿ ಡಿಪ್ಲೋಮಾ ಪದವಿಯನ್ನು ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದರು. ಅವರ ಕಲಾಸಕ್ತಿ ಮತ್ತು ಪ್ರತಿಭೆ ಅವರನ್ನು ವಿದೇಶಕ್ಕೆ ಕರೆದೊಯ್ಯಿತು. ೧೯೩೦ರಲ್ಲಿ ಅವರು ಉಚ್ಚ ಶಿಕ್ಷಣಕ್ಕಾಗಿ ಲಂಡನ್ನಿನ ರಾಯಲ್ ಕಾಲೇಜ್ ಆಫ್ ಆರ್ಟ್ಸ್‌ನಲ್ಲಿ ಪ್ರವೇಶ ಪಡೆದರು. ಅಲ್ಲಿ ಬರೀ ಚಿತ್ರಕಲೆಯನ್ನಷ್ಟೇ ಕಲಿಯದೇ ಫೋಟೊಲಿಥೋ, ಕ್ರೊಮೋಲಿಥೋಗ್ರಾಫ್ ಅಭ್ಯಸಿಸಿ ಅದರಲ್ಲಿಯೂ ಅನೇಕ ಪ್ರಶಸ್ತಿ ಪಡೆದು. ಪ್ರಖ್ಯಾತ ವಿಲಯಂ ರಾಥನ್‌ಸ್ಟೆನ್ ಅವರ ಶಿಷ್ಯರಾಗಿ ಮೆಚ್ಚುಗೆಯನ್ನು ಗಳಿಸಿದರು. ತಾರುಣ್ಯದಲ್ಲಿಯೇ ಕಲಾಪ್ರೌಢಿಮೆಯ ಉನ್ನತ ನಿಲುವನ್ನು ಸಂಪಾದಿಸಿದ ಶ್ರೇಯಸ್ಸು ಈ ಮಿಣಜಗಿಯವರದು. ಲಂಡನ್ನಿನ ಇಂಡಿಯನ್ ಹೌಸ್, ಇಂಪೀರಿಯಲ್ ಆರ್ಟ್ ಗ್ಯಾಲರಿ ಮತ್ತು ಇನ್ನಿತರ ಅನೇಕ ಪ್ರಮುಖ ಸ್ಥಳಗಳಲ್ಲಿ ಇವರ ಚಿತ್ರಗಳು ಪ್ರದರ್ಶಿಸಲ್ಪಟ್ಟು ಅನೇಕ ಸಹೃದಯಿಗಳ ಮನಸ್ಸಿಗೆ ಆನಂದವನ್ನುಂಟು ಮಾಡಿದವು. ಅನೇಕ ಬಹುಮಾನ ಪ್ರಶಸ್ತಿಗಳನ್ನು ಪಡೆದವು.

೧೯೩೫ರಲ್ಲಿ ಹುಬ್ಬಳ್ಳಿಯ ಫೈನ್ ಆರ್ಟ್ ಸೊಸೈಟಿಯ ಆಶ್ರಯದೊಂದಿಗೆ ಒಂದು ಕಲಾ ಶಾಲೆಯನ್ನು ಪ್ರಾರಂಭಿಸಿದರು. ಈಗ ಅದೇ ವಿಜಯ ಮಹಾಂತೇಶ ಲಲಿತಕಲಾಮಹಾವಿದ್ಯಾಲಯವಾಗಿ ಬೆಳೆದಿದೆ. ಡಾ.ಮಿಣಜಗಿಯವರು ಅಂದು ಶಿಕ್ಷಕರಾಗಿ ಸಲ್ಲಿಸಿದ ಸೇವೆ ಅವರಿಂದ ಶಿಕ್ಷಣ ಪಡೆದು ಹೊರಬಂದ ಹಲವಾರು ಕಲಾವಿದರು ನಾಡಿನ ಶ್ರೇಷ್ಠ ಕಲಾವಿದರಾಗಿದ್ದಾರೆ. ೧೯೬೧ರಲ್ಲಿ ಬೆಂಗಳೂರಿನಲ್ಲಿ ಡ್ರಾಯಿಂಗ್ ಟೀಚರ್ಸ್ ಟ್ರೇನಿಂಗ್ ಇನ್‌ಸ್ಟಿಟ್ಯೂಟ್ ಮಿಣಜಗಿಯವರ ಸಹೆಯಂತೆ ತೆರೆಯಲ್ಪಟ್ಟಿತು. ಅಂತೆಯೇ ೧೯೬೫ರಲ್ಲಿ ದಾವಣಗೆರೆಯಲ್ಲಿ ಪ್ರಾರಂಭವಾದ ಚಿತ್ರಕಲಾ ಹಾಗೂ ಕೈಗಾರಿಕೆ ಕಲಾ ಶಾಲೆಯ ಸ್ಥಾಪನೆಯಲ್ಲಿಯೂ ಮಿಣಜಗಿಯವರ ಪಾತ್ರ ಪ್ರಮುಖವಾಯಿತು.[೩೩]

ಅವರ ಕಲಾಸೇವೆಯು ಚಿತ್ರ ರಚಿಸುವುದಕ್ಕಷ್ಟೆ ಮೀಸಲಾಗಿರದೆ ಅದಕ್ಕೆ ಸಂಬಂಧಪಟ್ಟ ಅನೇಕ ಸಂಘ ಸಂಸ್ಥೆಗಳ ಅಧ್ಯಕ್ಷ ಉಪಾಧ್ಯಕ್ಷರಾಗಿ, ನಿರ್ದೇಶಕರಾಗಿ, ಮಾರ್ಗದರ್ಶಕರಾಗಿ ಸೇವೆ ಸಲ್ಲಿಸಿದ್ದಾರೆ. ಕರ್ನಾಟಕ

---

೩೧.ಡಾ.ಲಕ್ಷ್ಮೀ ದೇವಿ ಗವಾಯಿ, ಎಂ.ಎ.ಚೆಟ್ಟಿ ಜೀವನ ಹಾಗೂ ಕಲಾಕೃತಿಗಳು, ಪುಟ ೭೩
೩೨. -ಅದೇ- ಪುಟ ೭೪
೩೩. -ಅದೇ- ಪುಟ ೭೫

ರಾಜ್ಯ ಲಲಿತಕಲಾ ಅಕಾಡೆಮಿಯ ಸದಸ್ಯರಾಗಿ, ಕರ್ನಾಟಕ ರಾಜ್ಯ ಸಂಗೀತ ನಾಟಕ ಅಕಾಡೆಮಿ ಉಪಾಧ್ಯಕ್ಷರಾಗಿ, ಕೇಂದ್ರ ಲಲಿತಕಲಾ ಅಕಾಡೆಮಿಯ ಸದಸ್ಯರಾಗಿ, ಕರ್ನಾಟಕದಲ್ಲಿ ರಾಜ್ಯದಲ್ಲಿ ಉಚ್ಚ ಕಲಾ ಶಿಕ್ಷಣದ ಪಠ್ಯ ತರಗತಿಯ ಸಲಹಾ ಅಧ್ಯಕ್ಷರಾಗಿ, ಪರೀಕ್ಷಾ ಮಂಡಳಿಯ ಚೇರ್‌ಮನ್‌ರಾಗಿ, ಕರ್ನಾಟಕ ವಿಶ್ವವಿದ್ಯಾಲಯದ ಪದವೀಧರರ ಚಿತ್ರಕಲಾ ಶಿಕ್ಷಣ ಚೇರಮನ್ನರಾಗಿ, ಇಂಡಿಯನ್ ನ್ಯಾಶನಲ್ ಕಮೀಟಿ ಆಫ್ ಇಂಟರ್ ನ್ಯಾಶನಲ್ ಅಸೋಸಿಯೇಷನ್ ಆಫ್ ಆರ್ಟ್ ಯುನೆಸ್ಕೋ ಇವುಗಳ ಸದಸ್ಯರಾಗಿ, ರಾಜ್ಯದ ಹಾಗೂ ಕೇಂದ್ರದ ಹಲವಾರು ಸಂಘ ಸಂಸ್ಥೆಗಳ ಸದಸ್ಯರಾಗಿ ಸಲ್ಲಿಸಿದ ಇವರ ಕಲಾಸೇವೆ ಅಮೋಘವಾದದ್ದು.

೧೯೬೬ರಲ್ಲಿ ಕೇಂದ್ರ ಲಲಿತಕಲಾ ಅಕಾಡೆಮಿ ನ್ಯೂದಿಲ್ಲಿ ವತಿಯಿಂದ ಜಪಾನದ ಟೋಕಿಯೋ ಪಟ್ಟಣದಲ್ಲಿ ನಡೆದ ಜಗತ್ತಿನ ಐದನೇ ಕಲಾಸಮ್ಮೇಳನದಲ್ಲಿ ಭಾರತದ ಪ್ರತಿನಿಧಿಯಾಗಿ ಭಾಗವಹಿಸಿದ ಕೀರ್ತಿ ಮಿಣಜಗಿಯವರಿಗೆ ಸಲ್ಲುತ್ತದೆ. ಅಲ್ಲದೇ ಇವರ ಚಿತ್ರಗಳನ್ನು ಎಲ್ಲರೂ ಮೆಚ್ಚಿಕೊಂಡು ಪ್ರಶಂಸಿಸಿದರು. ದಿಲ್ಲಿಯ ವೈಸ್‌ರಾಯ್ ಹೌಸ್‌ನ ಗುಮ್ಮಟದ ಮೇಲೆ ಇವರಿಗೂ ಚಿತ್ರ ರಚಿಸಲು ಅವಕಾಶ ಸಿಕ್ಕಿತು. ಇವರ ವಿಷಯ ವಾಸ್ತುಶಿಲ್ಪವಾಗಿತ್ತು. ೧೯೫೫-೫೬ರಲ್ಲಿ ಚಾಲುಕ್ಯ ಅರಸರ ಕಾಲದ ಆರನೇಯ ಶತಮಾನದಲ್ಲಿ ಗುಡ್ಡದ ಗುಹೆಯಲ್ಲಿ ರಚಿಸಿದ ಭಿತ್ತಿಚಿತ್ರಗಳನ್ನು (ಪ್ರೆಸ್ಕೋ) ಪ್ರತಿಚಿತ್ರವಾಗಿ ರೂಪಪಿಸಿದರು. ಮುಂಬಯಿಯ ಜೆ.ಜೆ.ಕಲಾಶಾಲೆಯಲ್ಲಿ ಭಿತ್ತಿಚಿತ್ರಗಳ ವಿವಿಧ ವಿನ್ಯಾಸಗಳ ಅಧ್ಯಯನದಿಂದಾಗಿ ಅದು ಚೆನ್ನಾಗಿ ಇವರಿಗೆ ಕರಗತವಾಗಿತ್ತು. ಯಾಕೆಂದರೆ ತಮ್ಮ ಮನಸ್ಸಿನ ಮೇಲೆ ಯಾವ ರೀತಿ ಆ ರಾಗಮಾಲಾ ಚಿತ್ರಗಳ ಪ್ರಭಾವವಾಗಿದೆಯೋ ಅದನ್ನೇ ಚಿತ್ರಿಸಿದ್ದಾರೆ. ಒಂದೇ ರಾಗ ಚಿತ್ರಗಾರರ ಮೇಲೆ ಒಂದೇ ರೀತಿಯ ಪ್ರಭಾವ ಬೀರಿದರೂ. ಅವರ ಕಲ್ಪನೆಗಳು ಮಾತ್ರ ಬೇರೆ ಬೇರೆ ಎಂಬುದು ಮಿಣಜಗಿಯವರ ಚಿತ್ರ ನೋಡಿದಾಗ ಸ್ಪಷ್ಟವಾಗುತ್ತದೆ.[೩೪]

ರಾಗ ಪಟಮಂಜರಿಯ ಒಂದು ಚಿತ್ರ : ನಲ್ಲನಿಗಾಗಿ ಕಾದುಬೇಸತ್ತ ನಲ್ಲೆ ಹೊರಗೆ ಭಯಂಕರವಾದ ಮೋಡ ಆವರಿಸಿದೆ. ಮಳೆ ಬರುವ ಸೂಚನೆ. ನಲ್ಲೆ ಮನೆಬಿಟ್ಟು ನಲ್ಲನನ್ನರಸುತ್ತ ಹೊರಟುಬಿಟ್ಟಿದ್ದಾಳೆ. ಸಖಿ ಅವಳ ತೋಳು ಹಿಡಿದು ಹೋಗಬೇಡವೆಂದು ಒಳಗೆ ಎಳೆದುಕೊಳ್ಳುತ್ತಿದ್ದಾಳೆ. ನಲ್ಲೆಯ ಮನಸ್ಸಿನ ತಳಮಳ ಇಲ್ಲಿ ವ್ಯಕ್ತವಾಗುತ್ತದೆ. ರಜಪೂತ ಶೈಲಿಯ ವಸ್ತ್ರಾಲಂಕಾರ ಅಲ್ಲಲ್ಲಿ ನೆರಳು-ಬೆಳಕಿನ ಛಾಯೆ ಇಲ್ಲಿ ಬಳಸಿರುವ ಬಣ್ಣಗಳು ಪ್ರಖರವಾಗಿದ್ದರೂ ಸಂದರ್ಭಕ್ಕೆ ತಕ್ಕಂತೆ ಭಾವನೆಯೊಂದಿಗೆ ಬಣ್ಣಗಳ ಪ್ರಖರತೆಯ ಕಡೆ ಅಷ್ಟೊಂದು ಲಕ್ಷ ಹರಿಯುವದಿಲ್ಲ. ಪ್ರಿಯನ ದರ್ಶನಕ್ಕಾಗಿ ಪರಿತಪಿಸುವ ಬಯಕೆ ಇಲ್ಲಿ ಪ್ರಮುಖವಾಗಿದೆ. ಆಕೃತಿಗಳ ಹೊರರೇಖೆ ಜಲವರ್ಣದ ಪಾರದರ್ಶಿಕೆ ಅತ್ಯಂತ ಸುಂದರವಾಗಿ ಚಿತ್ರಿತವಾಗಿದೆ.

ರಜಪೂತ ಶೈಲಿಯ ಇದೇ ರಾಗದ ಚಿತ್ರವನ್ನು ಅವಲೋಕಸಿದಾಗ ಭಾವನೆ ಒಂದೇ ಆಗಿದ್ದರೂ ಚಿತ್ರದ ಸಂಯೋಜನೆ, ವರ್ಣಗಳ ಬಳಕೆ ಬೇರೆಯಾಗಿದೆ. ಇದನ್ನು ಸಾಮಾನ್ಯವಾಗಿ ರಾತ್ರಿಯ ಪ್ರಥಮ ಪ್ರಹರದಲ್ಲಿ ಹಾಡುವರು. ಹೀಗೆ ವಿವಿಧ ರಾಗಗಳ ಚಿತ್ರಗಳು ಸಂಗೀತ, ಸಾಹಿತ್ಯ ಮತ್ತು ಚಿತ್ರಗಳನ್ನೊಳಗೊಂಡು ಆ ರಾಗಗಳು ಸೂಚಿಸುವ ವಿರಹ ವಾತ್ಸಲ್ಯ, ಪ್ರೇಮ ಸಂಭ್ರಮಗಳನ್ನು ಕಾಣುತ್ತೇವೆ. ಮಿಣಜಗಿ ಅವರು ಜಲವರ್ಣ ಹಾಗೂ ತೈಲವರ್ಣ ಈ ಎರಡೂ ಮಾಧ್ಯಮದಲ್ಲೂ ಚಿತ್ರ ರಚಿಸಲು ಸಿದ್ಧಹಸ್ತರು.[೩೫]

**ಜಿ. ಎಸ್. ದಂಡಾವತಿಮಠ**

ಶರೀರಕ್ಕೆ ವಯಸ್ಸಾಗಿದ್ದರೂ ಅವರ ಕುಂಚಕ್ಕೆ ಮಾತ್ರ ವಿಶ್ರಾಂತಿ ಎಂಬುದಿರಲಿಲ್ಲ. ನಿವೃತ್ತಿಯ ನಂತರವೂ ರೇಖೆ ಮೂಡಿಸದೇ ಬಣ್ಣ ಲೇಪಿಸದೇ ಇರುತ್ತಿರಲಿಲ್ಲ. ಇದು ಅವರ ಗುರುಗಳು ಜೀವನದುದ್ದಕ್ಕೂ ಕಲಾದೀಕ್ಷೆಯನ್ನು ನಡೆಸಿಕೊಂಡು ಹೋಗಬೇಕೆಂದು ಕಲಾ ವ್ರತವನ್ನು ಅನುಗ್ರಹಿಸಿದ್ದರಂತೆ. ಅವರ ಗುರುಗಳ ಬಗ್ಗೆ ಈ ರೀತಿ ದಂಡಾವತಿಮಠರು ಹೇಳುತ್ತಾರೆ- ನಮ್ಮ ಗುರುಗಳು ಪ್ರತಿದಿನವೂ ಒಂದಾದರೂ ಕಲಾಕೃತಿಯನ್ನು ರಚಿಸದೆ

---

೩೪. ಡಾ.ಲಕ್ಷ್ಮೀ ದೇವಿ ಗವಾಯಿ, ಎಂ.ಎ.ಚೆಟ್ಟಿ ಜೀವನ ಹಾಗೂ ಕಲಾಕೃತಿಗಳು, ಪುಟ ೭೬
೩೫. -ಅದೇ- ಪುಟ ೭೭

ಬಿಡುತ್ತಿರಲಿಲ್ಲ. ಕೃತಿ ರಚನೆ ಸಾಧ್ಯವಾಗದಿದ್ದರೆ ಕೊನೆಯ ಪಕ್ಷ ಒಂದು ರೇಖಾಚಿತ್ರವನ್ನಾದರೂ ಬರೆಯದೇ ಊಟ ಮಾಡುತ್ತಿರಲಿಲ್ಲ. ಅವರು ನನಗೂ ಅದನ್ನೇ ಬೋಧಿಸಿದರು. ಅವರು ಆದೇಶದಂತೆ ನಾನು ಈ ವ್ರತವನ್ನು ತಪ್ಪದೇ ನಡೆಸಿಕೊಂಡು ಬಂದಿದ್ದೆನೆ. ಎಂದು ಗುರುಗಳ ಬಗ್ಗೆ ಅತ್ಯಂತ ಭಾವುಕರಾಗಿ ಹೇಳಿದ್ದಾರೆ.

ಈ ರೀತಿ ಜೀವನದುದ್ದಕ್ಕೂ ಕಲಾ ಸೇವೆಯನ್ನು ಮಾಡುತ್ತಾ ಬಂದಂಥ ದಂಡಾವತಿಮಠರ ಹೆಸರು ಗಂಗಾಧರಯ್ಯ. ಬೈಲಹೊಂಗಲದ ಸುಸಂಸ್ಕೃತ ಜಂಗಮ ಮನೆತನದ ದೈವಭಕ್ತಿ, ಧರ್ಮನಿಷ್ಠೆ ಸಾತ್ವಿಕ ಜೀವನ ನಡೆಸುತ್ತಿದ್ದ ಶಂಕರಯ್ಯ ಹಾಗೂ ಗಂಗಾಬಾಯಿಯವರ ಉದರದಲ್ಲಿ ೧೯೦೦ರ ೨೧ ರಂದು ಜನ್ಮ ತಾಳಿದರು. ಕಲೆ ಇವರಿಗೆ ರಕ್ತಗತವಾಗಿ ಬಂದುದು. ತಾಯಿ ಹಬ್ಬ ಹರಿದಿನಗಳಲ್ಲಿ ಗೌರಿ, ಗಣೇಶ. ಬಸವಣ್ಣ ಮುಂತಾದ ಮೂರ್ತಿಗಳನ್ನು ಆಸಕ್ತಿಯಿಂದ ಕೈಯಾರೆ ರಚಿಸುತ್ತಿದ್ದರು. ಬಾಲ್ಯದಲ್ಲಿಯೇ ಇವರೂ ಮೂರ್ತಿಗಳನ್ನು ರಚಿಸುತ್ತಿದ್ದರು. ಪ್ರಾಥಮಿಕ-ಮಾಧ್ಯಮಿಕ ಶಿಕ್ಷಣ ಮುಗಿಸಿದ ಇವರಿಗೆ ಅವರಲ್ಲಿರುವ ಸುಪ್ತ ಪ್ರತಿಭೆಗೆ ಕಲಾ ಶಿಕ್ಷಣ ಕೊಡಿಸುವ ಸಾಮರ್ಥ್ಯ ತಂದೆ- ತಾಯಿಗಳಲ್ಲಿರಲಿಲ್ಲ. ಅಂತೆಯೇ ಹಳ್ಳಿಹಳ್ಳಿಗಳನ್ನು ಸುತ್ತಿ ಮೈಲಿ ಚುಚ್ಚುವ ಸರಕಾರಿ ನೌಕರಿ ಪಡೆದರು.

ತಮ್ಮ ಕೆಲಸ ಮುಗಿದ ನಂತರ ಉಳಿದ ಸಮಯದಲ್ಲಿ ಅವರಲ್ಲಿದ್ದ ಕಲಾಪ್ರತಿಭೆ ಜಾಗೃತವಾಗುತ್ತಿತ್ತು. ಆಗ ಆನಂದಕ್ಕೋಸ್ಕರ ಚಿತ್ರ ಬರೆಯುವುದೊಂದೇ ಕೆಲಸ. ಆದರೆ ಅವುಗಳನ್ನು ನೋಡಿ ಮಾರ್ಗದರ್ಶನ ನೀಡುವವರು ಯಾರು ಇರಲಿಲ್ಲ. "ಒಂದು ದಿನ ಅವರಿಗೆ ಯಾರೋ[೩೬] ಅವರ ಚಿತ್ರಗಳನ್ನು ಶ್ರೀ ಎನ್. ಎಮ್. ನೆರ್ಲೆಕರ್ ಧಾರವಾಡದ ಸರಕಾರಿ ಶಾಲೆಯಲ್ಲಿ ಕಲಾ ಶಿಕ್ಷಕರಿಗೆ ತೋರಿಸಲು ಹೇಳಿದರು. ಅದರಂತೆ ದಂಡಾವತಿಮಠರು ಧಾರವಾಡಕ್ಕೆ ಬಂದು ಹೆದರುತ್ತಲೇ ಚಿತ್ರಗಳನ್ನು ತೋರಿಸಿದರು. ಅವರು ಆ ಚಿತ್ರಗಳನ್ನು ನೋಡಿ ಆಶ್ಚರ್ಯಚಕಿತರಾಗಿ, ಯಾವುದಾದರೂ ಕಲಾ ಪರೀಕ್ಷೆಯನ್ನು ಪಾಸು ಮಾಡಿರುವೆಯಾ? ಎಂದು ಕೇಳಿದರು ಇಲ್ಲವೆಂದರು. ಕಣ್ಣಮುಂದೆ ಇರುವ ಚಿತ್ರಗಳ ನೈಪುಣ್ಯವನ್ನು ಕಂಡು ಸಂತೋಷಿಸಿ ಅವರಲ್ಲಿರುವ ಕಲಾಪ್ರತಿಭೆಯನ್ನು ಗುರ್ತಿಸಿ ನಿಮ್ಮ ಕೆಲಸ ಚಿತ್ರಕಲೆಯದು. ಈ ಹುದ್ದೆಯನ್ನು ನೀವು ಕೂಡಲೇ ಬಿಡಬೇಕು. ಇಲ್ಲವಾದಲ್ಲಿ ನಿಮ್ಮನ್ನು ನೀವೇ ವಂಚಿಸಿದಂತೆ"ಎಂದು ತಿಳಿಸಿದರು ಆಗ ದಂಡಾವತಿಮಠರು ಅವರ ಸಲಹೆಯಂತೆ ಮುಂಬಯಿಗೆ ಅವರ ಮಾವನವರಾದ ಕುಲಕರ್ಣಿಯವರ ಸಹಾಯದಿಂದ ಬಂದು ಸರ್ ಜೆ. ಜೆ. ಸ್ಕೂರ್ಲ ಆಫ್ ಆರ್ಟ್ ೧೯೨೩ ರಲ್ಲಿ ಸೇರಿದರು.

ಕಲಾ ಶಾಲೆಯ ಉತ್ತಮ ವಾತಾವರಣ ಮತ್ತು ಕಲೆಗಾಗಿಯೇ ತಮ್ಮನ್ನು ಅರ್ಪಿಸಿಕೊಂಡಂಥ, ದುರಂಧರ, ಚುಡೇಕರ, ತಾಸ್ಕರರಂಥ ಶಿಕ್ಷಕರ ಆದರ್ಶಗಳು ದಂಡಾವತಿಮಠರ ಮೇಲೆ ಅಚ್ಚಳಿಯದ ಪ್ರಭಾವವನ್ನು ಬೀರಿ ಅಸ್ಪಷ್ಟವಾಗಿದ್ದ ಚಿತ್ರಕಲೆ ಬೆಳಕಿಗೆ ಬರಲು ಕಾರಣರಾದರು. ಅಲ್ಲಿಯೇ ರಬಕವಿಯ ಶ್ರೀ ಗಂಗಾಧರಪ್ಪ ಸಾಬೋಜಿ ಅವರ ಅಡಿಯಲ್ಲಿ ವಸತಿ ಆಶ್ರಯ ಪಡೆದರು ಮತ್ತು ಬಿಳೂರು ಮಹಾಸ್ವಾಮಿಗಳು ಅವರಿಗೆ ಈ ಸಂದರ್ಭದಲ್ಲಿ ನೆರವು ನೀಡಿದರು. ಹೀಗೆ ದಂಡಾವತಿಮಠರು ಜೀವನದ ಎರಡು ತಿರುವುಗಳನ್ನು ದಾಟಿ ೧೯೩೧ರಲ್ಲಿ ಡಿಪ್ಲೋಮಾ ಪದವಿಯನ್ನು ಗಳಿಸಿದರು.

ದಂಡಾವತಿಮಠರು ಹುಟ್ಟುಕಲಾವಿದರೆಂಬುದನ್ನು ಅವರು ವಿದ್ಯಾರ್ಥಿ ದೆಸೆಯಲ್ಲಿದ್ದಾಗ ಗಳಿಸಿದ ಕೀರ್ತಿಯಿಂದಲೇ ಕಂಡುಕೊಳ್ಳಬಹುದು. ಉಚ್ಚಕಲಾ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿ ಸ್ಮರಣಚಿತ್ರದಲ್ಲಿ ಪ್ರಾವಿಣ್ಯ ಪಾರಿತೋಷಕ ಪಡೆದರು. ೧೯೨೩ ಮತ್ತು ೧೯೨೯ ರಲ್ಲಿ ಇವರು ಜಲವರ್ಣದ ಚಿತ್ರವೊಂದಕ್ಕೆ[೩೭] ಮುಂಬಯಿ ಆರ್ಟ್ ಸೊಸೈಟಿಯವರು ಪ್ರಥಮ ಬಹುಮಾನವನ್ನು ನೀಡಿದರು, ೧೯೩೮ ರಲ್ಲಿ ಕ್ರಮವಾಗಿ ಮದ್ರಾಸ್ ಮತ್ತು ಮುಂಬಯಿ ಆರ್ಟ್ ಸೊಸೈಟಿಯವರು ಇವರ ಬಳಪದ ವರ್ಣಚಿತ್ರವೊಂದಕ್ಕೆ ಪ್ರದರ್ಶನದಲ್ಲಿ ಸುವರ್ಣ ಪದಕವನ್ನೂ ಪಡೆದರು. ಜ್ಞಾನಕ್ಕಾಗಿ ಸದಾ ಹಂಬಲಿಸುವ ನಿರುತ್ಸಾಹವನ್ನು ಅರಿಯದ ಮನಸ್ಸು ಗುರುವಾದವನಿಗೆ ಅಗತ್ಯ. ಬಿಂಕ ಅಹಂಕಾರಗಳು ಗುರು ಚೈತನ್ಯಕ್ಕೆ ಹೊರತಾದ ಗುಣಗಳು ಸಚ್ಚಾರಿತ್ರ್ಯ, ಆತ್ಮೀಯತೆ, ವಾತ್ಸಲ್ಯಗಳು

೩೬. ಡಾ.ಲಕ್ಷ್ಮೀ ದೇವಿ ಗವಾಯಿ, ಎಂ.ಎ.ಚೆಟ್ಟಿ ಜೀವನ ಹಾಗೂ ಕಲಾಕೃತಿಗಳು, ಪುಟ ೮೧
೩೭. -ಅದೇ- ಪುಟ ೮೨

ವ್ಯಕ್ತಿಯಲ್ಲಿ ಗುರುತ್ವವನ್ನು ತುಂಬುವ ಗುಣಗಳು ಅಂತಹ ಒಬ್ಬ ಸದ್ಗುಣಗಳ ಕಲಾಗುರುವಾದವರು. ಈಗಾಗಲೇ ತಿಳಿಸಿದಂತೆ ಶ್ರೀ ಡಿ. ಜಿ. ಬಡಿಗೇರ ಅವರು ಸ್ಥಾಪಿಸಿದ ನೂತನ ಕಲಾಮಂದಿರ ವ್ಹಿ. ಆರ್. ರಾವ್. ಅವರು ನೋಡಿಕ್ಕೊಳ್ಳುತ್ತಿದ್ದರು ಆದರೆ ಅವರು ತಮ್ಮ ಕುಟುಂಬ ಸಮೇತವಾಗಿ ವಿದೇಶದಲ್ಲಿ ನೆಲೆಸುವ ವಿಚಾರ ಮಾಡಿದಾಗ ಕಲಾಶಾಲೆಯ ಜವಾಬ್ದಾರಿ ದಂಡಾವತಿಮಠರಿಗೆ ವಹಿಸಿ ಕೊಡಲಾಯಿತು. ಸ್ವತಂತ್ರ ಕಲಾವಿದರಾಗಿಯೋ ಅಥವಾ ಬೇರೆ ಸರಕಾರಿ ನೌಕರಿಯನ್ನು ಮಾಡಬಹುದಾಗಿತ್ತು. ಆದರೆ ಕಲಾಸೇವೆಯೇ ತಮ್ಮ ಗುರಿ ಎಂದು ನಿಶ್ಚಯಿಸಿಕೊಂಡು ಅವರು ನೂತನ ಕಲಾ ಮಂದಿರದ ಪ್ರಿನ್ಸಿಪಾಲರಾದರು. ಶಿಕ್ಷಕರೂ ಆದರು. ಕಲಾಮಂದಿರದ ಆಧಾರಸ್ಥಂಭವಾದರು. ಜೆ. ಜೆ. ಕಲಾಶಾಲೆಗೆ ಸರಿಸಮಾನವಾಗಿ ನಿಲ್ಲುವಂಥ ಭದ್ರಬುನಾದಿ ಹಾಕಿದರು.

ಮುಂಬಯಿಯಂತಹ ಪಟ್ಟಣದಲ್ಲಿ ಬಡತನವನ್ನು ಅಂಟಿಸಿಕೊಂಡು ಕಲಾ ಅಧ್ಯಯನ ಮಾಡಲು ಬಂದ ವಿದ್ಯಾರ್ಥಿಗಳಿಗೆ ತಮ್ಮಿಂದ ಸಾಧ್ಯವಾದ ಎಲ್ಲ ಅನುಕೂಲತೆಗಳನ್ನು ವಿದ್ಯಾರ್ಥಿಗಳಿಗೆ ಒದಗಿಸಿ ಕೊಡುತ್ತಿದ್ದರೆ ವಿನಃ ಅದಕ್ಕಾಗಿ ಅವರನ್ನೆಂದೂ ನೋಯಿಸಲಿಲ್ಲ. ಈ ವಿಚಾರದಲ್ಲಿ ಅವರ ಪ್ರತಿಯೊಬ್ಬ ಶಿಷ್ಯರೂ ಅವರಿಗೆ ಚಿರಋಣಿ. "ವಿದ್ಯಾರ್ಥಿಗಳ ಅಭಿಲಾಷೆಯಂತೆ ಬೇರೆ ಬೇರೆ ಪ್ರಾಂತದ ವೇಷ –ಭೂಷಣಗಳನ್ನು ರೂಪದರ್ಶಿಗಳಿಗೆ ತೊಡಿಸಿ ಚಿತ್ರಣಕ್ಕೆ ಆಸ್ಪದ ಮಾಡಿಕೊಡುತ್ತಿದ್ದರು. ಹಾಗೆಯೇ ಬೇರೆ ಬೇರೆ ಗುಂಪುಗಳನ್ನು ಮಾಡಿ ನಿಸರ್ಗ ಚಿತ್ರಣಕ್ಕೆ ಹಾಗೂ ರೇಖಾ ಚಿತ್ರಣಕ್ಕೂ ಸ್ವತಃ ತಾವೇ ಕರೆದುಕೊಂಡು ಹೋಗುತ್ತಿದ್ದರು. ಹೀಗೆ ಮುಂಜಾನೆಯಿಂದ ಮಧ್ಯಾಹ್ನದವರೆಗೂ ವಿದ್ಯಾರ್ಥಿ ಸಮೂಹದೊಡನೆಯಿದ್ದು ಶಿಕ್ಷಣವನ್ನು ನೀಡುತ್ತಿದ್ದರು. ಇಂತಹ ಗುರುವರ್ಯರು ಶಿಷ್ಯವೃಂದ ಅಪಾರ. ಅವರಲ್ಲಿ ಶ್ರೀ ಕೆ. ಕೆ. ಹೆಬ್ಬಾರ. ಶ್ರೀಯುತರುಗಳಾದ ಎ. ಎ. ಅಲಮೇಲಕರ ಎಸ್. ಎಮ್. ಪಂಡಿತ. ರಝಾ. ಲಕ್ಷ್ಮಣ ಪೈ. ಗಾಯತೊಂಡೆ. ಬರಾಸ್ಕಾರ್. ದಯಾನಂದ ಶೆಟ್ಟಿ. ಡಿಕೊಸ್ಟಾ. ಸಾಬನ್ನವರ. ಮುಂತಾದ ಕಲಾವಿದರು ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಕಲಾವಿದರೆಂದು ಹೆಸರುಗಳಿಸಿದ್ದಾರೆ.

ಕಲೆಗಾಗಿ ತಮ್ಮ ಜೀವನವನ್ನು ಮೀಸಲಾಗಿಟ್ಟ ಇವರಿಗೆ ಕರ್ನಾಟಕ ಲಲಿತಕಲಾ ಆಕಾಡೆಮಿಯು ೧೯೬೭ರಲ್ಲಿ ರಾಜ್ಯ ಪ್ರಶಸ್ತಿ ನೀಡಿತು. ೧೯೨೩ರಿಂದ ೧೯೪೦ ರವರೆಗೆ ಬೆಳಗಾಂವಿಯ ಕರ್ನಾಟಕ ಆರ್ಟ ಸೊಸೈಟಿಯ ಕಾರ್ಯದರ್ಶಿಗಳಾಗಿ ಕೆಲಸ ಮಾಡಿದ ದಂಡಾವತಿಮಠರು ಮುಂಬಯಿಯ ಕಲಾ ಶಿಕ್ಷಣ ಪರೀಕ್ಷೆಗಳಿಗೆ ಪರೀಕ್ಷಕರಾಗಿಯೂ, ಪರೀಕ್ಷಾ ಮಂಡಳಿಯ ಸದಸ್ಯರಾಗಿ ಕಾರ್ಯನಿರ್ಹಿಸಿದ್ದಾರೆ. ಬರೋಡಾ ವಿಶ್ವವಿದ್ಯಾಲಯ ಮುಂಬಯಿಯ ಕಲಾ ಶಾಲೆಗಳ ಫೆಡರೇಶನ್, ಕರ್ನಾಟಕ ವಿ. ವಿ. ಕರ್ನಾಟಕದ ಉಚ್ಚ ಕಲಾ ಪರೀಕ್ಷೆಗಳ ಮಂಡಳಿ, ದಾವಣಗೇರಿ ಸ್ಕೂಲ ಆಫ್ ಆರ್ಟ್ ಸಂಸ್ಥೆಗಳ ಪರೀಕ್ಷಾ ಮಂಡಳಿ ಇವುಗಳ ಕ್ರಿಯಾಶೀಲ ಸದಸ್ಯರಾಗಿ ಕೆಲಸ ನಿರ್ವಹಿಸಿದ್ದಾರೆ.

"ಕಾಶ್ಮೀರಿ ಭಿಕ್ಷುಕ" ಎಂಬ ಭಾವಚಿತ್ರದಲ್ಲಿ ನೆರಳು–ಬೆಳಕುಗಳನ್ನು ಅತ್ಯಂತ ಉತ್ಕೃಷ್ಟ ರೀತಿಯಲ್ಲಿ ತೋರಿಸಿದ್ದಾರೆ. ಹದಿಹರೆಯದ ಮುಖ. ಮುಖದ ಮೇಲೆ ನೀಳವಾಗಿ ಎದ್ದು ಕಾಣುವ[೩೮] ಮೂಗು. ದೀನತೆ ತುಂಬಿದ ಕಣ್ಣುಗಳು. ನೋಡಿದಾಕ್ಷಣ ಕಾಶ್ಮೀರಿ ಎನಿಸುವ ಲಕ್ಷಣಗಳು. ಕುಡಿಮೀಸೆ, ನವುರಾದಗಡ್ಡ, ಚಿಂದಿ ಅರಿವೆ, ಕಲಾತ್ಮಕವಾಗಿ ಭಾವನೆಗಳನ್ನು ಸೆರೆಹಿಡಿಯುವಂತೆ ಲೇಪಿಸಿದ ವರ್ಣಗಳು. ಅಂಗಾಂಗಗಳ ಸೂಕ್ಷ್ಮತೆ. ಹಣೆಯ ಮೇಲಿನ ನೆರಿಗೆಯೂ ಸಹಿತ ಸ್ಪಷ್ಟವಾಗಿ ಕಾಣುತ್ತದೆ. ಆತನ ಮನೋಗತ ಭಾವನೆಗಳು ಸ್ಪುಟವಾಗಿ ಚಿತ್ರದಲ್ಲಿ ಗೋಚರಿಸುತ್ತವೆ. ವರ್ಣಗಳ ಲೇಪನವೆಲ್ಲ ಯರೋಪಿಯನ್ನರ ಪ್ರಭಾವವೆ. ಕರ್ನಾಟಕದವರಾದ ದಂಡಾವತಿಮಠರು ಮುಂಬಯಿಯಂಥ ಪ್ರದೇಶದಲ್ಲಿ ಅತ್ಯುತ್ತಮವಾದ ಕಲಾ ಶಾಲೆಯನ್ನು ನಿರ್ಮಿಸಿ ಕರ್ನಾಟಕ ಜನತೆಯ ಹೆಮ್ಮೆಗೆ ಪಾತ್ರರಾಗಿದ್ದಾರೆ. ಇವರು ೧೯೭೮ ರ ನವಂಬರ ೧೫ ರಂದು ಶಿವಾಧೀನರಾದರು. ಆದರೆ ಕಲಾ ಪ್ರಪಂಚದಲ್ಲಿ ಚಿರಸ್ಮರಣೀಯರಾಗಿ ಉಳಿದಿದ್ದಾರೆ.

---

೩೮. ಡಾ.ಲಕ್ಷ್ಮೀ ದೇವಿ ಗವಾಯಿ, ಎಂ.ಎ.ಚೆಟ್ಟಿ ಜೀವನ ಹಾಗೂ ಕಲಾಕೃತಿಗಳು, ಪುಟ ೮೩

**ಸಿ.ವ್ಹಿ. ಕಾರಡಗಿ**

ಇವರು ಬೈಲಹೊಂಗಲ ತಾಲೂಕಿನ ಗುರ್ಲಹೊಸೂರಿನ ಶ್ರೀಮಂತ ಮನೆತನದ ಶ್ರೀ ವೀರಬಸಪ್ಪ ಹಾಗೂ ಶ್ರೀಮತಿ ಶಿವಾಯವ್ವ ಅವರ ಮಗನಾಗಿ ಜನಿಸಿದರು. ಇವರು ಒಟ್ಟು ೫ ಜನ ಗಂಡು ಮಕ್ಕಳು ಅದರಲ್ಲಿ ಕೊನೆಯವರೆ ಶ್ರೀ ಸಿ.ವ್ಹಿ. ಕಾರಡಗಿಯವರು. ಒಳ್ಳೆಯ ಸಂಸ್ಕಾರ, ಸಂಸ್ಕೃತಿ, ಬಾಲ್ಯದಿಂದಲೇ ದೊರೆಯಿತು. ಅವರ ಶಿಸ್ತಿನ ಬದುಕಿಗೆ ಕಾರಣವಾಯಿತು.

ಇವರ ಬಾಲ್ಯ ಶಿಕ್ಷಣ ಬೆಳಗಾಂವನಲ್ಲಿ ಮುಗಿಸಿದರು. ಬಾಲ್ಯದಲ್ಲಿಯ ಕಲೆಯ ಬಗ್ಗೆ ಆಸಕ್ತಿ ಉಳ್ಳವರಾಗಿದ್ದರೂ ಮುಂದೆ ಚಿತ್ರಕಲಾ ಅಭ್ಯಾಸಕ್ಕಾಗಿ ಮುಂಬಯಿಯ ಸರ್ ಜೆ. ಜೆ. ಕಲಾ ಶಾಲೆಯನ್ನು ಸೇರಿದರು. "ಮೊದಲಿನಿಂದಲೂ ನಾವಿಬ್ಬರೂ ಸರ್ ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ್ ಮುಂಬಯಿಯಲ್ಲಿ ಕಲಿತು ಡಿಪ್ಲೋಮಾ ಇನ್ ಪೇಂಟಿಂಗ್ ಪಾಸಾದೇವು" ಎಂದು ಡಿ. ವ್ಹಿ. ಹಾಲಭಾವಿಯವರು ಉಲ್ಲೇಖಿಸಿರುವಂತೆ ಕಾರಡಗಿಯವರು ಸಹಿತ ೧೯೨೬ರಲ್ಲಿ ಮುಂಬಯಿಯ ಸರ್ ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ್[೫೯] ಪ್ರವೇಶವನ್ನು ಪಡೆದಿದ್ದಾರೆ. ಯುರೋಪಿಯನ್ನ ಹಾಗೂ ಆಗೀನ ಕಲಾ ಗುರುಗಳ ಪ್ರಭಾವ ಇವರ ಮೇಲು ಸಾಕಷ್ಟಿದೆ.

ಡಿಪ್ಲೋಮಾ ಮುಗಿಸಿದ ನಂತರ ಮುಂದೆ ಬೆಳಗಾಂವಿಯ ಸರದಾರ್ ಹೈಸ್ಕೂಲನಲ್ಲಿ ಡ್ರಾಯಿಂಗ್ ಶಿಕ್ಷಕರಾಗಿ ಕೆಲಸ ನಿರ್ವಹಿಸಿದರು. ಅಲ್ಲದೇ "ಬಿ.ಇಡ್. ಕಾಲೇಜಿಗೂ ವಾರಕ್ಕೆ ಒಂದು ಸಾರಿ ಡ್ರಾಯಿಂಗ್ ಕಲಿಸಲು ಹೋಗುತ್ತಿದ್ದರು. ಪಾಠ ಹೇಳಿಕೊಡುವುದರಲ್ಲಿ ಬಹಳ ಆಸಕ್ತಿಯನ್ನು ಹೊಂದಿದವರಾಗಿದ್ದರು." ಅಲ್ಲದೇ ಕರ್ನಾಟಕದಿಂದ ಮುಂಬಯಿಗೆ ಚಿತ್ರಕಲಾಭ್ಯಾಸಕ್ಕೆಂದು ಹೋಗುವವರಿಗೆಲ್ಲ ಬಹಳ ಸಹಾಯವನ್ನು ಮಾಡುತ್ತಿದ್ದರು. ಕಾರಡಗಿ ಅವರು ಒಂದು ರೀತಿಯಲ್ಲಿ ನನಗೆ ಗುರುಗಳು ಹೌದು. ಜೆ. ಜೆ. ಸ್ಕೂಲ್ ಆಫ್ ಆರ್ಟ್ಸಗೆ ಪ್ರವೇಶ ಪಡೆಯಬೇಕೆಂದರೆ ಮೊದಲಿಗೆ ಕೆಲವು (ಕರಡು) ಚಿತ್ರಗಳನ್ನು ಚಿತ್ರಿಸಿ ಕಳಿಸಬೇಕಾಗುತ್ತಿತ್ತು. ನಂತರ ಸಂದರ್ಶನಕ್ಕೆ ಕರೆಯುತ್ತಿದ್ದರು. ಅಂತಹ ಸಂದಂಭದಲ್ಲಿ ಕಾರಡಗಿಯವರು ಚಿತ್ರಗಳನ್ನು ಯಾವ ರೀತಿ ಚಿತ್ರಿಸಬೇಕು ಎಂಬುದನ್ನು ತಿಳಿಸಿಕೊಟ್ಟು ಜೆ. ಜೆ. ಸ್ಕೂಲ್ ಆಫ್ ಆರ್ಟ್ಸನಲ್ಲಿ ಪ್ರವೇಶ ದೊರೆಕಿಸಿಕೊಡುವಲ್ಲಿ ಸಹಾಯ ಮಾಡಿದ್ದರು" ಎಂದು ವ್ಹಿ. ಸಿ. ಮಾಲಗಿತ್ತಿಯವರು ಇಂದಿಗೂ ನೆನೆಯುತ್ತಾರೆ.

ರಾಜ್ಯ ಪುನರ್ಘಟನೆಯ ಮೈಸೂರ ರಾಜ್ಯದಲ್ಲಿ ಕಲಾ ಶಿಕ್ಷಣವು ಅವನತಿಗಿಳಿದಿತ್ತು. ಆಗ ೧೯೬೩ ರ ಕಲಾ ಶಿಕ್ಷಣ ಮಂಡಳಿ ರಚನೆಯಾಯಿತು. ಕಲಾ ಶಿಕ್ಷಣದ ಪರೀಕ್ಷೆಗಳು ಇಲ್ಲಿ ನಡೆಯುವಂತಹ ವ್ಯವಸ್ಥೆಯಾಯಿತು. ಆ ಸಂದರ್ಭದಲ್ಲಿ ಕಾರಡಗಿಯವರು. ಆರ್ಟ್ಸ್ ಎಜ್ಯುಕೇಶನ್ ಇನ್ಸ್‌ಪೆಕ್ಟರ್ ಆಗಿ ನೇಮಕಗೊಂಡರು. ಅತ್ಯಂತ ಎತ್ತರದ ಕಟ್ಟುಮಸ್ತಾದ ನಿಲುವು ಯುರೋಪಿಯನ್‌ರಂತೆ ಯಾವಾಗಲೂ ಪ್ಯಾಂಟು ಕೋಟು ಧರಿಸುತ್ತಿದ್ದರು. ಶಾಲೆಯೊಳಗೆ ತಪಾಸಣೆಗೆ ಬಂದರೆ ಎಲ್ಲರೂ ಭಯಪಡುತ್ತಿದ್ದರು. ಆದರೆ ಅಷ್ಟೆ ಮೃದು, ಸರಳ, ನೇರ ಸ್ವಭಾವದ ವ್ಯಕ್ತಿತ್ವ ಅವರದಾಗಿತ್ತು" ಎಂದು ವ್ಹಿ. ಸಿ. ಮಾಲಗಿತ್ತಿಯವರ ಅಭಿಪ್ರಾಯವಾಗಿದೆ.

ಕಾರಡಗಿಯವರು ಸಮಕಾಲಿನರಂತೆ ನೈಜ ಶೈಲಿಯಲ್ಲೆ ಭಾವಚಿತ್ರ. ಸಂಯೋಜನಾ ಚಿತ್ರ ಹಾಗೂ ನಿಸರ್ಗ ಚಿತ್ರಗಳನ್ನು ತೈಲ ಹಾಗೂ ಜಲವರ್ಣಗಳಲ್ಲಿ ಚಿತ್ರಿಸಿದ್ದಾರೆ. ಹೆಚ್ಚಾಗಿ ಇವರು ಭಾವಚಿತ್ರಗಳನ್ನು ಚಿತ್ರಿಸಿಕೊಟ್ಟಿದ್ದಾರೆ. ಅಲ್ಲದೇ ಕಲಾ ಶಿಕ್ಷಣದ ಕಡೆ ಗಮನ ಹರಿಸಿದ್ದರಿಂದ ಇವರು ಚಿತ್ರಿಸಿದ ಚಿತ್ರಗಳು ಅತಿ ವಿರಳ. ಒಳ್ಳೆ ಕಲಾವಿದರೂ ಹೌದು. ಹಾಗೂ ಚನ್ನಬಸವ ಪುರಾಣಕ್ಕೆ ಸಂಬಂಧಿಸಿದಂತೆ ಚಿತ್ರಗಳನ್ನು ಮಾಡಿಕೊಟ್ಟಿದ್ದಾರೆ. ಕೆಲವು ಪ್ರದರ್ಶನಗಳಲ್ಲಿ ಬಹುಮಾನಗಳನ್ನು ಸಹಿತ ಪಡೆದಿದ್ದಾರೆ.

ವ್ಹಿ. ಸಿ.ಮಾಲಗಿತ್ತಿಯವರ ಹೇಳಿಕೆಯಂತೆ ಕಾರಡಗಿಯವರು ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ಬಹಳ ಚಿತ್ರಗಳನ್ನು ರಚಿಸುತ್ತಿದ್ದರಲ್ಲದೇ, ಅವುಗಳನ್ನು ಕಲಾ ಪ್ರದರ್ಶನಕ್ಕೂ ಕಳಿಸಿಕೊಡುತ್ತಿದ್ದರಂತೆ. ಆದರೆ ಬೆಳಗಾಂವಿಗೆ

---

೫೯. ಡಾ.ಲಕ್ಷ್ಮೀ ದೇವಿ ಗವಾಯಿ, ಎಂ.ಎ.ಚೆಟ್ಟಿ ಜೀವನ ಹಾಗೂ ಕಲಾಕೃತಿಗಳು, ಪುಟ ೮೪

ಬಂದ ಮೇಲೆ ಅವರು ಯಾವ ಕಲಾ ಪ್ರದರ್ಶನವನ್ನೂ ಮಾಡಲಿಲ್ಲ. ಹೀಗಾಗಿ ಅವರ ಚಿತ್ರಗಳು ಅವರ ಮನೆಯಲ್ಲಿಯೂ ನೋಡಲು ಸಿಗುವದಿಲ್ಲ.[೪೦]

ಕಾರಡಗಿಯುವರು ಎಂ. ಕೆ. ಹುಬ್ಬಳ್ಳಿಯು ಶ್ರೀಮತಿ ಅನ್ನಪೂರ್ಣಾ ಎಂಬುವರನ್ನು ಮದುವೆಯಾದರು ಆದರೆ ಅವರಿಗೆ ಮಕ್ಕಳಾಗಲಿಲ್ಲ. ಮೈಸೂರ ರಾಜ್ಯದ ಡ್ರಾಯಿಂಗ್ ಇನ್ಸಪೆಕ್ಟರರಾಗಿ ನಿವೃತ್ತಿ ಹೊಂದುವದಕ್ಕಿಂತ ಮೊದಲೇ ಅನಾರೋಗ್ಯದ ಕಾರಣದಿಂದ ೧೬.೦೩.೧೯೬೬ ರಂದು ಬೆಂಗಳೂರಿನಲ್ಲಿ ಕೊನೆಯುಸಿರೆಳೆದರು.

ಸಾಮಾಜಿಕ ಹಾಗೂ ಧಾರ್ಮಿಕ ವಿಷಯಗಳಿಗೆ ಸಂಬಂಧಿಸಿದಂತೆ ಕೆಲವು ಚಿತ್ರಗಳನ್ನು ರಚಿಸಿದ್ದಾರೆ. ಇವರ ಸಂಯೋಜನಾ ಚಿತ್ರಗಳಲ್ಲಿಯ ಆಕೃತಿಗಳು ಅತ್ಯಂತ ಶಕ್ತಿಯುತವಾದವು. ಚಿತ್ರದಲ್ಲಿ ಪ್ರಮುಖವಾದ ಆಕೃತಿಗೆ ಪ್ರಕಾಶಮಾನವಾದ ವರ್ಣಗಳನ್ನು ಬಳಸುತ್ತಿದ್ದರು ಆಕೃತಿಗಳಿಗೆ ಗೌಣವಾಗಿ ಅಷ್ಟೇ ಮಸುಕಾದ ವರ್ಣಗಳನ್ನು ಬಳಸುತ್ತಿದ್ದರು ಅಷ್ಟೇ ಲಯಬದ್ದವಾದ ರೇಖೆಗಳ, ವರ್ಣಮೇಳ ಎಂಥವರ ಮನಸ್ಸನ್ನು ಸೂರೆಗೊಳ್ಳುತ್ತದೆ. ಭಾವ ಚಿತ್ರಗಳು ಅಷ್ಟೇ ಉತ್ಕ್ರಷ್ಟವಾಗಿದೆ. ಚರ್ಮದ ನೈಜತೆಯಲ್ಲಿ ಜೆ. ಜೆ. ಕಲಾಶಾಲೆಯ ವರ್ಣಗಳ ಬಳಕೆಯನ್ನು ಕಾಣುತ್ತೇವೆ. ವರ್ಣವನ್ನು ಹಿತಮಿತವಾಗಿ ಮಿಶ್ರಣಮಾಡಿ ನುಣುಪಾಗಿ ಲೇಪಿಸಿರುವದನ್ನು ಕಾಣಬಹುದು.

ಚೆನ್ನಬಸವ ಪುರಾಣಕ್ಕಾಗಿ ಚಿತ್ರಿಸಿಕೊಟ್ಟ ಚಿತ್ರ ಇದನ್ನು ೧೯೩೪ ರಲ್ಲಿ ಚಿತ್ರಿಸಿದ್ದಾರೆ. ಅಂಧಕಾಸುರನ ಓಲಗ "ಶಿವನ ಕೃಪೆಯಿಂದ ಹಿರಣ್ಯಕಶಪುವಿಗೆ ದೊರೆತ ಅಂಧಕಾಸುರನು ಬೆಳೆದಂತೆ ದೇವತೆಗಳಿಗೆ ಉಪಟಳ ಜಾಸ್ತಿಯಾಯಿತು. ದೇವಲೋಕವನ್ನೇ ಗೆಲ್ಲಲು ಬಯಸಿ, ಎಲ್ಲ ರಾಕ್ಷಸರ ಓಲಗವನ್ನು ಕರೆದು ಆ ಸಂದರ್ಭದಲ್ಲಿ ನಾರದ ಬಂದು ಶಿವನೇ ನಿನ್ನ ಸಂಹಾರಕ್ಕಾಗಿ ಬರುತ್ತಿರುವುದಾಗಿ ತಿಳಿಸಿದಾಗ ಅಂಧಕಾಸುರ ಕೋಪಗೊಂಡು ಯುದ್ಧ ಸಾರಿದನು. ಅಷ್ಟರಲ್ಲಿ ಅಲ್ಲಿಗೆ ಬಂದ ಪ್ರಹ್ಲಾದನು. ಶಿವನೇ ನಿನ್ನನ್ನು ಮಾಡಿರುವನು ಆತನ ಎದುರು ಯುದ್ಧ ಸಲ್ಲದು" ಎಂದು ಹೇಳಿದನು. ಈ ಸನ್ನಿವೇಶದ ದೃಶ್ಯವಿದು.

ಚಿತ್ರದಲ್ಲಿ ಅಂಧಕಾಸುರನ ಓಲಗ ನಡೆದಿದೆ. ಸಿಂಹಾಸನದ ಮೇಲೆ ಅಂಧಕಾಸುರ ಹಾಗೂ ನಾರದ ಆಸೀನರಾಗಿದ್ದಾರೆ. ಇಕ್ಕೆಲೆಗಳಲ್ಲಿ ರಾಕ್ಷಸರು ಶಸ್ತ್ರಸಮೇತವಾಗಿ ಕುಳಿತಿದ್ದಾರೆ. ಪ್ರಹ್ಲಾದನು ರಾಕ್ಷಸನಿಗೆ ಯುದ್ಧ ಸಲ್ಲದು ಎಂದು ಕೈಮಾಡಿ ಹೇಳುತ್ತಿದ್ದಾನೆ. ಹಿನ್ನೆಲೆಯಲ್ಲಿ ಚಾಮರ ಬೀಸುತ್ತಿರುವ ಪರಿಚಾರಿಕೆಯರು ನಿಂತಿದ್ದಾರೆ. ಪ್ರಹ್ಲಾದನು ಮಾತಿಗೆ ಅಂಧಕಾಸುರನ ವ್ಯಂಗ್ಯದ ನಗೆಭಾವವಿದೆ. ಉಳಿದ ಸಭಿಕರ ಮುಖದಲ್ಲಿಯೂ ಅದೇ ತಿರಸ್ಕಾರದ ಭಾವನೆ ಇದ್ದು ಒಬ್ಬರಿಗೊಬ್ಬರು ಮಾತನಾಡಿಕೊಳ್ಳುತ್ತಿದ್ದಾರೆ. ಆಕೃತಿಗಳು ಅವರ ಗುಣ. ಸ್ವಭಾವಗಳಿಗನುಗುಣವಾಗಿ[೪೧] ಚಿತ್ರಿಸಿದ್ದಾರೆ. ಕಾರಡಗಿಯವರು ಇಲ್ಲಿ ಪ್ರಮುಖ ಆಕೃತಿಗಳಾದ ಪ್ರಹ್ಲಾದ, ನಾರದ, ಹಾಗೂ ಅಂಧಕಾಸುರನಿಗೆ ಮಾತ್ರ ಪ್ರಕಾಶಮಾನವಾದ ವರ್ಣಗಳಿಂದ ಚಿತ್ರಿಸಿದ್ದಾರೆ. ಉಳಿದ ಜನರನ್ನು ಗೌಣವಾಗಿ ಮಸಕಾಗಿ ಚಿತ್ರಿಸಿದ್ದಾರೆ. ಸಂಯೋಜನೆಯಲ್ಲಿ ನೋಡುಗನ ದೃಷ್ಟಿ ಪ್ರಮುಖ ವ್ಯಕ್ತಿಗಳ ಮೇಲೆ ನೆಟ್ಟು ನಂತರ ಸುತ್ತೆಲ್ಲ ಹರಿಯುತ್ತದೆ. ನೆಲಹಾಸು ಅದರ ಮೇಲೆ ನಕ್ಷೆ ಎಲ್ಲವನ್ನೂ ವಿವರವಾಗಿ ಚಿತ್ರಿಸಿದ್ದಾರೆ. ಹಿತಮಿತವಾದ ಛಾಯಾಂಕಣವಿದೆ. ಪ್ರಖರ ಹಾಗೂ ಸೌಮ್ಯ ವರ್ಣಗಳ ಲೇಪನವಿದೆ. ಇದೊಂದು ಉತ್ಕೃಷ್ಟ ಸಂಯೋಜನಾ ಚಿತ್ರವಾಗಿದೆ.

ಕಾರಡಗಿಯವರ ಬಗ್ಗೆ ಎಲ್ಲಿಯೂ ಲೇಖನಗಳು ಬರದೆ ಇರುವದರಿಂದ ಹಾಗೂ ಅವರಿಗೆ ಮಕ್ಕಳು ಇಲ್ಲದೆ ಇರುವದರಿಂದ ಅವರ ವಿವರವಾದ ಮಾಹಿತಿ ದೊರೆಯದ ಕಾರಣ. ಅವರ ನಿಕಟವರ್ತಿಗಳ ಸಂದರ್ಶನದ ಮೂಲಕ ಸಂಕ್ಷಿಪ್ತವಾಗಿ ಇಲ್ಲಿ ಅವರ ಬಗ್ಗೆ ಹೇಳಲು ಸಾಧ್ಯವಾಗಿದೆ.

---

೪೦. ಡಾ.ಲಕ್ಷ್ಮೀ ದೇವಿ ಗವಾಯಿ, ಎಂ.ಎ.ಚೆಟ್ಟಿ ಜೀವನ ಹಾಗೂ ಕಲಾಕೃತಿಗಳು, ಪುಟ ೮೫
೪೧. -ಅದೇ- ಪುಟ ೮೬

**ಅಮೀನ ಸಾಹೇಬ ಕಮಡೋಳಿ**

ಕಲಾವಿದ ಅಮೀನ ಸಾಹೇಬ ಕಮಡೋಳಿ ಸುಮಾರು ೧೯೦೦ ರಲ್ಲಿ ಲಕ್ಷ್ಮೇಶ್ವರದ ಸುಸಂಸ್ಕೃತ ಮನೆತನದಲ್ಲಿ ಜನಿಸಿದ್ದರು. ವಿದ್ಯಾರ್ಜನೆಗಿಂತಲೂ ಚಿತ್ರಕಲೆಯಲ್ಲಿ ಆಸಕ್ತಿ ಹೆಚ್ಚಾಗಿತ್ತು. ಈ ಬಾಲಕನ ಕಲಾಭಿಲಾಷೆಯನ್ನು ಗುರುತಿಸಿದ ಹಿತೈಷಿಗಳು ಮುಂಬಯಿಯ ಸರ್ ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ ಸೇರಲು ಸಲಹೆ ಮಾಡಿದರು. ತಂದೆ – ತಾಯಿಯನ್ನು ಕಳೆದುಕೊಂಡಿದ್ದ ಕಮಡೋಳಿಗೆ ಅಣ್ಣ ಉಮಾಮಸಾಹೇಬನೇ ಆಶ್ರಯವಾಗಿ ಬಂದ. ಅವರು ಆ ಕೊರತೆಯನ್ನು ನೀಗಿಸಿದರು.

೧೯೧೮ರಲ್ಲಿ ಮುಂಬಯಿಗೆ ಪ್ರಯಾಣ ಬೆಳೆಸಿದರು. ಅಲ್ಲಿಯ ಕಲಾವಾತಾವರಣ ಇವರ ಪ್ರತಿಭೆಗೆ ಸ್ಫೂರ್ತಿದಾಯಕವಾಯಿತು. ೧೯೨೩ ರಲ್ಲಿ ಅವರು, ಆರ್ಟ ಮಾಸ್ಟರ್ ಪರೀಕ್ಷೆಯನ್ನು ಪ್ರಥಮ ವರ್ಗದಲ್ಲಿ ಪಾಸಾದರು. ತಮ್ಮ ವಿದ್ಯಾರ್ಥಿ ಜೀವನದುದ್ದಕ್ಕೂ ಪ್ರತಿಭಾ ಪುರಸ್ಕಾರದ ಶಿಷ್ಯ ವೇತನಗಳನ್ನು ಪಡೆದಿದ್ದರು. ಪ್ರತಿಯೊಂದು ಕಲಾಪ್ರದರ್ಶನದಲ್ಲಿ ಕಲಾಕೃತಿಗಳಿಗೆ ಪ್ರಶಸ್ತಿ. ಬಹುಮಾನ ಪಡೆಯುತ್ತಿದ್ದರು ಹೀಗೆ ವಿದ್ಯಾರ್ಥಿಯಾಗಿ ಒಂದೆರಡೂ ವರ್ಷಗಳಲ್ಲಿ ಕಮಡೋಳಿ ಒಬ್ಬ ಪ್ರತಿಭಾವಂತ ಕಲಾವಿದರಾಗಿ ಹೆಸರಾದರು. ೧೯೨೦ರಲ್ಲಿ ಅವರು ಅಡ್ವಾನ್ಸ ಪೇಂಟಿಂಗ್ ಅಭ್ಯಾಸ ಮಾಡುತ್ತಿರುವಾಗ ಭಿತ್ತಿಚಿತ್ರ ರಚನಾ ಅಭ್ಯಾಸವನ್ನು ಕೈಕೊಂಡಿದ್ದರು. ಅದರಲ್ಲಿ ಅಸಾಧಾರಣ ಪ್ರಾವೀಣ್ಯವನ್ನು ಸಾಧಿಸಿದರು. ಐದನೇ ವರ್ಷದ (ಈಗಾಗಲೇ ಹೇಳಿರುವಂತೆ ಆಗಿನ ೫ ನೇ ವರ್ಷದ ಕಲಾಭ್ಯಾಸ ಈಗಿನ ಡಿಪ್ಲೋಮಕ್ಕೆ ಸಮ. ಚಿತ್ರಕಲೆಯಲ್ಲಿ ಡಿಪ್ಲೊಮಾ ಪದವಿ ಕೊಡಲು ಆರಂಭಿಸಿದ್ದು, ೧೯೨೨ ರಿಂದ ಈಚಗೇ ) ಕಲಾಭ್ಯಾಸವನ್ನು ಪೂರೈಸಿ. ಅಲ್ಲಿಯೇ ಕಲಾ ಶಿಕ್ಷಕರಾಗಿ, ಕೃತಿಗಳನ್ನು ರಚಿಸಿ ದೇಶಾದ್ಯಂತ ನಡೆಯುತ್ತಿದ್ದ ಪ್ರಮುಖ ಕಲಾ ಪ್ರದರ್ಶನಗಳಿಗೆ ಕಳಿಸಿಕೊಡುತ್ತಿದ್ದರು. ಸುಮಾರು ೧೧ ವರ್ಷಗಳ ಅವಧಿಯಲ್ಲಿ ಬಂಗಾರ. ೧೩ ಬೆಳ್ಳಿ ಪದಕ, ೨ ಕಂಚಿನ ಪದಕ, ೧೪ ಹಣದ ಬಹುಮಾನ ೫೦ ರಿಂದ ೨೦೦ರೂ. ಮದ್ರಾಸ್, ಮೈಸೂರ, ಮತ್ತು ಬೆಂಗಳೂರು ಪಟ್ಟಣಗಳ ಕಲಾ ಸಂಸ್ಥೆಗಳು ಕೊಡಮಾಡಿವೆ. ಇವರ ಚಿತ್ರಗಳು ಲಂಡನ್ನಿನಲ್ಲಿಯೂ ಪ್ರದರ್ಶಿತಗೊಂಡಿವೆ.[೪೨]

ಮುಂಬಯಿಯ ಸುತ್ತಮುತ್ತಲಿನ ಎಲ್ಲ ನಿಸರ್ಗರಮಣೀಯತೆಯನ್ನು ತಮ್ಮ ಕಲಾಕೃತಿಗಳಲ್ಲಿ ಸೆರೆಹಿಡಿದಿದ್ದಾರೆ. ಚಿತ್ರಗಳ ಗುಣಾವಗುಣಗಳನ್ನು ಸ್ನೇಹಿತರೊಂದಿಗೆ ಚರ್ಚೆ ಮಾಡುತ್ತಿದ್ದರು. ಇಂತಹ ಸಂದರ್ಭದಲ್ಲಿ ಅವರು ಹೇಳುತ್ತಿದ್ದ ಮಾತುಗಳು ಗಮನಾರ್ಹ. "ನಿಸರ್ಗ ಚಿತ್ರರಚನೆ ಬರೀ ಗುಡ್ಡ. ಗಿಡ ಮೋಡಗಳನ್ನು ಚಿತ್ರಿಸುವುದಿಲ್ಲ. ಬದಲಾಗಿ ಆಯಾ ಪ್ರದೇಶದ ಪರಿಸರದ ವೈಶಿಷ್ಟ್ಯಗಳನ್ನು ತುಂಬಬೇಕಲ್ಲದೇ ಅದರಲ್ಲಿ ಗಾಳಿ ಸುಳಿದಾಡುವ ಅನುಭವವೂ ಆಗಬೇಕು. ಮಳೆ ಬಿಸಿಲು. ಮೋಡ ಕವಿದ ವಾತಾವರಣ ಪ್ರತಿಯೊಂದರ ಅನುಭವವು ಚಿತ್ರದಿಂದ ತಮಗಾಗಬೇಕು. ಅಲ್ಲದೇ ನಾವು ಸಾಧ್ಯ ಇರುವ ವಾತಾವರಣವನ್ನು ಮರೆಯುವಂತೆ ಮಾಡಿ ಚಿತ್ರದಲ್ಲಿರುವ ವಾತಾವರಣದೊಡನೆ ಒಂದಾಗುವ ಅನುಭವವನ್ನು ಅವು ತಂದುಕೊಡಬೇಕು" ಎನ್ನುತ್ತಿದ್ದರು. ಕಮಡೋಳಿ ಒಬ್ಬ ಶ್ರೇಷ್ಠ ದರ್ಜೆಯ ನಿಸರ್ಗ ಚಿತ್ರಗಾರರೆನಿಸಿದ್ದಾರೆ.

ಸುಂದರ ನಿಸರ್ಗ ದೃಶ್ಯಗಳಿಂದ ಆವೃತ್ತವಾದ ಹಿಮಾಲಯದ ಕೆಲವು ಭಾಗ ಕಾಶ್ಮೀರ, ಸೀಮ್ಲಾ, ನೈನಿತಾಲ, ಮಹಾಬಳೇಶ್ವರ, ಆಗ್ರಾ. ಮುಂಬಯಿ. ಗೋವಾ. ಮತ್ತು ಕರ್ನಾಟಕದ ನಿಸರ್ಗ ಚಿತ್ರಗಳನ್ನು ಕಮಡೋಳಿ ರಚಿಸಿದ್ದುಂಟು. ಅನಕೃ ಅವರು ಕಮಡೋಳಿಯ ನಿಸರ್ಗಚಿತ್ರಗಳನ್ನು ಮೆಚ್ಚಿ ಆ ಬಗ್ಗೆ ವಿವರಗಳನ್ನೊಳಗೊಂಡ ಲೇಖನವನ್ನೇ ಬರೆದಿದ್ದಾರೆ. ಅವರ ನಿಸರ್ಗ ಚಿತ್ರಗಳ ರಸವಿಮರ್ಶೆಯನ್ನು ಮಾಡುತ್ತಾ ಇವರು ರಚಿಸಿರುವ ಹುಬ್ಬಳ್ಳಿಯ ದೃಶ್ಯಗಳು, ಗೋವಾದ ದೃಶ್ಯಗಳು, ಪ್ರಕೃತಿಯ ವಿವಿಧ ಚೆಲುವು, ಸೊಬಗುಗಳನ್ನು ಸಾರುತ್ತವೆ. ಗೋವಾದ ಕರಂಜ್ಯೋಲಿ ಕೊನೆ. ಕಾವಲಿನ ನಿಲ್ದಾಣದ ಹಿಂದಿರುವ ಭವ್ಯ ನಿಸರ್ಗ ನೋಟ. ಕ್ಯಾಸಲ್‌ರಾಕಿನ ಹಾದಿಯಲ್ಲಿ ಗಾಢ ಗಂಭೀರತೆಗಳೆರಡೂ ಅತ್ಯಂತ ಮಾರ್ಮಿಕ. ಕರಂಜ್ಯೊಲಿನ ನೋಟದಲ್ಲಿ ಚೇತೋಹಾರಿಯಾದ

---

೪೨. ಡಾ.ಲಕ್ಷ್ಮೀ ದೇವಿ ಗವಾಯಿ, ಎಂ.ಎ.ಚೆಟ್ಟಿ ಜೀವನ ಹಾಗೂ ಕಲಾಕೃತಿಗಳು, ಪುಟ ೮೭

ಪ್ರಕೃತಿ ಸೂರ್ಯಕಾಂತಿಯೊಂದಿಗೆ ಚಲ್ಲಾಟವಾಡುವಂತಿದೆ. ಎಷ್ಟು ಸುಂದರ. ಆದರೆ ಎಂತಹ ಮೌನ, "ಹೀಗೆ ಸಹೃದಯರಿಂದ ಕಲಾವಿದರಿಂದ, ಕಲಾವಿಮರ್ಶಕರಿಂದ ಪ್ರಶಂಸಿಸಲ್ಪಟ್ಟ ಚಿತ್ರಗಳು ಭಾರತದಲ್ಲಿ ಹಲವಾರು ವೈಯಕ್ತಿಕ ಹಾಗೂ ಸಂಘ-ಸಂಸ್ಥೆಗಳಲ್ಲಿ ಸಂಗ್ರಹಿಸಲ್ಪಟ್ಟಿವೆ.

೧೯೨೪ರಲ್ಲಿ ಲಂಡನಿನಲ್ಲಿ ನಡೆದ ವೆಂಬ್ಲೆ ಎಂಪಾಯರ್ ಕಲಾಪ್ರದರ್ಶನದಲ್ಲಿ ಭಾರತೀಯ ಚಿತ್ರಕಲೆ ಪ್ರದರ್ಶಿಸುವ ಸಲುವಾಗಿ ಇವರು ಶುಕ್ರಗ್ರಹ ದೇವತೆಯನ್ನು ಚಿತ್ರಿಸಿದ್ದರು. ಈ ಪ್ರದರ್ಶನದಲ್ಲಿ ಯಾವ ರೀತಿ ಭಾಗವಹಿಸಲಾಯಿತೆಂಬುದನ್ನು ರಾವಬಹದ್ದೂರ ಧುರಂಧರ ಅವರು ಈ ರೀತಿ ಹೇಳಿದ್ದಾರೆ. "ವೆಂಬ್ಲೆ ಪ್ರದರ್ಶನದ ಸಲುವಾಗಿ ೨೦,೦೦೦ರೂ ಸರಕಾರದಿಂದ ಮಂಜೂರಾಗಿ ಬಂದಿತು. ಅದರಂತೆ ಭಾರತೀಯ ಚಿತ್ರಕಲೆಯನ್ನು ಪ್ರದರ್ಶಿಸುವ ಸಲುವಾಗಿ ಲಂಡನನಲ್ಲಿ ಭಾರತೀಯ ಕೋಣೆಯನ್ನು ಅತ್ಯಂತ ಸುಂದರವಾಗಿ ಅಲಂಕರಿಸಲಾಗಿತ್ತು. ಅದರ ಮೇಲೆ ಚಿತ್ರಗಳನ್ನು ತೂಗು ಬಿಡಲಾಗಿತ್ತು ಅಷ್ಟೆ. ಜೋಶಿ. ಫರ್ನಾಂಡಿಸ್ ಕಮಡೋಳಿ, ನಗರಕರ, ಸಮೀರಖಾನ ಇವರೆಲ್ಲ ಛತ್ತಿನ ಮೇಲೆ ನವಗ್ರಹ ದೇವತೆಗಳನ್ನು ಚಿತ್ರಿಸಿದ್ದರು. ಅಲಂಕಾರ ಪಟ್ಟಿಗಳನ್ನು ಇಂದಿಗೂ ರಾಯಲ್ ಕಲಾ ಪ್ರದರ್ಶನದಲ್ಲಿ ಇಡಲಾಗಿದೆ. ಅದು ಎಲ್ಲರ ಮೆಚ್ಚುಗೆಯನ್ನು ಗಳಿಸಿತು."

ಕಮಡೋಳಿಯವರು ಅನಾರೋಗ್ಯದ ಕಾರಣವಾಗಿ ಮೀರಜನ ಆಸ್ಪತ್ರೆಗೆ ಸೇರಬೇಕಾಯಿತು. ಆಗ ಅವರ ಹತ್ತಿರ ದುಡ್ಡಿರಲಿಲ್ಲ. ಅವನೊಬ್ಬ ಕಲಾವಿದರೆಂದು ತಿಳಿದ ಕೊಡಲೇ ಡಾಕ್ಟರ್ ಮೊದಲುಗೊಂಡು ಅವರನ್ನು ತುಂಬಾ ಕಾಳಜಿವಹಿಸಿ ಗೌರವದಿಂದ ಕಂಡರು. ಅವರು ತಮ್ಮ ಜೊತೆ ಬಣ್ಣ ಕುಂಚ ಮೊದಲಾದ ಸಾಮಗ್ರಿ ತೆಗೆದುಕೊಂಡು ಹೋಗಿದ್ದರು, "ಅಲ್ಲಿ ವಿರಾಮವಾಗಿದ್ದಾಗಲೆಲ್ಲ. ನಿಸರ್ಗಚಿತ್ರಗಳನ್ನೂ ಸಂಯೋಜನಾ ಚಿತ್ರಗಳನ್ನೂ ರಚಿಸಿದ್ದೆ. ಕೆಲವನ್ನು ಆಸ್ಪತ್ರೆಗೆ. ಡಾಕ್ಟರರಿಗೆ ಕಾಣಿಕೆಯಾಗಿ ಕೊಟ್ಟೆ, ಮತ್ತೆ ಕೆಲವನ್ನು ಅವರೇ ಆಸಕ್ತಿಯಿಂದ ಕೊಂಡುಕೊಂಡರು. ಅಂತೂ ಆಸ್ಪತ್ರೆಯಿಂದ ಆರಾಮಾಗಿ ಮುಂಬಯಿಗೆ ಹೊರಟು ನಿಂತಾಗ ಕೈಯಲ್ಲಿ ಸ್ವಲ್ಪ ಹಣ ಇತ್ತು. ಕೆಲವು ಕಲಾಕೃತಿಗಳು ಇದ್ದವು" ಎಂದು ಹೇಳುತ್ತಿದ್ದರಂತೆ.

ಆದರೂ ಅವರಿಗೇಕೋ ಮುಂಬಯಿ ವಾತಾವರಣ ಅವರ ಆರೋಗ್ಯಕ್ಕೆ ಹಿತಕರವಾಗಲಿಲ್ಲ. ಆಗ ಡ್ರಾಯಿಂಗ್ ಇನ್ಸಪೆಕ್ಟರ ಆಗಿದ್ದ ಮೇಸ್ತ್ರಿ ಅವರು ಕಲೆಯನ್ನು ಮೆಚ್ಚಿಕೊಂಡಿದ್ದರು. ಅವರ ಆರೋಗ್ಯ ದೃಷ್ಟಿಯಿಂದ ಹುಬ್ಬಳ್ಳಿಗೆ ವರ್ಗಾಯಿಸಿದರು. ಹುಬ್ಬಳ್ಳಿಯ ಆಂಗ್ಲೋ ಉರ್ದು ಶಾಲೆಯಲ್ಲಿ ಕಲಾ ಶಿಕ್ಷಕರಾಗಿ ವಿದ್ಯಾರ್ಥಿಗಳ ಅಚ್ಚು ಮೆಚ್ಚಿನ ಶಿಕ್ಷಕರಾದರು. ಮುಂದೆ ಸ್ವಲ್ಪದಿನ ಅವರ ಅಣ್ಣನವರು ತೆಗೆದ ಫೋಟೋ ಸ್ಟುಡಿಯೋದಲ್ಲಿ ಸ್ಥಿರ[೪೩]ಮತ್ತು ಚಲನ ಛಾಯಾಚಿತ್ರಗ್ರಹಣದಲ್ಲಿಯೂ ಆಸಕ್ತಿ ತೋರಿಸಿ ಕಲಾತ್ಮಕ ಛಾಯಾಚಿತ್ರಗಳ ಅಭಿರುಚಿಯನ್ನು ಜನತೆಯಲ್ಲಿ ತರಲು ಪ್ರಯತ್ನಿಸಿದರು. ಧಾರವಾಡದ ಶಿಕ್ಷಕರ ತರಬೇತಿ ಕೇಂದ್ರದಲ್ಲಿ ಕಲಾ ಶಿಕ್ಷಕರಾಗಿದ್ದಾಗ ಕಾರ್ಡ ಬೋರ್ಡ ಮಾಡಲಿಂಗ್ ವಿಶೇಷ ತರಬೇತಿ ವರ್ಗಗಳನ್ನು ನಡೆಸಿದರು.

೧೯೫೮ರಲ್ಲಿ ತಮ್ಮ ಶಿಕ್ಷಕ ವೃತ್ತಿಯಿಂದ ನಿವೃತ್ತರಾದರು. ಆ ವರ್ಷವೇ ಸಪ್ಟಂಬರ ತಿಂಗಳು ಕಲಾವಿದ ಕಮಡೋಳಿ ನಮ್ಮನ್ನು ಅಗಲಿದರು. ನಾಡುಕಲಾಕ್ಷೇತ್ರದ ಒಬ್ಬ ಪ್ರತಿಭಾ ಸಂಪನ್ನನನ್ನು ಕಳೆದುಕೊಂಡಿತು. ಮಾರ್ಖಂಡಯ್ಯ, ರಾವಣ-ಜಠಾಯು, ಇವರು ರಚಿಸಿದ ಮುಂತಾದ ಚಿತ್ರಗಳು. ಕಲಾವಿದನ ಪೌರಾಣಿಕ ಪ್ರಜ್ಞೆಯ ಸಮೃದ್ಧವಾದ ಸುಂದರ ಕಲ್ಪನಾ ಚಿತ್ರಗಳಾಗಿವೆ. ಮಂಗನಾಟವಾಡಿಸುವವ, ದೊಂಬರು, ಹಳ್ಳಿಯ ಸಂತೆ. ನಿತ್ಯ ಕರ್ಮ. ನೂಲಿನ ಮರಾಠಿಗ. ಮುಂತಾದ ಚಿತ್ರಗಳು. ಜೀವನದ ವೈವಿಧ್ಯತೆಯ ನಗ್ನ ಸತ್ಯವನ್ನು ಮೂಡಿಸಿದ ಜೀವಂತ ಕಲಾಕೃತಿಗಳು, ತಾಯಿ ಮಗುವಿನ ವಾತ್ಸಲ್ಯವನ್ನು ನಿರೂಪಿಸಿದರೆ, ಈ ಎಲ್ಲ ಚಿತ್ರಗಳು ಅತ್ಯುತ್ತಮ ಚಿತ್ರಗಳಾಗಿದ್ದು ಕಮಡೋಳಿಯವರ ಕಲಾಪ್ರತಿಭೆಯನ್ನು ಎತ್ತಿಹಿಡಿದು ಪ್ರಶಸ್ತಿಗಳನ್ನು ಗಳಿಸಿವೆ.

ಲಂಡನ್ನಿನ ವೆಂಬ್ಲೆ ಪ್ರದರ್ಶನಕ್ಕೆ ಕಳಿಸಿದ ನೂಲುವ ಮರಾಠಿಗನ ಚಿತ್ರ. ಕಮಡೋಳಿಯ ಪ್ರತಿಭೆ ಹಾಗೂ ಕುಂಚದ ಕೌಶಲ್ಯವನ್ನು ಇಲ್ಲಿ ಗುರುತಿಸಬಹುದು. ಕೈಯಲ್ಲಿ ತಕ್ಕಡಿಯನ್ನು ಹಿಡಿದು ನೂಲುವ ಈ ವ್ಯಕ್ತಿ ಚಿತ್ರದ

---

೪೩. ಡಾ.ಲಕ್ಷ್ಮೀ ದೇವಿ ಗವಾಯಿ, ಎಂ.ಎ.ಚೆಟ್ಟಿ ಜೀವನ ಹಾಗೂ ಕಲಾಕೃತಿಗಳು, ಪುಟ ೮೮

ಉದ್ದಕ್ಕೂ ಪ್ರಧಾನವಾಗಿ ನಿಂತ ಆಕೃತಿ. ನೂಲುವದರಲ್ಲಿ ತನ್ಮಯನಾದಂತೆ ಮುಖಭಾವ ಯೂರೋಪಿಯನ್ ಕಲಾ ಶಿಕ್ಷಣದಂತೆ ದಷ್ಟ ಪುಷ್ಟವಾದ ದೇಹ ಉದ್ಯಮದ ಪ್ರತಿಮೂರ್ತಿಯಾಗಿ ನಿಂತಿರುವ ಆ ವ್ಯಕ್ತಿಯೇ ಕಲಾಕೃತಿಯ ಮುಖ್ಯ ಕೇಂದ್ರ ಬಿಂದು. ಬಣ್ಣಗಳ ಸಮತೋಲನದಿಂದ ನೋಡುವವನ ದೃಷ್ಟಿ ಆ ವ್ಯಕ್ತಿಯನ್ನು ದಾಟಿ ಅವನು ಕೆಲಸ ಮಾಡುತ್ತಿರುವ ಅವನ ಕೈಯಿಂದ ಇಳಿಬಿದ್ದ ತಕಲಿಯಲ್ಲಿ ನೆಡುತ್ತದೆ. ಯಾಕೆಂದರೆ ಅದರ ಮೇಲೆ ಹೆಚ್ಚು ಬೆಳಕನ್ನು ಚೆಲ್ಲಲಾಗಿದೆ. ನಂತರ ಹಿನ್ನಲೆಯಲ್ಲಿರುವ ಚರಕಗಳಲ್ಲಿ ಸುಳಿದು ಇಡಿ ಚಿತ್ರದ ಸೌಂದರ್ಯವನ್ನು ಪ್ರದರ್ಶಿಸಿದೆ.[೪೪]

ಲಂಬಾಣಿ ಮುದಕಿ ಕಮಡೋಳಿ ಚಿತ್ರಿಸಿದ ಇನ್ನೊಂದು ಭಾವಚಿತ್ರ ಇದರ ವಿಮರ್ಶೆಯನ್ನು ಮಾಡುತ್ತಾ ಅ. ನ. ಕೃ. ಅವರು ಹೇಳಿದ ಮಾತು ಗಮನಾರ್ಹ. "ಕಮಡೋಳಿಯ ಕಲಾಪ್ರತಿಭೆಯನ್ನು ಸಾರುವ ಕೃತಿಗಳಲ್ಲಿ ಇದೊಂದು ಜೀವನದ ಸಂಧ್ಯೆಯನ್ನು ಸಮೀಪಿಸಿದ ಲಂಬಾಣಿ ಮುದಕಿ ಸಂತೆಯಲ್ಲಿ ಕೋಳಿಗಳನ್ನು ಮಾರಲು ಕುಳಿತಿದ್ದ. ಆದರೆ ವ್ಯಾಪಾರದ ಕಡೆಗೆ ಲಕ್ಷವಿಲ್ಲ. ಮನಸೆಲ್ಲೋ ಹರಿದಾಡುತ್ತಿದೆ. ಯಾವುದೋ ಹಳೆಯ ನೆನಪು ಅವಳ ಕಣ್ಣುಗಳಲ್ಲಿ ಅಪಾರವೇದನೆ, ಚಿಂತನೆ, ನೆನವುಗಳು, ಬಾಳಿನ ಕಹಿಯನ್ನು ಎತ್ತಿ ತೋರುತ್ತದೆ, ಬತ್ತಿದ ಮುಖ ಎಲವುಗಳನ್ನು ತೋರುವ ಕೊರಳು, ಒಣಗಿದ ಕೈಕಾಲುಗಳು ಕುಳಿತಿರುವ ಸಹಜ ಭಂಗಿ ಹೊಸೆದ ಹಗ್ಗದಂತಿರುವ ತೆಲೆಗೂದಲು ಚಿತ್ರಕ್ಕೆ ಅಪೂರ್ವವಾದ ಜೀವನ ಸಾಮಿಪ್ಯವನ್ನು ತಂದು ಕೊಟ್ಟಿದೆ. ಮನಸ್ಸಿನ ಕ್ಷೋಭೆ ಅಂದೋಲನಗಳನ್ನು ಸೂಕ್ಷ್ಮವಾಗಿ ಚಿತ್ರವಿದ್ರಾವಕವಾಗಿಯೂ ತೋರುವ ಕೃತಿಗಳಲ್ಲಿ 'ಲಂಬಾಣಿ ಮುದಕಿ' ಹಿರಿಯಸ್ಥಾನವನ್ನು ಪಡೆಯುತ್ತದೆ. ಇದು ತ್ರಿಕೋನ ಕೃತಿಯ ವರ್ಗಕ್ಕೆ ಸೇರಿದೆ. ನೋಡುಗನ ದೃಷ್ಟಿ ಕೇಂದ್ರೀಕೃತವಾಗಿ ಚಿತ್ರದ ಮುಖದ ಮೇಲೆ ಬೀಳುವುದೇ ಈ ಶೈಲಿಯ ಉದ್ದೇಶ ಕಮಡೋಳಿ ತಮ್ಮ ಉದ್ದೇಶವನ್ನು ಉತ್ಕೃಷ್ಟ ರೀತಿಯಲ್ಲಿ ಸಾಧಿಸಿದ್ದಾರೆ. ಅ.ನ.ಕೃ. ಅವರ ವಿಮರ್ಶೆಯು ಕಮಡೋಳಿಯ ಕಲೆಯ ಗುಣಾತಿಶಯಗಳನ್ನೆಲ್ಲಾ ಎತ್ತಿತೋರಿಸಿದೆ. ಹೀಗೆ ಈ ಎಲ್ಲಾ 'ಸಪ್ತವರ್ಣ'ವೆಂಬ ಹೆಸರು ಪಡೆದ ಗೆಳೆಯರು, ತಮ್ಮ ಈ ಕಲಾ ಸಾಧನೆಯಲ್ಲಿ ಉತ್ತಂಗ ಮಟ್ಟವನ್ನು ಮುಟ್ಟಿದವರು. ಕಲಾಕ್ಷೇತ್ರದಲ್ಲಿ ವಿವಿಧ ರೀತಿಯ ಕೆಲಸ-ಕಾರ್ಯಗಳನ್ನು ಮಾಡಿ ಕರ್ನಾಟಕದ ಹೆಸರನ್ನು ಅಂತರಾಷ್ಟ್ರೀಯ ಮಟ್ಟದವರೆಗೆ ಬೆಳೆಸಿದವರು. ಭಾರತದಲ್ಲಿ ಅಷ್ಟೇ ಅಲ್ಲ, ಇಡಿ ಏಷ್ಯಾದಲ್ಲಿ ಹೆಸರುವಾಸಿಯಾಗಿದ್ದ ಸರ್ ಜೆ.ಜೆ. ಕಲಾ ಶಾಲೆಯಲ್ಲಿ ಅಭ್ಯಾಸಮಾಡಿ ಎಲ್ಲರೂ ಒಂದೇ ಬಳ್ಳಿಯ ಹೂಗಳಂತೆ ಇದ್ದರು. ತಮ್ಮದೆ ಆದ ಶೈಲಿ ಕಲಾತಂತ್ರ ವಿನ್ಯಾಸದಿಂದ ತಮ್ಮತನವನ್ನು ಚಿತ್ರಕಲಾ ಕೇತ್ರದಲ್ಲಿ ಉಳಿಸಿಕೊಂಡು ಬಂದಿದ್ದಾರೆ.[೪೫]

ಒಬ್ಬ ಕಲಾವಿದ ತನ್ನ ಬದುಕಿನಲ್ಲಿ ಅನೇಕ ಹಂತಗಳಲ್ಲಿ ಬೇರೆ ಬೇರೆ ಪ್ರಭಾವಗಳಿಗೆ ಒಳಗಾಗಿ ವೈವಿಧ್ಯಮಯವಾದ ಕಲಾ ಕೃತಿಗಳನ್ನು ಸೃಷ್ಟಿ ಮಾಡುವಂತೆ, ಕೆಲವೊಮ್ಮೆ ಎಲ್ಲ ಹಂತಗಳಲ್ಲಿಯೂ ಒಂದೇ ರೀತಿಯ ಪ್ರಭಾವಕ್ಕೆ ಒಳಗಾಗಿರಲೂಬಹುದು. ಈ ಸಮಾಜದಲ್ಲಿ ನಡೆಯುವ ಅನೇಕ ಘಟನೆಗಳು, ಪ್ರಕೃತಿಯಲ್ಲಿ ಕಂಡು ಬರುವ ವಿಶಿಷ್ಟ ಸೌಂದರ್ಯ, ಇತ್ಯಾದಿ ಅಂಶಗಳು ಕಲಾವಿದನ ವೈಯಕ್ತಿಕ ಆಶೆ-ಅಭಿರುಚಿಗಳನ್ನು ಪ್ರಭಾವಿಸುತ್ತವೆ. ಅವನು ಆ ಪ್ರಭಾವಕ್ಕೆ ಪ್ರತಿಕ್ರಿಯಿಸಿ ಅಭ್ಯಿವ್ಯಕ್ತಿಸುವ ರೀತಿ ಭಿನ್ನ ಭಿನ್ನವಾಗಿರುತ್ತದೆ. ಹೀಗೆ ಕಲಾಕೃತಿಯು ಕಲಾವಿದನೊಬ್ಬನ ಯಾವುದೇ ಅನುಭವದ, ಅವನದೇ ಆದ ಅಂತರಂಗದ ಭಾವನಾತ್ಮಕ ಪ್ರಜ್ಞೆಯ ಅಭಿವ್ಯಕ್ತಿಯಾಗಿರುತ್ತದೆ. ಅಂತಹ ವಿಭಿನ್ನ ಭಾವನಾತ್ಮಕ ಪ್ರತಿಕ್ರಿಯೆಗಳನ್ನು ಈ ಸಮಕಾಲೀನ ಕಲಾವಿದರಲ್ಲಿ ಕಾಣುತ್ತೇವೆ.

---

೪೪. ಡಾ.ಲಕ್ಷ್ಮೀ ದೇವಿ ಗವಾಯಿ, ಎಂ.ಎ.ಚೆಟ್ಟಿ ಜೀವನ ಹಾಗೂ ಕಲಾಕೃತಿಗಳು, ಪುಟ ೬೦
೪೫. -ಅದೇ- ಪುಟ ೬೧



ಪರ್ಣಗಳ ನಡುವೆ ಇರುವ ಡಿ.ವಿ.ಹಾಲಭಾವಿಯವರ ಬಣ್ಣದ ಬದುಕಿನ ಮನೆ




ಡಿ.ವಿ.ಹಾಲಭಾವಿಯವರು ಶ್ರಮದಿಂದ ಕಟ್ಟಿದ ಮಾತೃ ಚಿತ್ರಶಾಲೆ (೧೯೪೦-೨೦೦೪)



ಮಾತೃ ಚಿತ್ರಶಾಲೆಯ ನೆಲೆ ಕಳಚಿಕೊಂಡು ಬಾಡಿಗೆ ಮನೆಯಲ್ಲಿ ನೆಲೆಯೂರಿದ
ಹಾಲಭಾವಿ ಸ್ಕೂಲ್ ಆಫ್ ಆರ್ಟ್(೨೦೦೫)




ಹಾಲಭಾವಿಯವರು ೧೯೩೫ರಲ್ಲಿ ಜೆ.ಜೆ. ಸ್ಕೂಲ್ ಆಫ್ ಆರ್ಟ್‌ದಿಂದ ಡ್ರಾಯಿಂಗ್ ಮತ್ತು ಪೇಂಟಿಂಗ್ ಡಿಪ್ಲೋಮಾ ಪರೀಕ್ಷೆಯಲ್ಲಿ ಉತ್ತಮ ಶ್ರೇಣಿಯಲ್ಲಿ ಪಾಸಾದರು. ೧೯೩೬ರಲ್ಲಿ ಕಲಾಶಿಕ್ಷಣದ ಆರ್ಟ್ ಮಾಸ್ಟರ (ಎ.ಎಮ್) ಪದವಿ ಪರೀಕ್ಷೆಯನ್ನು ಮುಂಬೈ ಪ್ರಾಂತದಲ್ಲಿಯೇ ಪ್ರಥಮ ಶ್ರೇಣಿಯಲ್ಲಿ ಪಾಸಾದರು.[೧]

ಎಷ್ಟೋ ವಿಷಯಗಳನ್ನು, ಅಡೆತಡೆಗಳನ್ನು ಧೈರ್ಯವಾಗಿ ಎದುರಿಸಿ, ತಮ್ಮ ಕಲಾ ವ್ಯಾಸಂಗವನ್ನು ಮುಂಬೈಯಿಂದ ಮುಗಿಸಿಕೊಂಡು ಧಾರವಾಡಕ್ಕೆ ಬಂದರು. ಆಗಿನ ಕಾಲದಲ್ಲಿ ಇಂಗ್ಲೀಷನ್ನು ಕಲಿತು ಪದವೀಧರರಾಗಿ ಒಳ್ಳೆಯ ನೌಕರಿಯನ್ನು ತಮ್ಮ ಮಗ ಮಾಡಬೇಕು ಎಂದು ಹಿರಿಯರು ಅಪೇಕ್ಷಿಸುತ್ತಿದ್ದ ಕಾಲ. ಡ್ರಾಯಿಂಗ್, ಪೇಂಟಿಂಗ್‌ನಂತಹ ಕಲೆಗಳಿಗೆ ಸಮಾಜದಲ್ಲಿ ಮನ್ನಣೆಯಿರದೆಯಿದ್ದ ಕಾಲ. ಆಂಥಹದರಲ್ಲಿ ಸಾಂಪ್ರದಾಯಿಕ ಮೌಲ್ಯಗಳನ್ನು ಪ್ರತಿಭಟಿಸಿ ಹಾಲಭಾವಿಯವರು ಡ್ರಾಯಿಂಗ್, ಪೇಂಟಿಂಗ್‌ನಂತಹ ಶಿಕ್ಷಣ ಪಡೆದರು.[೨]

### ಚಿತ್ರಕಲಾ ಶಿಕ್ಷಣದ ಹಿನ್ನಲೆ

ಬ್ರಿಟೀಷ ಆಳ್ವಿಕೆಯಲ್ಲಿ ಉತ್ತರ ಕರ್ನಾಟಕವು ಅನೇಕ ವರ್ಷ ಮುಂಬೈ ಪ್ರಾಂತದಲ್ಲಿತ್ತು. ರಾಜಕೀಯವಾಗಿ ಮುಂಬೈ ಸರಕಾರದಿಂದ ಒಪ್ಪಿಕೊಳ್ಳಲ್ಪಟ್ಟ ಪಠ್ಯಕ್ರಮ, ಅಭ್ಯಾಸ ಪತ್ರಿಕೆ, ಪಠ್ಯಪುಸ್ತಕಗಳು ಮತ್ತು ಕಲಿಸುವ ವಿಧಿ–ವಿಧಾನಗಳು ಪ್ರಚಲಿತವಿದ್ದವು. ಕಲಾಶಿಕ್ಷಣಕ್ಕಾಗಿ ಮುಂಬೈ ಆಗ ಒಂದು ಮಹತ್ವದ ಕೇಂದ್ರವಾಗಿತ್ತು. ೧೮೫೭ರಲ್ಲಿ ಸ್ಥಾಪನೆಗೊಂಡ "ಸರ್.ಜೆ.ಜೆ.ಸ್ಕೂಲ್ ಆಫ್ ಆರ್ಟ್" ಕಲಾ ಸಂಸ್ಥೆ ಏಷಿಯಾದಲ್ಲಿಯೇ ಪ್ರಥಮವಾದ ಪಾಶ್ಚಾತ್ಯ ಮಾದರಿ ಕಲಾ ಶಾಲೆ. ಇದು ಕಲಾ ಶಿಕ್ಷಣದಲ್ಲಿ ಅಂತರಾಷ್ಟ್ರೀಯ ಖ್ಯಾತಿಯನ್ನು ಪಡೆದಿತ್ತು. ಲಂಡನ್ನಿನ ಕ್ಯಾಪ್ಟನ್ ಗ್ಲ್ಯಾಡ್‌ಸನ್ ಸಾಲೋಮನ್ ಈ ಕಲಾಶಾಲೆಯ ಪ್ರಾಚಾರ್ಯರಾಗಿ ಬಂದ ಮೇಲೆ ಕಲಾ ಶಿಕ್ಷಣ ಸ್ವರೂಪವೇ ಬದಲಾಯಿತು.

ಒಂದು ವರ್ಷದ ಚಿತ್ರಕಲಾ ತರಬೇತಿ (ಡಿ.ಟಿ.ಸಿ) ಹಾಗೂ ಎರಡು ವರ್ಷದ ಡ್ರಾಯಿಂಗ್ ಮಾಸ್ಟರ ಪರೀಕ್ಷೆ (ಡಿ.ಎಮ್.ಸಿ.) ಇದಾದನಂತರ ಆರ್ಟ್‌ಮಾಸ್ಟರ (ಎ.ಎಮ್) ಪರೀಕ್ಷೆಗೆ ಸೇರಲು ಅವಕಾಶವಿತ್ತು. ಈ ರೀತಿ ತರಬೇತಿ ಹೊಂದಿದ ಕಲಾಶಿಕ್ಷಕರು ಪ್ರಾಥಮಿಕ ಹಾಗೂ ಮಾಧ್ಯಮಿಕ ವಿಭಾಗದ ಶಾಲೆಗಳಲ್ಲಿ ಕಲಾ ಶಿಕ್ಷಕರಾಗಿ ಸೇವೆ ಮಾಡಲು ಅರ್ಹತೆ ಪಡೆದಂತಾಗುತ್ತಿತ್ತು.

---

೧. ಡಾ.ಎಸ್.ಸಿ.ಪಾಟೀಲ(ಸಂ), ಚಿತ್ರಾಕ್ಷಿ, ಪುಟ ೧೬

೨. ಡಾ.ಎಸ್.ಸಿ.ಪಾಟೀಲ(ಸಂ), ಚಿತ್ರಾಕ್ಷಿ, ಪುಟ ೨

೧೮೫೪ರ ಕಳಿಂಗವುಡ್‌ನ ವರದಿಯು ಶಿಕ್ಷಣದಲ್ಲಿ ಸಾಕಷ್ಟು ಬದಲಾವಣೆಗಳನ್ನು ತಂದಿತು. ಆಗ ಶಾಲೆಗಳ ಸಂಖ್ಯೆಯೇನೋ ಬೆಳೆಯಿತು. ಆದರೆ ಲಲಿತಕಲೆಗಳ ಅಭ್ಯಾಸದ ಬಗ್ಗೆ ಸುಧಾರಣೆಯ ಶಿಫಾರಸ್ಸುಗಳು ಆಗಲಿಲ್ಲ. ೧೯೦೨ರ ವೇಳೆಗೆ ಮಾತ್ರ ಪ್ರಾಥಮಿಕ ಶಿಕ್ಷಣ ಪಠ್ಯಕ್ರಮದಲ್ಲಿ ಡ್ರಾಯಿಂಗ್, ಭೂಗೋಳ, ಚರಿತ್ರೆ, ಸಂಗೀತ, ಬೇಸಾಯ ಹೀಗೆ ಮುಂತಾದ ವಿಷಯಗಳೊಂದಿಗೆ ಪ್ರೋತ್ಸಾಹ ಸಿಕ್ಕಿತು. ೧೯೧೩ರಲ್ಲಿ ಗೋಕಲೆಯವರ ಶಿಕ್ಷಣ ಮಸೂದೆ ತಿರಸ್ಕೃತವಾದ ಮೇಲೆ ೧೯೧೩ರ ಫೆಬ್ರುವರಿ ೨೧ರಂದು ಭಾರತ ಸರಕಾರವು ತನ್ನ ಶಿಕ್ಷಣ ನೀತಿಯ ಬಗ್ಗೆ ನಿರ್ಣಯವೊಂದನ್ನು ಶಿಫಾರಸ್ಸು ಮಾಡಿತು. ಕೆಳದರ್ಜೆಯ ಪ್ರಾಥಮಿಕ ಶಾಲೆಗಳನ್ನು ಸಾಕಷ್ಟು ವಿಸ್ತರಿಸಿ ಅಲ್ಲಿ ಅಂಕಗಣಿತ, ಓದು, ಬರಹ, ಡ್ರಾಯಿಂಗ್, ಗ್ರಾಮನಕ್ಷೆ, ಪ್ರಕೃತಿ ಅಧ್ಯಯನ, ದೈಹಿಕ ವ್ಯಾಯಮಗಳನ್ನು ಒದಗಿಸುವ ಶಿಫಾರಸ್ಸು ಮಾಡಲಾಯಿತು.[೩]

೧೯೩೫ರಲ್ಲಿ ಸಮಾವೇಶಗೊಂಡಿದ್ದ ಕೇಂದ್ರ ಸಲಹಾ ಮಂಡಳಿ ನಿರ್ಣಯದ ಪ್ರಕಾರ ಶಿಕ್ಷಣದ ಪುನರ್ ವ್ಯವಸ್ಥೆಗಾಗಿ ಶಿಕ್ಷಣ ತಜ್ಞರಾಗಿದ್ದ ಎ ಅಬ್ಬಾಟ್ ಮತ್ತು ಎಸ್.ಎಚ್. ಕಳಿಂಗವುಡ್ ಅವರನ್ನು ಭಾರತಕ್ಕೆ ಅಹ್ವಾನಿಸಲಾಯಿತು. ಇವರು ದೇಶಾದ್ಯಂತ ಸಂಚರಿಸಿ ತಮ್ಮ ವರದಿಯನ್ನು ಸಲ್ಲಿಸಿದರು. ಆ ವರದಿ ವುಡ್ ಮತ್ತು ಅಬ್ಬಾಟ್ ವರದಿಯೆಂದು ಹೆಸರಾಗಿದ್ದು, ಅನೇಕ ಶೈಕ್ಷಣಿಕ ವಿಚಾರಗಳೊಂದಿಗೆ ಕಲೆಗಳು ಮತ್ತು ಕುಶಲ ಕೈಗಾರಿಕೆಗಳ ಬೋಧನೆಗೆ ಪ್ರೋತ್ಸಾಹ ಕೊಡಬೇಕೆಂದು ಮತ್ತು ಶಿಕ್ಷಕರ ತರಬೇತಿ ಶಿಫಾರಸ್ಸುಗಳನ್ನು ಮಾಡಿದರು.

ಹೀಗೆ ಕೆಲವು ಶಿಫಾರಸ್ಸುಗಳು ಈ ಕಲೆಗಳ ಶಿಕ್ಷಣದ ಬಗ್ಗೆ ಬಂದರೂ ಅವು ಪ್ರಾಥಮಿಕ ವಿದ್ಯಾಭ್ಯಾಸಕ್ಕೆ ಮಾತ್ರ ಮೀಸಲಾಗಿ ಹೋದವು. ಮಾಧ್ಯಮಿಕ ಶಿಕ್ಷಣದ ಬಗ್ಗೆ ಇಲ್ಲಿಯವರೆಗೆ ಅಂದರೆ ೧೯೩೫ರವರೆಗೆ ಕಲಾಶಿಕ್ಷಣದ ಪ್ರಗತಿಗಾಗಿ ಅಂತಹ ಯಾವ ಸುಧಾರಣೆಯೂ ಕಂಡು ಬರುವುದಿಲ್ಲ. ಆದರೆ ಬಾಂಬೆ, ಮದ್ರಾಸ್, ಕಲಕತ್ತಾಗಳಲ್ಲಿ ಸ್ಥಾಪನೆಗೊಂಡ ಕಲಾ ಶಾಲೆಗಳ ಸುಧಾರಣೆಗಾಗಿ ಸ್ವಲ್ಪಮಟ್ಟಿಗೆ ಈ ಶಿಫಾರಸ್ಸುಗಳು ಶ್ರಮಿಸಿದವು.

ನಮ್ಮ ಸಂಸ್ಕೃತಿಯ ಒಂದು ಭಾಗವಾದ ಕಲಾಶಿಕ್ಷಣ ಪತನದ ಹಾದಿಯಲ್ಲಿದ್ದಾಗ ಆಂಗ್ಲರು ದೊಡ್ಡ ದೊಡ್ಡ ನಗರಗಳಲ್ಲಿ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸಿ, ಅವುಗಳ ಮುಖಾಂತರ ಪಾಶ್ಚಿಮಾತ್ಯ ಕಲೆ ಹಾಗೂ ತತ್ವಗಳ ಆಧಾರದ ಮೇಲೆ ಶಿಕ್ಷಣ ಕಾರ್ಯವನ್ನು ಆರಂಭಿಸಿ, ಭಾರತೀಯ ಕಲೆಗಳ ಅವನತಿಗೆ ಮತ್ತಷ್ಟು ಕಾರಣರಾದರು. ಇದರಿಂದ ಸುಶಿಕ್ಷಿತ ವರ್ಗದ ಮೇಲೆ ಒಂದು ರೀತಿಯ ಕೆಡುಕಿನ ಪ್ರಭಾವವೇ ಆಯಿತೆಂದು ಹೇಳಬಹುದು.

೧೮೫೪ರ ವರದಿಯಿಂದ ಹಿಡಿದು ೧೯೪೭ರ ವರೆಗೆ ಅನೇಕ ಆಯೋಗಗಳು ಬಂದರೂ, ಅವುಗಳು ಲಲಿತಕಲೆಗಳ ಶಿಕ್ಷಣಕ್ಕಾಗಿ ಯಾವ ಸುಸಂಘಟಿತವಾದ ಕೆಲಸವನ್ನು ಮಾಡಲಿಲ್ಲ. ಬಹುವಾಗಿ ಅಲಕ್ಷಿಸಲ್ಪಟ್ಟ ಕ್ಷೇತ್ರವಾಗಿ ಕಲಾಶಿಕ್ಷಣ ಹಿಂದುಳಿಯಿತು. ೧೯೩೫ರಿಂದ ೧೯೪೭ರ ಅವಧಿಯಲ್ಲಿ ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ ಸಂಬಂಧಿಸಿ ಕ್ರಾಂತಿಕಾರಿ ಘಟನೆಯಂದರೆ ಮಹಾತ್ಮಾಗಾಂಧಿಜಿಯವರಿಂದ ರೂಪಿಸಲ್ಪಟ್ಟ ಮೂಲ ಶಿಕ್ಷಣ ಪದ್ಧತಿ ಇಲ್ಲಿ ಲಲಿತಕಲೆಗಳಿಗೆ ಪ್ರಾಶಸ್ತ್ಯ ದೊರಕಿತು. ನೂಲುವಿಕೆ, ನೇಕಾರಿಕೆ, ಮರಗೆಲಸ, ಬೇಸಾಯ, ತೋಟಗಾರಿಕೆ, ವ್ಯಾಯಾಮ, ಈ ಕಲೆಗಳ ಅಭಿವೃದ್ಧಿಗೆ ಇಲ್ಲಿ ಅವಕಾಶ ಕಲ್ಪಿಸಿಕೊಡಲಾಯಿತು. ಈ ಅವಧಿಯಲ್ಲಿಯೇ ಬಾಂಬೆಯ ಸರ್.ಜೆ.ಜೆ.ಸ್ಕೂಲ ಆಫ್ ಆರ್ಟ್‌ದಲ್ಲಿ ತರಬೇತಿ ಹೊಂದಿ ಬಂದ ಕರ್ನಾಟಕದ ಹಲವು ಕಲಾವಿದರು ಕರ್ನಾಟಕದಲ್ಲಿ ಖಾಸಗಿಯಾಗಿ ಚಿತ್ರಕಲಾ ಶಾಲೆಗಳನ್ನು ಪ್ರಾರಂಭಿಸಿದರು. ಅವರಲ್ಲಿ ಚಿತ್ರಕಲಾವಿದ ಡಿ.ವಿ.ಹಾಲಭಾವಿಯವರೇ ಮೊದಲಿಗೆ ಉತ್ತರ ಕರ್ನಾಟಕದಲ್ಲಿ ಶಾಲೆಯನ್ನು ಪ್ರಾರಂಭಿಸುವುದರ ಜೊತೆಗೆ ಕಲಾಕ್ಷೇತ್ರಕ್ಕೆ ಮಹತ್ವವಾದ ಕೊಡುಗೆ ನೀಡಿದರು.[೪]

ಹಾಲಭಾವಿಯವರು ಮುಂಬೈನ ಜೆ.ಜೆ.ಸ್ಕೂಲ್ ಆಫ್ ಆರ್ಟ್‌ನಲ್ಲಿ ಡಿಪ್ಲೊಮಾ ಪೇಂಟಿಂಗ್ ಕ್ಲಾಸಿನಲ್ಲಿ ಅಭ್ಯಾಸ ಮಾಡುವಾಗ ಅದೇ ಕ್ಲಾಸಿನಲ್ಲಿ ಅಭ್ಯಸಿಸುತ್ತಿರುವ ಒಬ್ಬ ಇಟಾಲಿಯನ್ ವಿದ್ಯಾರ್ಥಿನಿಯ ಸ್ನೇಹ

೩. ಡಾ.ಎಸ್.ಸಿ.ಪಾಟೀಲ(ಸಂ), ವರ್ಣಸಂಚಯ, ಪುಟ ೪೦/೪೧
೪. -ಅದೇ-

ಬೆಳೆಯಿತು. ಇಟಲಿಯ ಭಾಷೆಯನ್ನು ಸ್ನೇಹಿತೆಯಿಂದ ಸ್ವಲ್ಪ ಸ್ವಲ್ಪ ಕಲಿತರು. ಈ ಮೊದಲೇ ಹಾಲಭಾವಿಯವರು ಅವರ ಪ್ರೀತಿಯ ಮಿತ್ರರಾದ ಶ್ರೀ ಡಿ.ಜಿ.ಬಡಿಗೇರ ಶ್ರೀ ಎಮ್.ವ್ಹಿ.ಮಿಣಜಗಿಯವರು ಇಂಗ್ಲೆಂಡಿಗೆ ಹೋಗಿ ಬಂದಿದ್ದರು. ಹೀಗಾಗಿ ನಾನೂ ಇಟಲಿಗೆ ಹೋಗಬಾರದೇಕೆ? ಎಂದುಕೊಂಡಿದ್ದರು. ಜಗತ್ತಿನಲ್ಲಿಯೇ ೧೮,೧೯ನೇ ಶತಮಾನದಲ್ಲಿ ಆಗಿಹೋದ ಹೆಸರಾಂತ ಚಿತ್ರಕಲಾವಿದರಾದ ಪಾವೂಲ್ಲೊ, ಉಕೆಲ್ಲೊ, ಫ್ರಾನ್ಸಿಸ್ಕೊ, ಸಾಂಡ್ರೊಬೊಟ್ಟೊಸೆಲ್ಲಿ, ಲಿಯೋನಾರ್ಡೊ ಡಾವಿನ್ಸಿ, ಮೈಕಲ್ ಎಂಜಿಲೊ, ರಾಫೇಲ್, ಪಿಕಾಸೊ, ವಿನ್ಸಂಟ ವ್ಯಾನಗಾಗ್, ಮುಂತಾದವರ ಕಲಾಕೃತಿಗಳನ್ನು ನೋಡಿ ಅಭ್ಯಸಿಸಲಿಕ್ಕೆ ಮತ್ತು ಅಲ್ಲಿಯ ಚಿತ್ರಕಲಾ ಶಾಲೆಯಲ್ಲಿ ಅಭ್ಯಸಿಸಲಿಕ್ಕೆ ಹೋಗಲೇಬೇಕೆಂದು ಮನದಲ್ಲಿ ದೊಡ್ಡದೊಂದು ಮಹತ್ವಕಾಂಕ್ಷೆಯನ್ನು ಇಟ್ಟುಕೊಂಡಿದ್ದರೂ ಆದರೆ ಮನೆಯಲ್ಲಿ ಮುಪ್ಪಿನ ತಂದೆ ವೀರಭದ್ರಪ್ಪನವರು ದಾನಪ್ಪನವರಿಗೆ ನೀನು ವಿದೇಶಕ್ಕೆ ಹೋದರೆ ಮನೆಯಲ್ಲಿ ಯಾರು? ನನ್ನ ಗತಿ ಏನು ಎಂದಾಗ ನನ್ನ ಮನಸ್ಸು ತುಂಬಾ ನೋವಾಯಿತು ಎಂದು ತಾವೇ ಬರೆದ ನನ್ನ "ಸಿಲೋನ ಪ್ರವಾಸ" ಎಂಬ ಕಿರು ಗ್ರಂಥದಲ್ಲಿ ಹೇಳಿದ್ದಾರೆ. ಆದ್ದರಿಂದ ನಾನು ಹೆಚ್ಚಿನ ಕಲಾಭ್ಯಾಸಕ್ಕೆ ವಿದೇಶಕ್ಕೆ ತೆರಳಲು ಸಾಧ್ಯವಾಗಲಿಲ್ಲವೆಂದರು.[೫]

ಮುಂದೆ ತಾವು ಕಲಿತ ಸರ್.ಜೆ.ಜೆ.ಸ್ಕೂಲ್ ಆಫ್ ಆರ್ಟ್‌ನಂಥ ಸಂಸ್ಥೆಯನ್ನು ಧಾರವಾಡದಲ್ಲಿ ಸ್ಥಾಪಿಸಬೇಕು. ಮುಂಬೈಗೆ ಹೋಗಲು ಸಾಧ್ಯವಾಗದ ಅಸಂಖ್ಯ ಕಲಾಭಿಮಾನಿಗಳ ಅಧ್ಯಯನ, ಅಧ್ಯಾಪನಕ್ಕಾಗಿ ಅನುವು ಮಾಡಿಕೊಡಬೇಕೆಂದು ಕಲಾಶಾಲೆಯನ್ನು ಪ್ರಾರಂಭಿಸುವದರೊಂದಿಗೆ ವೃತ್ತಿಜೀವನ ಪ್ರಾರಂಭಿಸಿದರು. ಹಾಲಭಾವಿಯವರು ತಮ್ಮ ಉಪಜೀವನಕ್ಕಾಗಿ, ಸರ್ಕಾರಿ ನೌಕರಿಯ ಸುಲಭ ಹಾದಿಯನ್ನು ಅನುಸರಿಸಿ ಹೋಗಬಹುದಾಗಿತ್ತು. ಆದರೆ ಪರಂಪರೆಯನ್ನು ಒಪ್ಪದ ಒಬ್ಬ ಕ್ರಾಂತಿಕಾರ ಅವರಲ್ಲಿ ಅವಿತುಕೊಂಡಿದ್ದ. ಹೀಗಾಗಿ ಚಿತ್ರಕಲೆಯಲ್ಲಿ ಅಪಾರ ಆಸಕ್ತಿ ಇರುವದರಿಂದ ಕನ್ನಡ ನಾಡಿನ ಜನತೆಗೆ ಚಿತ್ರಕಲೆ ಬಗ್ಗೆ ಅಭಿರುಚಿ ಮೂಡಿಸಬೇಕೆಂದು, ಚಿತ್ರಕಲೆಯು ಮಾನವನನ್ನು ಕತ್ತಲೆಯಿಂದ ಬೆಳಕಿನ ಕಡೆಗೆ, ಅಜ್ಞಾನದಿಂದ ಸುಜ್ಞಾನದ ಕಡೆಗೆ ತರುವ ಸಾಧನವೆಂದು ತಿಳಿದು ಕರ್ನಾಟಕದಲ್ಲಿ ಚಿತ್ರಕಲಾ ಶಾಲೆಗಳು ಇಲ್ಲದಿರುವುದನ್ನು ಗಮನಿಸಿ, ನಮ್ಮ ರಾಜ್ಯದ ಸಾಂಸ್ಕೃತಿಕ ರಾಜಧಾನಿಯಾದ ಧಾರವಾಡದಲ್ಲಿ ತಮ್ಮ ೨೮ನೇ ವಯಸ್ಸಿನಲ್ಲಿ ಜೂನ್ ೧೦. ೧೯೩೫ರಂದು ಅರ್.ಎಲ್.ಎಸ್. ಹೈಸ್ಕೂಲ್‌ನಲ್ಲಿ ಕಲಾಶಾಲೆ ಸ್ಥಾಪನೆ ಮಾಡುವುದರ ಜೊತೆಗೆ ತಮ್ಮ ಕಲಾಪೂಜೆ ಪ್ರಾರಂಭಿಸಿದರು. ಮೊದಲು ಕಲಾಶಾಲೆಯಲ್ಲಿ ಚಿತ್ರಕಲೆಯನ್ನು ಕಲಿಯಲು ಬಂದ ವಿದ್ಯಾರ್ಥಿಗಳು ಕೇವಲ ಇಬ್ಬರೆ. ಆರ್.ಎಲ್.ಎಸ್.ಹೈಸ್ಕೂಲನಲ್ಲಿ ಒಂದು ವರುಷ ನಾಲ್ಕು ತಿಂಗಳು ಅಂದರೆ ಜೂನ್ ೧೦-೧೯೩೫ ರಿಂದ ಅಕ್ಟೋಬರ್ ೧೯೩೬ವರೆಗೆ ನಡೆದು ಕಾರಣಾಂತರದಿಂದ ಕರ್ನಾಟಕ ವಿದ್ಯಾವರ್ಧಕ ಸಂಸ್ಥೆಯಲ್ಲಿ ಅಕ್ಟೋಬರ ೧೯೩೬ರಿಂದ ಜೂನ್ ೧೯೩೭ರವರೆಗೆ ನಡೆಯಿತು. ನಂತರದಲ್ಲಿ ಸ್ವತಃ ಹಾಲಭಾವಿಯವರೆ ಕಲಾ ಮಂದಿರದ ಕಟ್ಟಡದ ರೂಪರೇಷೆಗಳನ್ನು ರಚಿಸಿ ತಮ್ಮನ್ನು ಮುಕ್ಕುತ್ತಿರುವ ಹಲವು ಆರ್ಥಿಕ ಅಡಚಣೆಗಳನ್ನು ಲೆಕ್ಕಿಸದೆ ಸ್ವಪ್ರಯತ್ನದಿಂದ ಪರಿಶ್ರಮದಿಂದ ಧಾರವಾಡದಲ್ಲಿ ಕೋರ್ಟ್ ಎದುರಗಡೆ ಸುಂದರ ಕಟ್ಟಡವನ್ನು ನಿರ್ಮಿಸಿದರು.

೧೯೪೦ನೇ ಇಸ್ವಿಯಲ್ಲಿ ಧಾರವಾಡ ಜಿಲ್ಲೆಯ ಕಲೆಕ್ಟರ್, ಹಿಂದೆ ಬಂಗಾಲದ ರಾಜ್ಯಪಾಲರಾಗಿದ್ದ ಎ.ಎಮ್.ಡಾಯಸ್ ಅವರ ಅಮೃತ ಹಸ್ತದಿಂದ ಉದ್ಘಾಟಿಸಲಾಯಿತು. ಅಸಾಧ್ಯವಾದ ಪರಿಸರವನ್ನು ಗೆದ್ದು ಕಲಾಶಾಲೆಗೆ ಭದ್ರಬುನಾದಿಯನ್ನು ಹಾಕಿದರು. ಕೆಲವೇ ಕೆಲವು ವರ್ಷಗಳಲ್ಲಿ ಸರ್.ಜೆ.ಜೆ.ಸ್ಕೂಲ್ ಆಫ್ ಆರ್ಟ್ಸ್ ಸಂಸ್ಥೆಗೆ ಸರಿಸಮಾನವಾಗಿ ನಿಲ್ಲಬಲ್ಲ ದೃಢತೆಯನ್ನು ಕಲಾಮಂದಿರ ಪಡೆದುಕೊಂಡಿತು.[೬]

ಡ್ರಾಯಿಂಗ್ ಗ್ರೇಡ್, ಪೇಂಟಿಂಗ್, ಕೋರ್ಸಗಳ ಜೊತೆಗೆ ಫೋಟೊಗ್ರಾಫಿ, ನೃತ್ಯ, ಸಂಗೀತದಂಥ ಲಲಿತಕಲೆಗಳಲ್ಲಿ ಶಿಕ್ಷಣವನ್ನು ಹಾಲಭಾವಿಯವರು ನೀಡಲಾರಂಭಿಸಿದರು. ಪರೀಕ್ಷಾ ಕೇಂದ್ರವನ್ನು ಧಾರವಾಡದಲ್ಲಿ ಮಾಡಿದರು. ೫ವರ್ಷಗಳ ಕಾಲಾವಧಿಯಲ್ಲಿ ಕಲಾಮಂದಿರಕ್ಕೆ ಬೇಕಾದ ಎಲ್ಲಾ ಸೌಕರ್ಯಗಳನ್ನು ಪೂರೈಸಿದ

೫. ಡಿ.ವಿ.ಹಾಲಭಾವಿ, ನನ್ನ ಸಿಲೋನ ಪ್ರವಾಸ, ಪುಟ ೧
೬. ಎಸ್.ಕೆ.ಹೂಗಾರ, ಡಿ.ವಿ.ಹಾಲಭಾವಿ, ಪುಟ ೧೦/೧೧

ಡಿ.ವಿ.ಹಾಲಭಾವಿಯವರು ೧೯೩೯ರಲ್ಲಿ ಅನಾರೋಗ್ಯಕ್ಕೆ ತುತ್ತಾದರು. ೨ಸಲ ಶಸ್ತ್ರ ಚಿಕಿತ್ಸೆಗೆ ಒಳಗಾದರು. ದೇವಿಯ ದಯೆ ಹಾಗೂ ಕಲಾಭಿಮಾನಿಗಳಿಂದ ಅವರ ಆರೋಗ್ಯ ಕ್ರಮೇಣ ಸುಧಾರಿಸಿಕೊಂಡಿತು. ೧೯೪೧ರಲ್ಲಿ ಹೊಸದಾಗಿ ಎರಡು ಕೋರ್ಸಗಳನ್ನು ಪ್ರಾರಂಭಿಸಿದರು. ಅದರಲ್ಲಿ ೧. ಪ್ರಾಥಮಿಕ ಚಿತ್ರಕಲೆ ೨. ಇಂಟರ ಮೇಡಿಯೆಟ್ ಚಿತ್ರಕಲೆ ಎಂಬ ವಿಷಯಗಳನ್ನು ಕಲಾವಿದ್ಯಾರ್ಥಿಗಳಿಗೆ ಪರಿಚಯಿಸಿದರು.

ಇವುಗಳ ತರಗತಿಯ ನಿರ್ವಹಣೆಗಾಗಿ ಪ್ರಾಚಾರ್ಯರು, ಮುಂಬೈನಿಂದ ಪರಿಣಿತರಾದ ಶಿಕ್ಷಕರನ್ನು ಕರೆತಂದರು. ಇದರಿಂದ ಕಲಾವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಯಿತು. ಮತ್ತು ಕಲಾ ಶಾಲೆಯ ಗುಣಮಟ್ಟವು ಹೆಚ್ಚಾಯಿತು. ೧೯೫೬ರವರೆಗೆ ಎಲ್ಲಾ ಚಿತ್ರಕಲಾ ಪರೀಕ್ಷೆಗಳನ್ನು ಈ ಕಲಾಮಂದಿರದ ವತಿಯಿಂದಲೇ ನಿರ್ವಹಿಸಲಾಯಿತು. ಯಾವಾಗ ಧಾರಡಾಡ, ಕಾರವಾರ, ಬಿಜಾಪೂರಗಳೆಲ್ಲವೂ ಮೈಸೂರ ಸರಕಾರದ ಆಧೀನಕ್ಕೆ ಒಳಪಟ್ಟವೋ ಆಗ ಮೈಸೂರ ಸರಕಾರವೇ ಕೇಲವು ಪರೀಕ್ಷಾ ಕೇಂದ್ರಗಳನ್ನು ಪ್ರಾರಂಭಿಸಿದವು. ಎ.ಕೆ. ಗೌರಮೆಂಟ್ ಹೈಸ್ಕೂಲಿನಲ್ಲಿ ಮೊದಲು ಪರೀಕ್ಷಾ ಕೇಂದ್ರ ಪ್ರಾರಂಭಿಸಿದರು.[೭] ಈಗ ಅದು ಕರ್ನಾಟಕ ವಿಶ್ವವಿದ್ಯಾಲಯ ಆಧೀನಕ್ಕೆ ಒಳಪಟ್ಟಿದೆ. ಕಲಾಶಾಲೆ ತೀವ್ರ ಬೆಳವಣಿಗೆಗೆ ಆಗುವದನ್ನು ಕಂಡು ಮೈಸೂರ ಸರ್ಕಾರವು ಚಿತ್ರಕಲಾ ಶಿಕ್ಷಕರ ಪರೀಕ್ಷೆಗಳನ್ನು ಕೈಗೊಳ್ಳಲು ಅನುಮತಿ ನೀಡಿತು. ಕರ್ನಾಟಕದಾದ್ಯಂತ ಕಲಾವಿದ್ಯಾರ್ಥಿಗಳಿಗೆ ಸಿಕ್ಕ ಅನುಮತಿಯಂತೆ ಮೊದಲು ೧೫ಜನ ವಿದ್ಯಾರ್ಥಿಗಳು ಮಾತ್ರ ಪರೀಕ್ಷೆಗೆ ಹಾಜರಾರು. ಹೀಗೆ ಕಾಲನುಕ್ರಮವಾಗಿ ೨೫ ರಿಂದ ೩೫,೪೦ರವರೆಗೂ ಪರೀಕ್ಷೆಗೆ ಹಾಜರಾದ ವಿದ್ಯಾರ್ಥಿಗಳ ಫಲಿತಾಂಶ ಅತ್ಯಂತ ತೃಪ್ತಿಕರವಾಗಿದ್ದು ಕಂಡುಬಂದಿತು.

ಪರೀಕ್ಷಾ ಫಲಿತಾಂಶ ಪ್ರಕಟವಾದ ಕೂಡಲೆ ಉತ್ತೀರ್ಣರಾದ ಅನೇಕ ಕಲಾವಿದ್ಯಾರ್ಥಿಗಳು ಪ್ರೌಢಶಾಲೆಗಳಲ್ಲಿ ಚಿತ್ರಕಲಾ ಶಿಕ್ಷಕರಾಗಿ ಕರ್ನಾಟಕ ಹಾಗೂ ಕರ್ನಾಟಕೇತರ ಭಾಗಗಳಲ್ಲಿ ನೇಮಕಗೊಂಡರು. ಹೀಗೆ ಹಾಲಭಾವಿಯವರು ಕಟ್ಟಿ ಬೆಳೆಸಿದ ಕಲಾಶಾಲೆ ಅನೇಕ ವಿದ್ಯಾರ್ಥಿಗಳಿಗೆ ಕಲಾಶಿಕ್ಷಣ ನೀಡುವುದರ ಮೂಲಕ ವಿದ್ಯಾರ್ಥಿಗಳ ಭವಿಷ್ಯಕ್ಕೆ ಒಂದು ಹೊಸ ಆಯಾಮವನ್ನು ನೀಡಿತು.[೮]

ಡಿ.ವಿ.ಹಾಲಭಾವಿಯವರಿಗೆ ೧೭-೦೧-೧೯೫೯ರಂದು ಕರಾಳ ದಿನವಾಯಿತು. ಯಾಕೆಂದರೆ ಅವರ ಸಾಧನೆಗೆ ಕಾರಣೀಭೂತರಾದ ಪ್ರೀತಿಯ ತಂದೆ ವೀರಭದ್ರಪ್ಪನವರು ತೀರಿಕೊಂಡರು ಮತ್ತು ಸ್ವಲ್ಪದಿನ ಹಾಲಭಾವಿಯವರು ಚೇತರಿಸಿಕೊಂಡು ಈ ಹಿಂದೆ ಅಂದುಕೊಂಡಿದ್ದ ವಿದೇಶಿ ಪ್ರವಾಸ ಚಿಂತೆ ಮತ್ತೆ ಅವರನ್ನು ಕಾಡತೊಡಗಿತು. ಮೂರು ತಿಂಗಳ ಮಟ್ಟಿಗಾದರೂ ಇಟಲಿಗೆ ಹೋಗಲೆಬೇಕೆಂದು ನಿರ್ಧರಿಸಿದರು. ಮತ್ತೆ ಸ್ಕಾಲರಶಿಪ್‌ಗಾಗಿ ಸರಕಾರಕ್ಕೆ ಅರ್ಜಿಹಾಕಿ, ಬೆಲೆಯುಳ್ಳ ಕ್ಯಾಮರ ಸಾಮಗ್ರಿಗಳನ್ನು ಮಾರಿಕೊಂಡು ಹಣ ಸಂಗ್ರಹಿಸಿದರು. ಪಾಸ್‌ಪೋರ್ಟ್ ಕೂಡ ದೊರೆಯಿತು. ಆದರೆ ಆವಾಗ ಕಟ್ಟುನಿಟ್ಟಿನ ನಿಯಮಗಳಿದ್ದ ಕಾರಣಕ್ಕೆ ಸರಕಾರದಿಂದ ಹೋಗಲಿಕ್ಕೆ ಪರವಾನಿಗೆ ಸಿಗಲಿಲ್ಲ. "ದೇವರು ವರಕೊಟ್ಟರೆ, ಪೂಜಾರಿ ವರಕೊಡಲಿಲ್ಲವೆಂಬತೆ" ಕೂಡಿ ಹಾಕಿದ ಹಣದಿಂದ ಮತ್ತೆ ತಮ್ಮ ಕ್ಯಾಮರಾ ಸಾಮಗ್ರಿಗಳನ್ನು ಖರೀದಿಸಿ, ಪೋಟೊಗ್ರಾಫಿಯನ್ನು ಪ್ರಾರಂಭಿಸುವದರ ಜೊತೆ ಅವರ ನೆಚ್ಚಿನ ಕಲಾ ಸಂಸ್ಥೆ ಬೆಳವಣಿಗೆಗೆ ಬಗ್ಗೆ ಹೆಚ್ಚಿನ ಗಮನಹರಿಸಿದರು.[೯]

**ಸ್ಕೂಲ್ ಆಫ್ ಆರ್ಟ್ ಬೆಳ್ಳಿ ಹಬ್ಬ**

ಸ್ಕೂಲ್ ಆಫ್ ಆರ್ಟ ೨೫ ವರ್ಷಗಳಲ್ಲಿ ಕರ್ನಾಟಕದಲ್ಲಿ ಕಲಾ ವಾತಾವಣವನ್ನು ನಿರ್ಮಿಸುತ್ತ ೧೯೬೦ರಲ್ಲಿ ಸ್ಕೂಲ್ ಆಫ್ ಆರ್ಟ್ ಬೆಳ್ಳಿ ಹಬ್ಬದ ಸಂಭ್ರಮವನ್ನು ಕಂಡಿತು. ಕರ್ನಾಟಕ ವಿಶ್ವವಿದ್ಯಾಲಯ ಉಪಕುಲಪತಿಗಳಾದ ರ್‍ಯಾಂಗಲರ ಡಾ. ಡಿ.ಸಿ. ಪಾವಟೆ, ಹಿರಿತನದಲ್ಲಿ ಅತ್ಯಂತ ವೈಭವತವಾಗಿ ತನ್ನ ಬೆಳ್ಳಿ ಹಬ್ಬವನ್ನು ಆಚರಿಸಿಕೊಂಡಿತು.

೭. ಎನ್.ಪಿ.ಬಸವರಾಜ್, ಎ ಸ್ಟಡಿ ಆಫ್ ಹಿಸ್ಟರಿ ಆಫ್ ಆರ್ಟ್ ದ ಸ್ಕೂಲ್ ಆಫ್ ಆರ್ಟ್ ಧಾರವಾಡ, ಪುಟ ೨೩/೨೪
೮. -ಅದೇ- ಪುಟ ೨೪/೨೫
೯. ಡಿ.ವಿ.ಹಾಲಭಾವಿ, ನನ್ನ ಸಿಲೋನ ಪ್ರವಾಸ, ಪುಟ ೨

ಈ ಸಮಾರಂಭದಲ್ಲಿ ಪದ್ಮ ಶ್ರೀ ಪ್ರಶಸ್ತಿ ಪುರಸ್ಕೃತ ಕೆ.ಕೆ.ಹೆಬ್ಬಾರ ಮತ್ತು ಸಂಸ್ಥೆಯ ಉಪಾಧ್ಯಕ್ಷರಾದ ಡಾ. ಸರೋಜಿನಿ ಮಹಿಷಿ ಭಾಗವಹಿಸಿ ಸಂಸ್ಥೆಯ ಬೆಳವಣಿಗೆಯನ್ನು ಕೊಂಡಾಡಿದರು. ಹಾಲಭಾವಿಯವರ ಮನಸ್ಸು ನಂತರದಲ್ಲಿ, ಚಿತ್ರಕಲಾ ಶಿಕ್ಷಕರ ತರಬೇತಿ ವರ್ಗಗಳನ್ನು ಕಲಾಮಂದಿರಗಳಲ್ಲಿ ಪ್ರಾರಂಭಿಸಬೇಕೆಂದು ಕಡೆಗೆ ಹೋಯಿತು. ಚಿತ್ರಕಲೆಗೆ ತಾನಾಗಿಯೇ ಅರಿವನ್ನು, ಅಭಿರುಚಿಯನ್ನು ಹುಟ್ಟಿಸುವ ಸಾಮರ್ಥ್ಯ ಅದಕ್ಕಿದೆ. ಚಿತ್ರಕಲೆಯು ಇಡೀ ಮಾನವ ಜನಾಂಗದ ಒಂದೇ ಒಂದು ಭಾಷೆಯಾಗಿದೆ. ಈ ಚಿತ್ರಕಲೆಯಿಂದ ವಿದ್ಯಾರ್ಥಿಗಳ ನೀತಿ ನಡುವಳಿಗಳು ಸುಧಾರಿಸುವದಲ್ಲದೆ ಅವರಲ್ಲಿ ವಿಶ್ವಪ್ರೇಮವು ಬೆಳೆದುಬರುವುದು ಮತ್ತು ಕೆಟ್ಟ ಕೆಲಸಮಾಡುವ ಹಾಗೂ ಪ್ರಾಣಿ, ಪಕ್ಷಿಗಳನ್ನು ಹಿಂಸಿಸುವ ಪ್ರವೃತ್ತಿ ತಾನಾಗಿಯೆ ದೂರವಾಗುವುದು ಎಂಬುದನ್ನು ಅನುಭವದಿಂದ ಅರಿತ ಹಾಲಭಾವಿಯವರು ಆಗಿನ ಮುಂಬೈ ಸರಕಾರದಿಂದ ಇಡಿ ಕರ್ನಾಟಕಕ್ಕೆ ಒಂದೇ ಒಂದು ಡ್ರಾಯಿಂಗ್ ಟೀಚರ್ಸ್ ತರಬೇತಿ ಕ್ಲಾಸು ಪ್ರಾರಂಭಿಸಲು ಅನುಮತಿಯನ್ನು ೧೯೫೨ರಲ್ಲಿ ಪಡೆದುಕೊಂಡರು.[೧೦]

ಈ ರೀತಿ ಸರ್ವತೋಮುಖವಾಗಿ ಕಲಾಮಂದಿರ ಬೆಳೆದು ಕಲಾದೇಗುಲವಾಗಿ ನಿಂತಿತು. ಈ ಕಲಾ ಶಾಲೆ ಡ್ರಾಯಿಂಗ್ ಮತ್ತು ಪೇಂಟಿಂಗ್ ಡಿಪ್ಲೋಮಾದವರೆಗೆ ಡಿ.ಟಿ.ಸಿ., ಡಿ.ಎಂ.ಸಿ., ಎ.ಎಮ್. ಮುಂತಾದ ಲಲಿತಕಲೆಗಳ ವರ್ಗಗಳು ಅವಿರತವಾಗಿ ನಡೆಯುತ್ತಾ ಸಾಗಿದವು.[೧೧]

### ಸ್ಕೂಲ್ ಆಫ್ ಆರ್ಟ್ ಸುವರ್ಣ ಮಹೋತ್ಸವ

ಹಾಲಭಾವಿಯವರು ಸ್ಥಾಪಿಸಿದ ಕಲಾ ಶಾಲೆಯ ೫೦ ವರ್ಷಗಳನ್ನು ಪೂರೈಸಿ ಸುವರ್ಣ ಮಹೋತ್ಸವನ್ನು ಆಚರಿಸಿಕೊಂಡಿತು. ಈ ಸಮಾರಂಭವನ್ನು  ಡಾ. ಮಲ್ಲಿಕಾರ್ಜುನ ಮನ್ಸೂರ ಕಲಾಭವನದಲ್ಲಿ ಅದ್ದೂರಿಯಾಗಿ ಆಚರಿಸಲಾಯಿತು. ಈ ಸಂದರ್ಭದಲ್ಲಿ ಚಿತ್ರಕಲಾ ಶಿಬಿರವನ್ನು ಏರ್ಪಡಿಸಲಾಗಿತ್ತು, ಶಿಬಿರದಲ್ಲಿ ಅನೇಕ ಕಲಾವಿದರು ಭಾಗವಹಿಸಿದ್ದರು. ಶಿಬಿರದಲ್ಲಿ ರಚಿಸಿದ ಕಲಾಕೃತಿಗಳ ಪ್ರದರ್ಶನವೂ ನಡೆಯಿತು. ಈ ಕಲಾ ಪ್ರದರ್ಶನವು ಉದ್ಘಾಟನೆಯನ್ನು ದಿನಾಂಕ:೨೬-೧೨-೧೯೯೫ರಂದು ಬೆಳಿಗ್ಗೆ ೧೦ ಘಂಟೆಗೆ ಕರ್ನಾಟಕ ಲಲಿತಕಲಾ ಅಕಾಡೆಮಿ ಅಧ್ಯಕ್ಷರಾದ ಶ್ರೀ ಸಿ. ಚಂದ್ರಶೇಖರ ಉದ್ಘಾಟಿಸಿದರು. ಅತಿಥಿಗಳಾಗಿ ಶ್ರೀ ಕೆ.ಡಿ.ಪತ್ತಾರ  ಆಗಮಿಸಿದ್ದರು. ಇದೇ ಸಂದರ್ಭದಲ್ಲಿ ಕಲಾವಿದ್ಯಾರ್ಥಿಗಳಿಗೆ ಖ್ಯಾತ ಕಲಾವಿದರಾದ ದೆಹಲಿಯ ಶ್ರೀ ಬಿ.ಎಫ್. ಮುರಗೋಡ ಬಹುಮಾನ ವಿತರಿಸಿದರು. ಶಿಬಿರದಲ್ಲಿ ಪಾಲ್ಗೊಂಡ ಕಲಾವಿದರಿಗೆ ಕೇಂದ್ರ ಲಲಿತಕಲಾ ಅಕಾಡೆಮಿಯ ಚೇರ್‌ಮನ್ ಶ್ರೀ ಆನಂದ ದೇವ್ ಕಲಾವಿದರಿಗೆ ನೆನಪಿನ ಕಾಣಿಕೆ ನೀಡಿ ಸನ್ಮಾನಿಸಿದರು.

ಸಮಾರಂಭದ ಸಾನಿಧ್ಯವನ್ನು ರುದ್ರಾಕ್ಷಿಮಠದ ಪೂಜ್ಯ ಶ್ರೀ ಮ.ನಿ.ಪ್ರ. ಸಿದ್ದರಾಮ ಮಹಾಸ್ವಾಮಿಗಳು ವಹಿಸಿದ್ದರು. ಇದೇ ಸಂದರ್ಭದಲ್ಲಿ ಡಿ.ವಿ. ಹಾಲಭಾವಿಯವರಿಗೆ ಸನ್ಮಾನಿಸಿ ಸನ್ಮಾನ ಪತ್ರ ಅರ್ಪಣೆ ಮಾಡಿದರು. ಮಾಜಿ ಸಚಿವರಾದ ಶ್ರೀಮತಿ ಬಿ.ಟಿ. ಲಲಿತಾ ನಾಯಕ ಅವರು ಡಾ. ಎಸ್.ಸಿ. ಪಾಟೀಲವರು ಸಂಪಾದಿಸಿದ ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು ಎಂಬ ಪುಸ್ತಕವನ್ನು ಬಿಡುಗಡೆ ಮಾಡಿದರು. ಸಮಾರಂಭದಲ್ಲಿ ಶ್ರೀ ಜಿ.ಎಮ್. ಪಾಟೀಲ ಗ್ರಾಮೀಣ ಅಭಿವೃದ್ಧಿ  ಸಚಿವರಾದ ಶ್ರೀ ಎಮ್.ಪಿ. ಪ್ರಕಾಶ ವಿರೋಧಪಕ್ಷದ ನಾಯಕರಾದ ಶ್ರೀ ಬಿ.ಎಸ್. ಯಡಿಯೂರಪ್ಪ,  ನಾಯಕರಾದ ಶ್ರೀ ಎಚ್.ಕೆ. ಪಾಟೀಲ, ಶ್ರೀ ಆನಂದ ದೇವ, ನಾಡೋಜ ಆರ್.ಎಮ್. ಹಡಪದ, ಶ್ರೀ ಸುರೇಶ ಹುಬ್ಬೀಕರ, ಶ್ರೀ ವ್ಹಿ.ಜಿ. ಅಂದಾನಿ, ಶಾಸಕರಾದ ಶ್ರೀ ಚಂದ್ರಕಾಂತ ಬೆಲ್ಲದ ಮತ್ತು ಅನೇಕ ಗಣ್ಯವ್ಯಕ್ತಿಗಳು ಈ ಸಮಾರಂಭದಲ್ಲಿ ಭಾಗವಹಿಸಿದ್ದರು.

### ಸ್ಕೂಲ್ ಆಫ್ ಆರ್ಟ್ ವಜ್ರ ಮಹೋತ್ಸವ

ಕಲಾ ಶಾಲೆಯು ಮುಂದೆ ಬೆಳೆಯುತ್ತ ತನ್ನ ವಜ್ರ ಮಹೋತ್ಸವನ್ನು ದಿನಾಂಕ: ೨೬-೧೨-೧೯೯೫ರಂದು ಆಚರಿಸಿಕೊಂಡಿತು. ಈ ಸಮಾರಂಭದಲ್ಲಿ ಅನೇಕ ಕಲಾ ಪ್ರದರ್ಶನಗಳು ನಡೆದವು. ಸಮಾರಂಭಕ್ಕೆ ಖ್ಯಾತ

---

೧೦. ಎನ್.ಪಿ.ಬಸವರಾಜ್, ಎ ಸ್ಟಡಿ ಆಫ್ ಹಿಸ್ಟರಿ ಆಫ್ ಆರ್ಟ್ಸ್ ದ ಸ್ಕೂಲ್ ಆಫ್ ಆರ್ಟ್ಸ್ ಧಾರವಾಡ, ಪುಟ ೨೪/೨೫
೧೧. ಎನ್.ಪಿ.ಬಸವರಾಜ್, ಎ ಸ್ಟಡಿ ಆಫ್ ಹಿಸ್ಟರಿ ಆಫ್ ಆರ್ಟ್ಸ್ ದ ಸ್ಕೂಲ್ ಆಫ್ ಆರ್ಟ್ಸ್ ಧಾರವಾಡ, ಪುಟ ೨೪/೨೫

ಕಲಾವಿದರು, ವಿದ್ವಾಂಸರು ಗಣ್ಯ ವ್ಯಕ್ತಿಗಳು ಆಗಮಿಸಿದ್ದರು. ಇದೇ ಸಂದರ್ಭದಲ್ಲಿ ಡಾ.ಎಸ್.ಸಿ.ಪಾಟೀಲರವರು ಸಂಪಾದಿಸಿದ 'ಚಿತ್ರಾಕ್ಷಿ' ವಜ್ರಮಹೋತ್ಸವದ ಸ್ಮರಣ ಸಂಚಿಕೆಯನ್ನು ಬಿಡುಗಡೆ ಮಾಡಲಾಯಿತು.

**ವಜ್ರ ಮಹೋತ್ಸವ ಕುರಿತು ಗಣ್ಯರಿಂದ ಬಂದ ಸಂದೇಶಗಳು**

ಸಂದೇಶ ೧

**ಶ್ರೀ ಮನ್ನಿರಂಜನ ಜಗದ್ಗುರು ತೋಂಟದ ಸಿದ್ದಲಿಂಗ ಮಹಾಸ್ವಾಮಿಗಳವರು**

ಶ್ರೀ ಜಗದ್ಗುರು ತೋಟದಾರ್ಯ ಸಂಸ್ಥಾನಮಠ ಡಂಬಳ – ಗದಗ.

ಭಾರತವು ಭಾರಿ ಪ್ರಾಚೀನವುಳ್ಳ ದೇಶ. ಆದರೆ ಅರ್ವಾಚೀನ ಕಾಲದ ಜನ ತಮ್ಮ ಪುರಾತನ ಸಾಧನೆಯು ಮೇಲೆಯೇ ಬದುಕಲಾರರು. ಬ್ಯಾಂಕಿನಲ್ಲಿಟ್ಟ ಬಂಡವಾಳಕ್ಕಿಂತಲೂ ಹೆಚ್ಚಿನ ಹಣವನ್ನು ಅಲ್ಲಿಂದ ತೆಗೆದುಕೊಳ್ಳಲಾಗುವದಿಲ್ಲ. ನಾವು ತೆಗೆದುಕೊಳ್ಳುವ ಹಣಕ್ಕಿಂತಲೂ ನಾವು ಇರಿಸಿದ ಠೇವಣಿ ದೊಡ್ಡದಾಗಿದ್ದರೆ ಮಾತ್ರ ನಾವು ಸಲ್ಲಿಸುವ ಚೆಕ್ಕಿಗೆ ಅಲ್ಲಿ ಬೆಲೆ ಇದೆ. ಆ ಕಾರ್ಯವನ್ನು ನಮ್ಮ ಹಿರಿಯರು ಪುರಾತನ ಕಾಲದಿಂದ ಮಾಡುತ್ತ ಬಂದಿದ್ದಾರೆ.

ಕರ್ನಾಟಕದಲ್ಲಿಯೇ ಪ್ರಪ್ರಥಮವಾಗಿ ಕಲಾ ಶಾಲೆಯನ್ನು ಧಾರವಾಡದಲ್ಲಿ ಸ್ಥಾಪಿಸಿದ ಶ್ರೀ ಡಿ.ವಿ.ಹಾಲಭಾವಿಯವರು ಕಲೆಯ ಏಳ್ಗೆಗಾಗಿ ಶ್ರಮಿಸುತ್ತ ಬಂದ ಉತ್ತರ ಕರ್ನಾಟಕದ ಹೆಮ್ಮೆಯ ವ್ಯಕ್ತಿಗಳಾಗಿದ್ದಾರೆಂಬುದನ್ನು ಹೇಳಲು ಅಭಿಮಾನವೆನಿಸುತ್ತದೆ. ಈ ಕಲಾಶಾಲೆಯ ಸುದೀರ್ಘ ಚರಿತ್ರೆ ರಾಮಾಯಣ–ಮಹಾಭಾರತದಂತೆ ಸುರಮ್ಯವಾಗಿದೆ.

ಕಲಾಶಾಲೆ ಸ್ಥಾಪಿಸುವದು ದೊಡ್ಡದಲ್ಲ. ಅದನ್ನು ನಿರಂತರವಾಗಿ ವ್ಯವಸ್ಥಿತವಾಗಿ ನಡೆಸಿಕೊಂಡು ಬರುವದು ದೊಡ್ಡದು. ಆ ದಿಸೆಯಲ್ಲಿ ಈ ಶಾಲೆ ಪೂಜ್ಯನೀಯ ಶ್ರೀ ಡಿ.ವಿ. ಹಾಲಭಾವಿಯವರಿಂದ ಹಂತಹಂತವಾಗಿ ಬೆಳೆದು, ಅವರ ಚಿರಂಜೀವಿ ಶ್ರೀ ಸುರೇಶ ಹಾಲಭಾವಿಯವರಿಂದ ಸಾರ್ಥಕವಾಗಿ ಮುನ್ನಡೆದಿದೆ. ಈ ಸಂಸ್ಥೆಯ ಶ್ರೇಯಸ್ಸಿಗೆ ಕಳಸ ಎನ್ನುವಂತೆ ಈ ವರ್ಷ ಮಾನ್ಯ ಶ್ರೀ ಡಿ.ವಿ. ಹಾಲಭಾವಿಯವರಿಗೆ ಕರ್ನಾಟಕ ಸರಕಾರ ಪ್ರತಿಷ್ಠಿತ ಕಲಾ ಪ್ರಶಸ್ತಿಯಾದ ಕೆ. ವೆಂಕಟಪ್ಪ ಪ್ರಶಸ್ತಿಯನ್ನು ಪಡೆಯುವದರ ಮೂಲಕ ಕಲಾ ಮೌಲ್ಯವನ್ನು ಹೆಚ್ಚಿಸಿದ್ದಾರೆ. ಉತ್ತರ ಕರ್ನಾಟಕದ ಗೌರವದ ಕಲಾ ಕಿರೀಟಕ್ಕೆ ಮತ್ತೊಂದು ಹೆಮ್ಮೆಯ ಗರಿಯನ್ನು ಸೇರಿಸಿದ್ದಾರೆ. ಈ ಕಲಾ ಸಂಸ್ಥೆ ಇನ್ನೂ ಉತ್ತರೋತ್ತರವಾಗಿ ಬೆಳೆಯಲೆಂದು ಹಾರೈಸಿದ್ದಾರೆ.

ಸಂದೇಶ ೨

**ಎಸ್.ನಿಜಲಿಂಗಪ್ಪನವರು,** ಮಾಜಿ ಮುಖ್ಯಮಂತ್ರಿಗಳು

ಕರ್ನಾಟಕದಲ್ಲಿ ಮಾನವ ಜೀವನಕ್ಕೆ ಒಂದು ಅರ್ಥವನ್ನು ಉಂಟುಮಾಡತಕ್ಕವುಗಳು. ಸರ್ವ ವಿಧದಿಂದ ಕಲೆಗಳು ಕರ್ನಾಟಕದಲ್ಲಿ ಎಲ್ಲಾ ಕಲೆಗಳಿಗೂ ಒತ್ತು ಕೊಟ್ಟು ಪ್ರೋತ್ಸಾಹಿಸಿ ಅವುಗಳನ್ನು ಬೆಳೆಯಿಸುತ್ತಿರುವ ಕೇಂದ್ರಗಳಲ್ಲಿ ಪ್ರಥಮಸ್ಥಾನವನ್ನು ಗಳಿಸಿದೆ. ಧಾರವಾಡದ ಸ್ಕೂಲ್ ಆಫ್ ಆರ್ಟ್ ಈಗ್ಯೆ ೬೦ ವರ್ಷಗಳಿಗೆ ಮುಂಚೆಯಿಂದಲೂ ಬೆಳೆದು ಬಂದಿದೆ. ಅದಕ್ಕೆ ಅಸ್ಥಿಭಾರವಾದರು ಶ್ರೀ ಹಾಲಭಾವಿ ಅವರು.

ಹುಬ್ಬಳ್ಳಿಯಿಂದಾ ಧಾರವಾಡಕ್ಕೆ ಹೋದಾಗಲೆಲ್ಲಾ ಧಾರವಾಡದ ಬಾಗಿಲಲ್ಲಿಯೇ ಈ ಸಂಸ್ಥೆಯ ದರ್ಶನ ಆಗುತ್ತದೆ. ೪೦ ವರ್ಷಗಳ ನನ್ನ ಅನುಭವ ನೋಡಿ ಸಂತೋಷಪಟ್ಟಿದ್ದೇನೆ. ಶ್ರೀ ಹಾಲಭಾವಿಯವರನ್ನು ಮನಸ್ಸಿನಲ್ಲಿಯೇ ಮೆಚ್ಚಿ ಹೊಗಳಿದ್ದೇನೆ. ಈಗ ಈ ಸಂಸ್ಥೆ ಬೃಹದಾಕಾರವಾಗಿ ಬೆಳದು ಸಮಾಜದ ಮೆಚ್ಚಿಗೆಗೆ ಪಾತ್ರವಾಗಿ ವಜ್ರಮಹೋತ್ಸವನ್ನು ಆಚರಿಸುತ್ತಿರುವುದು ಅತ್ಯಂತ ಸಂತೋಷದ ಸಂಗತಿ. ಇದರ ಅಂಗವಾಗಿ ಸ್ಮರಣ ಸಂಚಿಕೆಯನ್ನು ಹೊರತರುತ್ತಿರುವುದೂ ಅಷ್ಟೇ ಹರ್ಷದ ಸಂಗತಿ. ವಜ್ರಮಹೋತ್ಸವವು ಯಶಸ್ವಿ ಆಗಲಿ. ಸಂಸ್ಥೆಯು ಕಲಾ ಸೇವೆಯನ್ನು ಇನ್ನೂ ಹೆಚ್ಚಿನ ರೀತಿಯಲ್ಲಿ ಸಮಾಜಕ್ಕೆ ಸಲ್ಲಿಸಲಿ. ಯಶಸ್ವಿ ಆಗಲಿ ಎಂದು ಹಾರೈಸುತ್ತೇನೆ.

ಸಂದೇಶ ೩

**ವೈ.ಕೆ.ಮುದ್ದು ಕೃಷ್ಣ**

ನಾಡಿನ ಪ್ರಸಿದ್ಧ ಸ್ಕೂಲ್ ಆಫ್ ಆರ್ಟ್ ತನ್ನ ೬೦ನೇ ವಾರ್ಷಿಕೋತ್ಸವವನ್ನು ಅತ್ಯಂತ ಅರ್ಥಪೂರ್ಣವಾಗಿ ಆಚರಿಸುತ್ತಿರುವುದು ತುಂಬ ಸಂತೋಷದ ಸಂಗತಿ. ತಮ್ಮ ಕಾರ್ಯಕ್ರಮ ಯಶಸ್ವಿಯಾಗಿ ನಡೆಯಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

ಸಂದೇಶ ೪

**ಅ.ರಾ.ಚಂದ್ರಹಾಸ ಗುಪ್ತ**

ಪ್ರಖ್ಯಾತ ಕಲಾವಿದರಾದ ಶ್ರೀ ಡಿ.ವ್ಹಿ. ಹಾಲಭಾವಿರವರು ಸ್ಥಾಪಿಸಿರುವ ಕಲಾ ಶಾಲೆಯಲ್ಲಿ ೨೬-೧೨-೧೯೯೮ರಂದು ವಜ್ರಮಹೋತ್ಸವವನ್ನು ಆಚರಿಸುವುದು ಪ್ರಶಂಸನೀಯ. ಈ ಸಂಸ್ಥೆ ಕಲಾಶಿಕ್ಷಣದಲ್ಲಿ ಸಲ್ಲಿಸುತ್ತಿರುವ ಸೇವೆ ಅನುಕರಣೀಯ. ಸುಮಾರು ೮,೦೦೦ ವಿದ್ಯಾರ್ಥಿಗಳು ಈ ಶಾಲೆಯಿಂದ ಶಿಕ್ಷಣವನ್ನು ಪಡೆದು ಕಲಾ ಕ್ಷೇತ್ರದಲ್ಲಿ ತಮ್ಮದೇ ಆದ ಸ್ಥಾನವನ್ನು ಪಡೆದಿರುತ್ತಾರೆ. ಅಲ್ಲದೇ, ಅನೇಕ ವಿದ್ಯಾರ್ಥಿಗಳು ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಖ್ಯಾತಿಯನ್ನು ಪಡೆದಿರುತ್ತಾರೆ. ೬೦ರ ಸಿರಿಯನ್ನು ಅನುಭವಿಸುತ್ತಿರುವ ಈ ಸಂಸ್ಥೆಗೆ ಸರ್ವಾಂಗೀಣ ಅಭ್ಯುದಯವನ್ನು ಆಶಿಸಿದ್ದಾರೆ.

ಹೀಗೆ ಸ್ಕೂಲ್ ಆಫ್ ಆರ್ಟ್ ಸಂಸ್ಥೆ ಬೆಳೆಯುತ್ತಾ ಸಾಗಿತು. ಕಲಾ ಮಂದಿರ ಸಂಸ್ಥೆಯ ಬೆಳವಣಿಗೆಗೆ ಸಾಕಷ್ಟು ಪರಿಶ್ರಮಪಟ್ಟಂತಹ ಸಂಸ್ಥಾಪಕರೂ ಕಲಾ ಮಂದಿರದ ಮೊದಲ ಪ್ರಾಚಾರ್ಯರೂ ಆದ ಡಿ.ವಿ.ಹಾಲಭಾವಿಯವರ ೬೦ನೇ ಹುಟ್ಟುಹಬ್ಬವನ್ನು ೧೯೬೮ರಲ್ಲಿ ಅವರ ಕಲಾಭಿಮಾನಿಗಳು ಅದ್ದೂರಿಯಿಂದ ಆಚರಿಸಿದರು.

ಈ ಒಂದು ಸಮಾರಂಭಕ್ಕೆ ಅಂತರಾಷ್ಟ್ರೀಯ ಖ್ಯಾತಿ ಪದ್ಮಶ್ರೀ ಎಮ್.ಆರ್. ಆಚರೇಕರ ಮತ್ತು ಜೆ.ಜೆ. ಸ್ಕೂಲ್ ಆಫ್ ಆರ್ಟ್‌ನ ಸಹಾಯಕ ನಿರ್ದೇಶಕರು ಮುಖ್ಯ ಅಥಿತಿಗಳಾಗಿ ಪಾಲ್ಗೊಂಡಿದ್ದರು. ಡಾ. ಸರೋಜಿನಿ ಮಹಿಷಿ, ವಿ.ಆರ್. ಅಂಬೇಕರ ಅವರು ಭಾಗವಹಿಸಿದ್ದು. ಇದೇ ಸಂದರ್ಭದಲ್ಲಿ ಡಿ.ವ್ಹಿ. ಹಾಲಭಾವಿಯವರು ಬರೆದ "ನನ್ನ ಸಮಕಾಲಿನರು" ಪುಸ್ತಕವನ್ನು ಬಿಡುಗಡೆ ಮಾಡಲಾಯಿತು. ಈ ಗ್ರಂಥಕ್ಕೆ ರಾಜ್ಯ ಪ್ರಶಸ್ತಿ ದೊರೆಯಿತು.

**ಹಾಲಭಾವಿಯವರ ವಿದೇಶಿ ಯಾತ್ರೆ**

ಬೇರೆ ಬೇರೆ ಕಲೆಗಳ ಬಗ್ಗೆ ತಿಳಿದುಕೊಳ್ಳುವ ಚಿಂತನೆಯಿಂದ ೧೯೬೮-೬೯ರಲ್ಲಿ ಹಾಲಭಾವಿಯವರು ಸೀಲೋನ (ಶ್ರೀಲಂಕಾ) ಪ್ರವಾಸ ಕೈಗೊಂಡರು. ಈ ಯಾತ್ರೆಯನ್ನು ಕಾಮೇಕ್ಸ್ ಇಂಡಿಯಾ ಹೊಸದೆಹಲಿಯವರು ಏರ್ಪಡಿಸಿದ್ದರು. ವಿಶೇಷವೇನೆಂದರೆ ಭಾರತದ ಪ್ರಸಿದ್ಧ ಐದು ವಿಶ್ವವಿದ್ಯಾಲಯಗಳಾದ ಪಂಜಾಬ, ದೆಹಲಿ, ಮಹಾರಾಷ್ಟ್ರ, ಕೇರಳ, ಮದ್ರಾಸದ ವಿದ್ಯಾರ್ಥಿಗಳು ಈ ಯಾತ್ರೆಯಲ್ಲಿ ಭಾಗವಹಿಸಿದ್ದರು. ಈ ಯಾತ್ರೆಯಲ್ಲಿ ಪದವೀಧರ ವಿದ್ಯಾರ್ಥಿಗಳು ಇದ್ದರು. ಮತ್ತು ಸ್ನಾತಕೋತ್ತರ ಪದವೀಧರರು ಮತ್ತು ಇಬ್ಬರು ಪ್ರೋಫೆಸರ ಜೊತೆಗೆ ಶ್ರೀಲಂಕಾಕ್ಕೆ ಹೋಗಲಿಕ್ಕೆ ತಯಾರಾಗಿರಿ ಅಂತ ಹಾಲಭಾವಿಯವರಿಗೆ ಪತ್ರವೊಂದು ಬಂದದ್ದು ಹಾಲಭಾವಿವರಿಗೆ ಆಶ್ಚರ್ಯವನ್ನುಂಟು ಮಾಡಿತು.

ಕೂಡಲೇ ಈ ಇಳಿವಯಸ್ಸಿನಲ್ಲಾದರೂ ವಿದೇಶಕ್ಕೆ ಹೋಗಲಿಕ್ಕೆ ನನಗೆ ಅವಕಾಶ ಸಿಕ್ಕಿತಲ್ಲ ಎಂದು ಸಂತೋಷದಿಂದ ಹೋಗಲಿಕ್ಕೆ ಒಪ್ಪಿಕೊಂಡು ಹೋಗುವ ದಿನಾಂಕವನ್ನು ಖಚಿತಪಡಿಸಿಕೊಂಡರು. ಬೆಂಗಳೂರು ಮಾರ್ಗವಾಗಿ ಬೃಂದಾವನ ರೈಲಿನ ಮೂಲಕ ಪ್ರಯಾಣ ಬೆಳೆಸಿದರು. ಬೆಂಗಳೂರಿನಿಂದ ಮದ್ರಾಸ್‌ಗೆ ಬಂದು

ತಲುಪಿ, ಅಲ್ಲಿಯ ವಿಶ್ವವಿದ್ಯಾಲಯಕ್ಕೆ ಹೋಗಿ ಸಿಲೋನ್‌ಗೆ (ಶ್ರೀಲಂಕಾ)ಕ್ಕೆ ಹೋಗುವ ತಂಡವನ್ನು ಸೇರಿಕೊಂಡರು. ಆ ತಂಡದಲ್ಲಿ ೪೦ ವಿದ್ಯಾರ್ಥಿಗಳು ೨೦ ವಿದ್ಯಾರ್ಥಿನಿಯರು ಇದ್ದರು. ಕಾಮೆಕ್ಸ್ ಇಂಡಿಯಾ ಸಕ್ರೆಟಿಯವರು ಮೂರು ಗುಂಪುಗಳಾಗಿ ಮಾಡಿ ತಲಾ ೨೦ ಜನರಿಗೆ ಒಬ್ಬರಂತೆ ಹಂಚಿಕೊಟ್ಟವರಲ್ಲಿ ಹಾಲಭಾವಿಯವರು ಒಬ್ಬರು.[೧೨]

ಹಾಲಭಾವಿಯವರು ಬರೆದ "ನನ್ನ ಸಿಲೋನ ಸಂದರ್ಶನ"ದ ಕಿರು ಲೇಖನ ಸುಮಾರು ೨೧ ಪುಟಗಳಿದ್ದು, ಇದೇ ಇಲ್ಲಿ ಪ್ರಮುಖ ವಿಷಯಗಳನ್ನು ಆರಿಸಿಕೊಂಡು ಸಂಕ್ಷಿಪ್ತವಾಗಿ ವಿವರಣೆ ನೀಡಲಾಗಿದೆ.

ಹೀಗೆ ಸಿಲೋನನ್ನು ಸಂದರ್ಶಿಸುತ್ತ, ಅಲ್ಲಿಯೇ ವಿವಿಧ ಪಟ್ಟಣಗಳಿಗೆ ಭೇಟಿ ನೀಡುತ್ತಾ, ಕಲೆಯ ಬಗ್ಗೆ ಆ ದೇಶದ ಸಂಸ್ಕೃತಿ ಬಗ್ಗೆ ತಿಳಿದುಕೊಂಡು ಸಾಗಿ, ಹೀಗೆ ಸಿಗಿರಿಯಾ ನಗರಕ್ಕೆ ಬಂದರು. ಇಲ್ಲಿ ಸುಮಾರು ೧೩೦೦ ರಿಂದ ೧೫೦೦ ವರ್ಷಗಳ ಹಿಂದೆ ಬೌದ್ಧ ಚಿತ್ರಕಾರರು ಚಿತ್ರಗಳನ್ನು ಚಿತ್ರಿಸಿದ್ದಾರೆ. ವಿಶೇಷವಾಗಿ ಹೆಣ್ಣುಮಕ್ಕಳ ಚಿತ್ರಗಳಿದ್ದು ಕೈಯಲ್ಲಿ ಕಮಲದ ಹೂ ಮತ್ತು ಬೇರೆ ಬೇರೆ ತರಹದ ಹೂ ಹಣ್ಣು ಹಂಪಲಗಳನ್ನು ಹಿಡಿದುಕೊಂಡು ಹೋಗುವಂತ ಚಿತ್ರಗಳಿವೆ. ಅವುಗಳನ್ನು ಹಾಲಭಾವಿಯವರು ಹೀಗೆ ಹೇಳಿದ್ದಾರೆ– ಬಹುಶಃ ಅವರು ಕಶ್ಯಪನಿಗೆ ಅರ್ಪಿಸಲು ಹೊರಟಿರಬೇಕೆಂದು ಅನ್ನಿಸುತ್ತದೆ. ಈ ಭಿತ್ತಿ ಚಿತ್ರಗಳು ಕ್ರಿ.ಶ. ೪೭೯ ರಿಂದ ೪೯೭ರವರೆಗೆ ಆಳಿದ ೧ನೇ ಕಶ್ಯಪ ದೊರೆ ಕಾಲದ ಚಿತ್ರಗಳು ಇರಬೇಕೆಂದು ಊಹಿಸಿದ್ದಾರೆ. ಈ ಚಿತ್ರಗಳು ಜಗತ್‌ಪ್ರಸಿದ್ಧ ಭಾರತದ ಅಜಂತಾದಲ್ಲಿ ೧೬ ಮತ್ತು ೧೭ನೇ ಗುಹೆಯಲ್ಲಿ ಚಿತ್ರಿಸಿದ ಮಾದರಿ ಇದ್ದಂತೆ ಇವೆ. ಈ ಭಿತ್ತಿ ಚಿತ್ರಗಳು ಬುದ್ಧಕಾಲಿನ ಇದ್ದರೂ ಬುದ್ಧನಿಗೆ ಸಂಬಂಧಿಸಿದಂಥ ಚಿತ್ರಗಳಿಲ್ಲ. ಇವು ಕಶ್ಯಪ್ಪನ ೨೦ ರಾಣಿಯರ ಚಿತ್ರಗಳಿವೆ. ಮುಕ್ಕಾಲು ಶರೀರದ ಚಿತ್ರಗಳಿದ್ದು ಸುಂದರವಾಗಿ ಚಿತ್ರಿಸಿದ್ದಾರೆ. ಈ ಚಿತ್ರಗಳನ್ನು ಚಿತ್ರಿಸುವ ಪದ್ಧತಿ ಅಜಂತಾಗಿಂತ ಸ್ವಲ್ಪ ಭಿನ್ನವಾಗಿವೆ. ಒಟ್ಟಾರೆ ಹೇಳಬೇಕಾದರೆ ಈ ಚಿತ್ರಗಳನ್ನು ಅಜಂತಾದಲ್ಲಿ ಚಿತ್ರಿಸಿದ ವೇಳೆಯಲ್ಲೇ ಇಲ್ಲವೆ ಅದೇ ವೇಳೆಯಲ್ಲೇ ಚಿತ್ರಿಸಿದ್ದಾರೆ. ಅವು ಜಗತ್ಪ್ರಸಿದ್ಧವಾಗಿದೆ. ಭಾರತದಲ್ಲಿ ಗ್ವಾಲಿಯರ್ ಸಮೀಪಕ್ಕೆ ಇರುವ ಭಾಗ್ ಎಂಬಲ್ಲಿಯೂ ಇದೆ ರೀತಿ ಇವೆ. ಅವು ಅಷ್ಟೊಂದು ಸುಂದರವಾಗಿಲ್ಲ ಮತ್ತು ಈ ಬಹುತೇಕ ಚಿತ್ರಗಳು ನಶಿಸಿ ಹೋಗಿರಬೇಕು. ಕೊನೆಗೆ ಒಟ್ಟಾರೆ ನನ್ನ ಜೊತೆಗೆ ಬಂದವರಿಗೆಲ್ಲಾ ಸಿಲೋನದ ಕಲೆ ಮತ್ತು ಸೃಷ್ಟಿ ಸೌಂದರ್ಯದ ವರ್ಣನೆಯನ್ನು ಅವರಿಗೆ ಮನವರಿಕೆ ಅಗುವಂತೆ ತಿಳಿಸಿದೆನು[೧೩] ಎಂದು ಹಾಲಭಾವಿಯವರು ತಮ್ಮ ಲೇಖನದಲ್ಲಿ ನಮೂದಿಸಿದ್ದಾರೆ.

ಸಿಲೋನ ವಾಸ್ತು ಶಿಲ್ಪದಲ್ಲಿ ಸನ್ಯಾಶ್ರಮಗಳು ಕಂಡುಬರುತ್ತವೆ. ಕಮಲದ ಮೇಲೆ ೪೨ ಫೂಟ ಎತ್ತರದ ಬುದ್ಧನ ಮೂರ್ತಿ ಆಸೀನವಾದದ್ದು ಇದೆ. ವಿಶಿಷ್ಟಕಾಲದ ವಾಸ್ತು ಶಿಲ್ಪ ೫ನೇ ಶತಮಾನದಲ್ಲಿ ಸೀಗಿರಿಯಾ ಬಂಡೆಗಲ್ಲಿನ ಮೇಲ್ಪದರಿಗೆ ೧ನೇ ಕಶ್ಯಪದೊರೆ ಅರಮನೆ ಇದೆ.

**ಸಿಗೀರಿಯಾ ಚಿತ್ರಗಳು**

ಕ್ರಿ.ಪೂ. ೩ನೇ ಶತಮಾನದಿಂದಲೂ ಕಲಾವಿದರು ಚಿತ್ರಗಳನ್ನು ತೆಗೆಯುವ ರೂಢಿಯನ್ನು ಇಟ್ಟುಕೊಂಡು ಬಂದಿದ್ದಾರೆ. ಸಿಗಿರಿಯಾದಲ್ಲಿ ಅವುಗಳನ್ನು ಸಂರಕ್ಷಿಸುತ್ತಾ ಬಂದಿದ್ದಾರೆ. ೯ನೇ ಶತಮಾನದ ಚಿತ್ರಗಳನ್ನು ಕಟ್ಟಿಗೆ ಹಲಿಗೆಯ ಮೇಲೆ, ಬಟ್ಟೆಯ ಮೇಲೆ, ಅರಮನೆಯ ಗೋಡೆಯ ಮೇಲೆ, ಮತ್ತು ಆಶ್ರಮಗಳಲ್ಲಿ ಹೆಚ್ಚಾಗಿ ಚಿತ್ರಿಸುತ್ತಿದ್ದರು. ೧೨ನೇ ಶತಮಾನದಲ್ಲಿ ರಾಜವಾಡೆಯ ಕಲಾಸಂಗ್ರಹದಂತೆ ಚಿತ್ರಿಸುತ್ತಿದ್ದರು. ಅದಕ್ಕೆ ಕುಲವಂಶೆ ಎನ್ನುತ್ತಿದ್ದರು.

ಸಿಗೀರಿಯಾದಲ್ಲಿಯ ಚಿತ್ರಗಳು ಮುಂದೆ ಚಾಚಿದ ಪಶ್ಚಿಮಗುಡ್ಡದ ಕೆಳಗಿರುವ ಗುಹೆಗಳಲ್ಲಿ ವಿಶಾಲವಾದ ಬಂಡಗಲ್ಲಿನ ಮೇಲೆ ಇದೆ. ಇದೆ ಗುಹೆ ಮೇಲೆ ಭಾರತದ ಪ್ರಾಚೋ ಕುಬೇರನಿಗೆ ಹೋಲುವಂತ ೫ನೇ ಶತಮಾನದಲ್ಲಿ ಕಟ್ಟಿದಂತಹ ೧ನೇ ಕಶ್ಯಪ ದೊರೆ ಅರಮನೆ ಇದೆ.

---

೧೨. ಡಿ.ವಿ.ಹಾಲಭಾವಿ, ನನ್ನ ಸಿಲೋನ ಪ್ರವಾಸ, ಪುಟ ೧/೨

೧೩. –ಅದೇ– ಪುಟ ೧/೨/೧೧/೧೪

ವಸ್ತ್ರಾಭರಣಗಳು, ವಜ್ರ ವೈಢೂರ್ಯಗಳನ್ನು ಹಾಕಿಕೊಂಡು ಜೋಡಿಯಾಗಿ ಒಬ್ಬಂಟಿಗರಾಗಿ ಕೈಲಾಸದಲ್ಲಿ ಕುಬೇರನು ವಾಸಮಾಡುವ ಗೃಹದಲ್ಲಿದ ಎಷ್ಟೋ ಹೆಣ್ಣುಮಕ್ಕಳ ಚಿತ್ರಗಳ ಪೈಕಿ ೨೨ ಚಿತ್ರಗಳು ಮಾತ್ರ ಉಳಿದಿವೆ. ಕೈಲಾಸದಲ್ಲಿ ಅಪ್ಸರೆಯರು ಮೋಡಗಳೊಳಗಿನಿಂದ ಸಂಚರಿಸುತ್ತಿದ್ದಂತೆ ಚಿತ್ರಿಸಿದ್ದಾರೆ. ಕೆಳಗಿನ ಭಾಗ ಕಾಣುವುದಿಲ್ಲ. ಕೆಲ ಚಿತ್ರಗಳು ಬಂಗಾರದ ವರ್ಣಗಳಿದ್ದು, ಕೆಲವು ಕಪ್ಪು ವರ್ಣವುಗಳಿವೆ. ಕೈಗಳಲ್ಲಿ ಹೂಗಳನ್ನು ಹಿಡಿದುಕೊಂಡಿದ್ದು ಕೆಲವರು ಹೂವಿನ ಮಳಿಗೆರೆಯುತ್ತಿದ್ದಾರೆ. ಮುಖಗಳು ಮುಕ್ಕಾಲು ಭಾಗವುಗಳಾಗಿವೆ. ಬಹಳ ಚಾಣಾಕ್ಷತನದಿಂದ ಚಿತ್ರಿಸಿದ್ದಾರೆ. ಇದೇ ವೇಳೆಗೆ ಭಾರತದಲ್ಲಿ ಚಿತ್ರಿಸಿದಂತಹ ಚಿತ್ರಗಳನ್ನು ಹೋಲಿಸಿ ನೋಡಿದಾಗ ಇವುಗಳನ್ನು ಸ್ಪಷ್ಟವಾಗಿ ಕಾಣುವ ಹಾಗೆ ಚಿತ್ರಿಸಿದ್ದಾರೆ.

ಕೆಂಪು, ಹಳದಿ ಮತ್ತು ಹಸಿರು ಬಣ್ಣಗಳನ್ನಷ್ಟೆ ಉಪಯೋಗಿಸಿದ್ದು, ಬೇರೆ ಬೇರ ಬಣ್ಣಗಳ ಉಪಯೋಗವನ್ನು ಚಿತ್ರಗಳಲ್ಲಿ ಬಳಸಿಕೊಂಡಿಲ್ಲ. ಒಂದೇ ಗೆರೆಯಿಂದ ಚಿತ್ರಿಸಿದ್ದರೂ, ಅಂಗಾಂಗಳು ಸುಂದರವಾಗಿ ಕಾಣುವ ಹಾಗೆ ನೆರಳು ಬೆಳಕನ್ನು ತೋರಿಸಿದ್ದಾರೆ. ಬಣ್ಣಗಳನ್ನು ಖಣಿಗಳಿಂದ ತೆಗೆದು ಮಾಡಲ್ಪಟ್ಟಿದ್ದು ಚಿತ್ರಿಸುವ ರೀತಿ ಫ್ರೆಸ್ಕೋ ಭಿತ್ತಿಚಿತ್ರದ ಹಾಗೆ ಇವೆ. ಭಾರತೀಯ ಚಿತ್ರಗಳ ಹಾಗೆ ಎದೆ ತುಂಬಿಕೊಂಡಿವೆ. ಸಣ್ಣ ನಡ, ಉದ್ದವಾದ ಕಣ್ಣುಗಳು ಮತ್ತು ನಾಜಕ ತುಟಿಗಳಿಂದ ಒಪ್ಪುವ ಹಾಗೆ ರಚನೆ ಮಾಡಿದ್ದಾರೆ. ಮೈಕಟ್ಟು ಲಂಬಾಕಾರ, ಮುಖ ನೋಡಿದರೆ ಆಗಿನ ಸಿಲೋನ ರೀತಿಯಲ್ಲಿದ್ದ ಹಾಗೆ ಕಂಡುಬರುತ್ತದೆ.[೧೪]

ಕ್ಯಾಂಡಿಯ ದಕ್ಷಿಣ ನಾಲ್ಕು ಮೈಲು ಮೇಲೆ ಪಶ್ಚಿಮಕ್ಕೆ ಇರುವ ಹಿಂಡಲಗಾದಲ್ಲಿ ಅರ್ಧಮರ್ಧ ಚಿತ್ರಗಳು ಉಳಿದಿವೆ. ಸಿಗೀರಿಯಾದಲ್ಲಿ ಉಪಯೋಗಿಸಿದ ಬಣ್ಣಗಳು ಇದೇ ತೆರನಾಗಿದೆ. ಚಿತ್ರಿಸಿದ ರೇಖೆಗಳು ಎತ್ತರವಿದ್ದು ಬಾರಹೂತೆ ಸಾಂಚಿಯಲ್ಲಿ ಇದ್ದ ಹೆಚ್ಚು ಉಬ್ಬು ಇಲ್ಲದೆ ಮುಂದುವರೆಯುತ್ತ ಹೋದ ಹಾಗೆ ಕಲ್ಪನಾ ಚಿತ್ರಗಳು ಕಂಡುಬರುತ್ತವೆ. ಈ ಚಿತ್ರಗಳಲ್ಲಿ ಸಮತೋಲನವಿದ್ದು ಸಿಗೀರಿಯಾದ ಆಕೃತಿಗಳಿಗಿಂತ ಅಜಂತಾ ಆಕೃತಿಗಳ ಹಾಗೆ ದುಂಡಗಿನ ಮುಖ ಹಾಗೆ ಚಿತ್ರರೇಖೆಗಳು ಕಂಡುಬರುತ್ತವೆ. ಬುದ್ಧನು ಇಂದ್ರಸಲಾಗವಿಗೆ ಭೇಟಿಕೊಡುವ ಸನ್ನಿವೇಶದಲ್ಲಿದ್ದ ಹಾಗೆ ಕಂಡುಬರುತ್ತದೆ. ಸ್ತೂಪದ ಬಳಗಡೆ ಗೋಡೆಗಳ ಮೇಲೆ ಚಿತ್ರಗಳನ್ನು ನೋಡಿ ಆನಂದ ಪಡೆಯಬಹುದು. ಅಲ್ಲಿ ಸ್ತೂಪದ ಗುಮ್ಮಟವನ್ನು ಕಟ್ಟಿ ಪೂರ್ತಿ ಅದ ಮೇಲೆ ಮಾನವನ ದೃಷ್ಟಿಗೆ ಅಲ್ಲಿ ಏನೂ ಕಂಡುಬರುವದಿಲ್ಲ. ಈ ಚಿತ್ರಗಳು ೮ನೇ ಶತಮಾನದಲ್ಲಿ ಚಿತ್ರಿಸಲ್ಪಟ್ಟಿವೆ.

ಮೊದಲಿನ ಕಾಲದ ತೈವಾನ–ಇಕ–ಫಾತಿಮಾ ಘರ ಎಂದು ಕರೆಯುವ ಪೋಲೋನಾರುವಾದ ಸನ್ಯಾಸಾಶ್ರಮದಲ್ಲಿ ಮತ್ತು ಅರಮನೆಗಳಲ್ಲಿ ಗೋಡೆಗಳ ಮೇಲೆ ೧೨ ಜನ ಶತಮಾನದಲ್ಲಿ ಅಚ್ಚು ಉಳಿದಿದ್ದು ಚಿತ್ರಗಳು ನೋಡಲಿಕ್ಕೆ ಭಾರತದಲ್ಲಿ ಇರುವಂತ ಚಿತ್ರಗಳಿಗಿಂತ ಚಿಕ್ಕ ಚಿತ್ರಗಳು ಸ್ಪಷ್ಟವಾಗಿ ಕಂಡುಬರುತ್ತವೆ. ೧೩ನೇ ಶತಮಾನದಿಂದ ಚಿತ್ರಗಳ ಅವನತಿಯು ಪ್ರಾರಂಭವಾಯಿತು. ಚಿಕ್ಕ ಕಲೆಗಳಿಗಾಗಿ ಹಸ್ತದಂತವನ್ನು ಉಪಯೋಗಿಸುತ್ತಿದ್ದರು. ಇವು ಧಾರ್ಮಿಕ ಮತ್ತು ಸ್ವಂತ ಉಪಯೋಗಕ್ಕಾಗಿ ಅಷ್ಟೆ.

೧೯೬೭ರಲ್ಲಿ ಕೆಲವು ದುಷ್ಕರ್ಮಿಗಳು ಸಿಗೀರಿಯಾದಲ್ಲಿದ್ದ ಕೆಲವು ಭಿತ್ತಿಚಿತ್ರಗಳನ್ನು ನಾಶಮಾಡಿದರೆಂದು ಹೇಳಲಾಗಿದೆ. ಸಾಂಸ್ಕೃತಿಕ ವಸ್ತುಗಳ ಅಭ್ಯಾಸ, ಅವುಗಳ ಸಂರಕ್ಷಣೆಗೆ ಮತ್ತು ಸರಿಯಾಗಿ ಮೊದಲಿನ ಹಾಗೆ ಮಾಡಲಿಕ್ಕೆಂದು ಮೇಲ್ವಿಚಾರಣೆ ಮಾಡಲು ರೋಮ ಪಟ್ಟಣದ ಅಂತರಾಷ್ಟ್ರೀಯ ಕೇಂದ್ರದ ಡಾ. ಲುಸಿಯೊನೊ ಮೊರಾಂಝಿಯ ನೇತೃತ್ವದಲ್ಲಿ ನುರಿತಂತಹ ಇಟಲಿಯ ಕಲಾವಿದರಿಂದ ಪುನಃ ಚಿತ್ರಿಸಲ್ಪಟ್ಟವು. ಈ ಚಿತ್ರಗಳಿಗೆ ಸಿಲೋನದ ಗತಕಾಲೀನ ಮೇಲ್ ಹೊದಿಕೆ ಇಲ್ಲದ ಸುಂದರಿಯರೆಂದು ಕರೆಯುವದುಂಟು.[೧೫]

ಹೀಗೆ ಡಿ.ವಿ.ಹಾಲಭಾವಿಯರಿಗೆ ದೊರೆತ ವಿದೇಶಿ ಪ್ರವಾಸ ಯಾತ್ರೆ ಸಿಲೋನ ಮುಖಾಂತರ ಜಾಫ್ನಾ, ಟ್ರಿಂಕೊಮಲಿ, ಸಿಲೋನದ ಕ್ಯಾಂಡಿ, ಸಿಗೀರಿಯಾ, ಕೋಲೊಂಬೋ, ಲಾವೊನಿಯಾ ಭಾರತದ ರಾಮೇಶ್ವರದ ಚಿತ್ರಕಲೆ ಎಲ್ಲ ಸಂಕ್ಷಿಪ್ತ ವಿವರಣೆಯನ್ನು ನೀಡಿದ್ದಾರೆ.

---

೧೪. ಡಿ.ವಿ.ಹಾಲಭಾವಿ, ನನ್ನ ಸಿಲೋನ ಪ್ರವಾಸ, ಪುಟ ೧೪

೧೫. –ಅದೇ– ಪುಟ ೧೫

**ಸ್ಕೂಲ್ ಆಫ್ ಆರ್ಟ್**

ಸಂಸ್ಥೆಯ ಹಿತದೃಷ್ಟಿಯಿಂದ ಮಕ್ಕಳಲ್ಲಿ ಕಲಾತ್ಮಕ ಮನೋಜ್ಞಾನವನ್ನು ಮೈಗೂಡಿಸಿಕೊಳ್ಳುವುದಕ್ಕಾಗಿ ಅತ್ಯಂತ ಪರಿಣಿತ ಶಿಕ್ಷಕರನ್ನು ಹಾಲಭಾವಿಯವರು ನೇಮಕ ಮಾಡುತ್ತಿದ್ದರು. ಸಂಸ್ಥೆಯ ಘನತೆಗೆ ಕುಂದುಬಾರದಂತೆ ಆಯಾ ಪಟ್ಟೇತರ ಯೋಜನೆಯನ್ನು ನಿರ್ವಹಿಸುತ್ತಿದ್ದರು.

ಕಲಾ ಶಾಲೆಯ ಶಿಕ್ಷಕವೃಂದ ವೇತನವನ್ನು ಆಶ್ರಯಿಸದೆ ಸೇವಾಮನೋಭಾವದಿಂದ ಕಲಾಚಟುವಟಿಕೆಯಲ್ಲಿ ಭಾಗಿಯಾಗುವ ಗುರಿಯನ್ನು ಹೊಂದಿದ್ದರಿಂದ ಶಿಕ್ಷಕವೃಂದಕ್ಕೆ ವೇತನವೆಂಬುದು ಪ್ರಾಮುಖ್ಯವಾಗಿರಲಿಲ್ಲ. ಹಿರಿಯರು ಅನುಭವಿಗಳಾದಂತಹ ಹಾಲಭಾವಿಯವರು ಶಿಕ್ಷಕವೃಂದವನ್ನು ತಮ್ಮ ಪರಿವಾರದಂತೆ ನೋಡಿಕೊಳ್ಳುತ್ತಿದ್ದರು. ಮತ್ತು ಅವರ ಕಷ್ಟಸುಖಗಳಲ್ಲಿ ಭಾಗಿಯಾಗುತ್ತಿದ್ದರು. ಹೀಗಾಗಿ ಶಿಕ್ಷಕರಿಗೆ ಸಂಸಾರದ ಭಾದೆ ತಟ್ಟುತ್ತಿರಲಿಲ್ಲ.

ಕಾಲಾನಂತರ ಮೈಸೂರ ಸರಕಾರ ಕಲಾಸಂಸ್ಥೆಯ ಅತ್ಯುತ್ತಮ ಕಾರ್ಯವಿಧಾನ ಮತ್ತು ಬೆಳವಣಿಗೆಯನ್ನು ಗುರುತಿಸಿ ಸರಕಾರ ಅನುದಾನವನ್ನು ಪ್ರಕಟಿಸಿತು. ಅನುದಾನ ಪಡೆದನಂತರ ಆಯಾ ಶಿಕ್ಷಣ ಜೇಷ್ಟತೆಯನ್ನು ಆಧರಿಸಿ ಶಿಕ್ಷಕರಿಗೆ ಅವರ ವೇತನವನ್ನು ದೃಢೀಕರಣಗೊಳಿಸಲಾಯಿತು.[೧೬]

**ಸಂಸ್ಥೆಗೆ ಹಣಕಾಸಿನ ನೆರವು**

ಮೈಸೂರ ಸರಕಾರವು ಕಲಾಸಂಸ್ಥೆಗೆ ಒದಗಿಸುತ್ತಿದ್ದ ಆರ್ಥಿಕ ಸಹಾಯವು ತುಂಬಾ ಕಡಿಮೆಯಾಗಿತ್ತು. ಸರಕಾರ ನೀಡುವಂತಹ ಅನುದಾನ ಸಹಾಯ ರೂಪದಲ್ಲಿ ರೂಪದರ್ಶಿಗಳಾಗಿ ಕೊಡುತ್ತಿರುವ ವ್ಯಕ್ತಿಗಳೂ ಆ ಹಣ ಸಾಕಾಗುತ್ತಿರಲಿಲ್ಲ. ಆಡಳಿತದ ಕ್ರಿಯಾಶೀಲತೆ ಹಣಕಾಸಿನ ವ್ಯವಹಾರದಲ್ಲಿ ಬಲ್ಲಿದವರಾದ ಡಿ.ವಿ.ಹಾಲಭಾವಿಯವರು ಸರಕಾರಕ್ಕೆ ಮತ್ತು ಶಿಕ್ಷಣ ಇಲಾಖೆಗೆ ಅರ್ಜಿಸಲ್ಲಿಸಿದರು. ಶಿಕ್ಷಣ ಅಧಿಕಾರಿಗಳು ಕಲಾಶಿಕ್ಷಣ ಸಂಸ್ಥೆಯನ್ನು ಮತ್ತು ಮಕ್ಕಳ ಫಲಿತಾಂಶ, ಶಿಕ್ಷಣ ಗುಣಮಟ್ಟವನ್ನು ಪರಿಶೀಲಿಸಿ ಸಂತೃಪ್ತರಾಗಿ ಶಿಕ್ಷಣ ಇಲಾಖೆಯವರು ಕಲಾಸಂಸ್ಥೆಗೆ ವಾರ್ಷಿಕ ೧೫೦ರೂ. ಗಳ ಧನಸಹಾಯವನ್ನು ಮಂಜೂರು ಮಾಡಿದರು. ಈ ಅನುದಾನವು ವಿಶೇಷವಾಗಿದ್ದು, ಕಲಾ ಚರಿತ್ರೆಯಲ್ಲಿಯೆ ಮಹತ್ವದ್ದಾಗಿದೆ. ಕಾಲಾನಂತರದಲ್ಲಿ ನಿರ್ವಹಣೆ ವೆಚ್ಚವು ೫೦೦೦ರೂಗಳಿಗೆ ಏರಿತು.[೧೭]

**ಕಲಾ ಶಾಲೆಯ ಆಡಳಿತ**

ಸಾಮಾಜಿಕ ಜೀವನದಲ್ಲಿ ಕಲಾ ಶಿಕ್ಷಣವು ಬಹುಮುಖ್ಯ ಪಾತ್ರವಹಿಸಿದೆ. ಅದರಲ್ಲೂ ವಿಶೇಷವಾಗಿ ಕಲಾ ವಿದ್ಯಾರ್ಥಿಗಳಿಗೆ ಕಲಾ ಶಿಕ್ಷಣ ಅವಶ್ಯವಾಗಿರುತ್ತದೆ. ಕಲಾ ಶಿಕ್ಷಣ ಎಂಬುದು ಸಾಮಾಜಿಕ ಜೀವನದ ಕನ್ನಡಿ ಇದ್ದಂತೆ ಅದು ಸಮಾಜದಿಂದ ಪ್ರತಿಬಿಂಬಿತವಾಗಿರುತ್ತದೆ. ಧಾರವಾಡ ಪ್ರದೇಶವು ಆಡಳಿತಾತ್ಮಕವಾಗಿ ಹಿಂದೆ ಮುಂಬೈ ಆಡಳಿತಕ್ಕೆ ಒಳಪಟ್ಟಿತ್ತು. ಕಲಾಶಾಲೆಯಲ್ಲಿ ೧೫ಜನ ಆಡಳಿತಗಾರರು ಇರುತ್ತಿದ್ದರು.

೧. ಶಿಕ್ಷಣ ಸಚಿವರು

೨. ಜೆ.ಜೆ.ಸ್ಕೂಲ ಆಫ್ ಆರ್ಟ್‌ನ ೨ ಜನಸದಸ್ಯರು

೩. ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ಮುಂಬೈ

೪. ಚಿತ್ರಕಲಾ ಪರೀವಿಕ್ಷಕರು, ಮುಂಬೈ

೫. ಕಲಾ ಶಾಲೆ ನಿರ್ದೇಶಕರು

೬. ವಾಸ್ತು ಶಿಲ್ಪ ಪ್ರಾಧ್ಯಾಪಕರು

---

೧೬. ಎನ್.ಪಿ.ಬಸವರಾಜ್, ಎ ಸ್ಟಡಿ ಆಫ್ ಹಿಸ್ಟರಿ ಆಫ್ ಆರ್ಟ್ಸ್ ದ ಸ್ಕೂಲ್ ಆಫ್ ಆರ್ಟ್ಸ್ ಧಾರವಾಡ, ಪುಟ ೨೭/೨೮
೧೭. -ಅದೇ-ಪುಟ ೨೯/೩೦

ಈ ಎಲ್ಲ ಆಡಳಿತಗಾರರು ಕಲಾ ಶಿಕ್ಷಣದ ಸಲಹಾ ಮಂಡಳಿಯ ಸದಸ್ಯರಾಗಿರುತ್ತಿದ್ದರು. ಇದರೊಂದಿಗೆ ಆರು ಜನರು ಆಡಳಿತಕ್ಕೊಳಪಡದ ಪ್ರತಿನಿಧಿಗಳಾಗಿ ಕಲೆಯ, ಬೇರೆ ವಿಭಾಗಗಳನ್ನು ಪ್ರತಿನಿಧಿಸುತ್ತಿದ್ದರು. ಅವರಲ್ಲಿ ಮೂರು ಜನರು ನೇಮಕ ಮಾಡಲ್ಪಟ್ಟವರಾಗಿರುತ್ತಿದ್ದರು.

೧. ಒಬ್ಬರು ವಾಸ್ತು ಶಿಲ್ಪಿ
೨. ವರ್ಣ ಮತ್ತು ಶಿಲ್ಪಕಲೆಯಲ್ಲಿ ಪರಿಣಿತರಾಗಿರಬೇಕು
೩. ಒಬ್ಬರು ಕಲಾಶಿಕ್ಷಕರು, ಒಬ್ಬರು ವಾಣಿಜ್ಯ ಚಿತ್ರಕಲಾವಿದರು, ಒಬ್ಬರು ಕುಶಲಕಲಾ ಶಿಕ್ಷಕರು

ಈ ಮೇಲಿನ ಸದಸ್ಯರಲ್ಲಿ ಮೂರು ಜನರು ಸಮಾಜದ ವಿವಿಧ ಸ್ಥಾನಗಳಿಂದ ಬಂದವರಾಗಿರಬೇಕು. ಇವರಲ್ಲಿ ನೇಮಕಗೊಳ್ಳುವ ಸದಸ್ಯರು ಸರಕಾರಿ ನೌಕರರು ಅಥವಾ ಸರಕಾರಿಯೇತರರು ಅಥವಾ ಕಲಾವಿದರೂ ಆಗಿರಬೇಕು. ಈ ಕಲಾಶಾಲೆಯ ಆಡಳಿತವು ಸಲಹಾ ಮಂಡಳಿಯ ಆದೇಶ ಮತ್ತು ಶಿಕ್ಷಣ ಸಚಿವರ ಆದೇಶಗಳ ಅನ್ವಯ ಕಲಾಶಿಕ್ಷಣಕ್ಕೆ ಸಂಬಂಧಿಸಿದ್ದರಬೇಕು ಎಂಬ ನಿಯಮಗಳಿದ್ದವು. ಈ ಎಲ್ಲ ನಿಯಮಗಳನ್ನು ಅಚ್ಚುಕಟ್ಟಾಗಿ ಸ್ಕೂಲ್ ಆಫ್ ಆರ್ಟ್ ಸಂಸ್ಥೆಯ ಸಂಸ್ಥಾಪಕರು ಪ್ರಾಚಾರ್ಯರು ಆದ ಡಿ.ವಿ.ಹಾಲಭಾವಿಯವರು ತದೇಕ ಚಿತ್ತದಿಂದ ಪಾಲಿಸಿಕೊಂಡುಬಂದಿದ್ದಾರೆ.[೧೮]

**ಕಲಾ ಶಾಲೆ ಸಿಬ್ಬಂದಿ**

೧. ಯಾಂತ್ರಿಕ ಕಲಾವಿದರು ಮತ್ತು ನಕ್ಷಾಚಿತ್ರರಚನಾಕರರು
೨. ಶಿಲ್ಪಿ ಮತ್ತು ವಾಣಿಜ್ಯ ಕಲೆಯಲ್ಲಿ ಬಲ್ಲಿದವರಾಗಿರಬೇಕು
೩. ಅಥವಾ ಚಿತ್ರಕಲೆಯಲ್ಲಿ ತತ್ಸಮಾನ ಶಿಕ್ಷಣ ಪಡೆದಿರಬೇಕು

ಕಲಾ ಶಾಲೆಯಲ್ಲಿ ಸಿಬ್ಬಂದಿ ವರ್ಗವು ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾದಂತೆ ಹೆಚ್ಚುತ್ತಾ ಹೋಗಬೇಕು. ಪ್ರತಿ ೨೫ ವಿದ್ಯಾರ್ಥಿಗಳಿಗೆ ಒಬ್ಬರು ಶಿಕ್ಷಕರಂತೆ ನೇಮಕಾತಿಯನ್ನು ಮಾಡಲಾಗುತ್ತಿತ್ತು. ಮತ್ತು ಇದರೊಂದಿಗೊಂದು ಅತಿಥಿ ಉಪನ್ಯಾಸಕರ ನೆರವನ್ನು ಪಡೆಯುತ್ತಿದ್ದರು.

**ಹಾಲಭಾವಿಯವರಲ್ಲಿ ಕಲಾಭಿಮಾನ**

ಕಲಾ ಶಾಲೆಯ ಅಭಿವೃದ್ಧಿಯ ದೃಷ್ಟಿಯಿಂದ ಕಲಾಶಾಲೆಯ ಶಿಕ್ಷಕರ ಶೈಕ್ಷಣಿಕ ಅರ್ಹತೆ ಮುಖ್ಯವಾಗಿರುತ್ತದೆ. ಶಿಕ್ಷಕರ ಕಲಿಕಾ ಶಿಕ್ಷಣವು ಕನಿಷ್ಟವಾಗಿ ಕಲಾ ಡಿಪ್ಲೊಮಾದಲ್ಲಿ ಅಥವಾ ತಾಂತ್ರಿಕ ನಿಪುಣತೆಯಲ್ಲಿ ಒಂದು ವರ್ಷ ಅನುಭವವುಳ್ಳ ಶಿಕ್ಷಕರನ್ನಾದರೂ ಆಯ್ದುಕೊಳ್ಳುತ್ತಿದ್ದರು. ಹಾಲಭಾವಿಯವರು ಕಲಾ ಶಾಲೆ ಪ್ರಾರಂಭಿಸಿದಾಗ ಸಾಕಷ್ಟು ಸಮಸ್ಯೆಗಳನ್ನೂ ಎದುರಿಸಿದ್ದಾರೆ. ಅದರಲ್ಲಿ ಕಲಾಸಕ್ತ ವಿದ್ಯಾರ್ಥಿಗಳದ್ದು. ಈ ಮೊದಲೇ ಗಳಿಸಿದ್ದ ಕೆಲವೇ ಕೆಲವು ಶಿಷ್ಯರೊಂದಿಗೆ ಕ್ರಮೇಣ ವಿದ್ಯಾರ್ಥಿಗಳು ಕಲಾ ಶಾಲೆಯ ಮೆಟ್ಟಲು ಹತ್ತಲು ಪ್ರಾರಂಭಿಸಿದರೆ ಇನ್ನೊಂದೆಡೆ, ವಿದ್ಯಾರ್ಥಿಗಳ ಅವರ ಅಧ್ಯಯನ ಶುಲ್ಕವನ್ನು ಹಾಲಭಾವಿಯವರೆ ತುಂಬುತ್ತಿದ್ದರು. ಎಂದೂ ಕ್ಲಾಸಿನ ಫೀ ತುಂಬಲು ಹಾಲಭಾವಿಯವರು ಕಲಾ ಶಾಲೆಯ ವಿದ್ಯಾರ್ಥಿಗಳಿಗೆ ಒತ್ತಾಯ ಮಾಡುತ್ತಿರಲಿಲ್ಲ. ಕಲಾಸಕ್ತರು ಕಲಿತರೆ ಸಾಕು ಎಂಬ ಅಭಿಮಾನ ಅವರಲ್ಲಿತ್ತು. ವಿದ್ಯಾರ್ಥಿಗಳು ಪ್ರೀತಿಯಿಂದ ಕೊಟ್ಟಷ್ಟು ಫೀಯನ್ನು ತೆಗೆದುಕೊಳ್ಳುತ್ತಿದ್ದರು. ಕಲಾಪ್ರಸಾರವೇ ನನ್ನ ಜೀವನದ ಉಸಿರು ಎಂದು ಹೇಳುತ್ತಿದ್ದರು. ಉತ್ತಮ ಶಿಕ್ಷಣ ಕೊಡುವುದೇ ನನ್ನ ಗುರಿಯೆಂದಿದ್ದಾರೆ. ಶಾಲೆ ಬರೀ ವಿದ್ಯಾರ್ಥಿಗಳಿಗೆ ಪಾಠ ಪ್ರವಚನಕ್ಕೆ ಸೀಮಿತವಾಗಿರಬಾರದು. ಅದೊಂದು ಎಲ್ಲ ಲಲಿತಕಲೆಗಳ ಸಹೃದಯ ಸೇರುವಂಥ ಸಾಂಸ್ಕೃತಿಕ ಪರಿಸರವನ್ನು ಸೃಷ್ಟಿಸಬೇಕೆಂದು ಹೆಬ್ಬಯಕೆಯೂ ಇತ್ತು. ಅದಕ್ಕಾಗಿ ಎಲ್ಲ ಕ್ಷೇತ್ರದ ದಿಗ್ಗಜರ ಸ್ನೇಹವನ್ನು ಗಳಿಸಿಕೊಂಡು ಅವರನ್ನು ಕಲಾ ಶಾಲೆಗೆ ಆಹ್ವಾನಿಸುವುದು ಅವರ ಕ್ಷೇತ್ರದ ಕುರಿತು ಅವರಿಂದ ಉಪನ್ಯಾಸಗಳನ್ನು ವಿದ್ಯಾರ್ಥಿಗಳಿಗಾಗಿ ಏರ್ಪಡಿಸುವದು. ಜೊತೆಗೊಂದಿಷ್ಟು ಚರ್ಚೆ, ವಿಚಾರ, ವಿನಿಮಯ ಹೀಗೆ ಸಾಂಸ್ಕೃತಿಕ ವಿನಿಮಯ ಕಾರ್ಯಕ್ರಮವನ್ನು ಹಾಕಿಕೊಳ್ಳುತ್ತಿದ್ದರು.

೧೮. ಎನ್.ಪಿ.ಬಸವರಾಜ್, ಎ ಸ್ಟಡಿ ಆಫ್ ಹಿಸ್ಟರಿ ಆಫ್ ಆರ್ಟ್ ದ ಸ್ಕೂಲ್ ಆಫ್ ಆರ್ಟ್ ಧಾರವಾಡ, ಪುಟ ೨೯/೩೦

## ಹಾಲಭಾವಿಯವರ ಹೆಸರಾಂತ ವಿದ್ಯಾರ್ಥಿಗಳು

೧. **ಶ್ರೀ ಸೋಮಶೇಖರ ಸಾಲಿ** ಜಿ.ಡಿ. ಆರ್ಟ(ಪೇಂಟಿಂಗ್) ಬಾಗಲಕೋಟೆ, ಹೆಸರಾಂತ ಕಲಾವಿದರು, ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿಯ ಮಾಜಿ ಅಧ್ಯಕ್ಷರು ಸಧ್ಯ ನಮ್ಮ ಮಧ್ಯೆ ಜೀವಿಸುತ್ತಿದ್ದಾರೆ.

೨. **ಶ್ರೀ ಎಸ್.ಜಿ.ಚಿನ್ನಣ್ಣವರ** ಹುಕ್ಕೇರಿ, ಕಲಾವಿದ. ಮುಂಬಯಿಯಲ್ಲಿ ಕೆಲ ಕಾಲ ಯುರೋಪಿಯನ್ ಕಂಪನಿಯಲ್ಲಿ ಕೆಲಸ ಮಾಡಿದರು. ಕರ್ನಾಟಕದ ಮತ್ತು ಬೇರೆಡೆಯಲ್ಲಿಯ ದೊಡ್ಡ ಜನರ ಭಾವಚಿತ್ರಗಳನ್ನು ಮಾಡಿದ ಕೀರ್ತಿ.

೩. **ಶ್ರೀ ರವಿ ಪರಾಂಜಪೆ** ಬೆಳಗಾಂ, ಡಿ.ಟಿ.ಸಿ. ಜಿ.ಡಿ. ಆರ್ಟ್(ಪೇಂಟಿಂಗ್) ೧೯೫೨ ಈಗ ಮುಂಬಯಿಯಲ್ಲಿ ವಾಸ್ತು ಶಿಲ್ಪಗಳ ಮತ್ತು ಚಿತ್ರಕಲೆ ಜಗತ್ತಿನಾದ್ಯಂತ ಜಾಹಿರಾತುಗಳನ್ನು ಮಾಡಲಿಕ್ಕೆ ೩ ವರ್ಷ ಕಾಲ ಕೇನ್ಯಾದಲ್ಲಿ ನೇಮಕವಾದರು. ಸರ್.ಜೆ.ಜೆ.ಸ್ಕೂಲ ಆಫ್ ಅಪ್ಲಾಯಿಡ ಆರ್ಟ್‌ದಲ್ಲಿ ಅತಿಥಿ ಉಪನ್ಯಾಸಕರಾಗಿ ನೇಮಕಗೊಂಡಿದ್ದರು. ೧೯೫೭-೫೮ರಲ್ಲಿ ದಿಲ್ಲಿ ರಾಷ್ಟ್ರೀಯ ಕಲಾ ಅಕಾಡೆಮಿಗೆ ಇವರ ಎರಡು ಚಿತ್ರಗಳು ಸೇರ್ಪಡೆಗೊಂಡಿವೆ.

೪. **ಶ್ರೀ ಬಿ.ಕೆ. ಹುಬ್ಬಳ್ಳಿ** ಬೆಳಗಾಂ, ಖ್ಯಾತ ಕಲಾವಿದ, ಚಿಂತಾಮಣರಾವ ಪ್ರೌಢಶಾಲೆ, ಶಹಪೂರದಲ್ಲಿ ಕಲಾ ಶಿಕ್ಷಕರಾಗಿ ನಿವೃತ್ತಿ ಹೊಂದಿದ್ದಾರೆ.

೫. **ಶ್ರೀ ಎಮ್. ಜಿ. ವಾಚೇದಮಠ,** ಧಾರವಾಡದ ಆರ್.ಎಲ್.ಎಸ್. ಪ್ರೌಢಶಾಲೆಯಲ್ಲಿ ಶಿಕ್ಷಕ, ಶ್ರೀ ಸುರೇಶ ಕುಲಕರ್ಣಿಯವರು ಇವರ ಬಗ್ಗೆ ಜೀವನ ಚರಿತ್ರೆ ಬರೆದಿದ್ದಾರೆ.

೬. **ಶ್ರೀ ಎಚ್.ಜೆ.ಮುಲ್ಲಾ** ಡಿ.ಟಿ.ಸಿ., ಎ.ಎಮ್., ಬಿ.ಎಡ್., ಬಾಶೆಲ್ ಮಿಶನ್ ಹೆಣ್ಣುಮಕ್ಕಳ ಶಾಲೆಯಲ್ಲಿ ಶಿಕ್ಷಕರು ಸ್ಕೂಲ ಆಫ್ ಆರ್ಟ್, ಧಾರವಾಡದಲ್ಲಿ ಭೂಮಿತಿ ಮತ್ತು ಯಥಾದರ್ಶನ ವಿಷಯಗಳ ಗೌರವ ಶಿಕ್ಷಕರು ನಿವೃತ್ತಿ ಹೊಂದಿದ್ದಾರೆ.

೭. **ಶ್ರೀ ಎಸ್.ಬಿ.ಜರಳಿ** ಎ,ಎಮ್. ಜಿ.ಡಿ.ಆರ್ಟ್, ಕಲಾ ಶಿಕ್ಷಕ, ಸೇಂಟ ಜೋಸೆಫ್ಸ್ ಪ್ರೌಢಶಾಲೆ, ಧಾರವಾಡ

೮. **ಶ್ರೀ ಎಮ್.ಆರ್. ಬಾಳೀಕಾಯಿ** ಎ.ಎಮ್., ಜಿ.ಡಿ. ಆರ್ಟ್ ಧಾರವಾಡ ಸರಕಾರಿ ಚಿತ್ರಕಲಾ ಶಾಲೆಯ ಮುಖ್ಯೋಪಾಧ್ಯಾಯರಾಗಿ ನಿವೃತ್ತಿಯಾಗಿದ್ದಾರೆ. ಇವರಿಗೆ ರಾಜ್ಯ ಪ್ರಶಸ್ತಿ ಲಭಿಸಿದೆ. ಈಗಲೂ ಉತ್ಸುಕರಾಗಿ ಕೃತಿ ರಚನೆಯಲ್ಲಿ ತೊಡಗಿದ್ದಾರೆ.

೯. **ಶ್ರೀ ಆರ್.ಬಿ.ಗರಗ** ಎ.ಎಮ್.ಜಿ.ಡಿ., ಆರ್ಟ್ ಪೇಂಟಿಂಗ್, ಹುಬ್ಬಳ್ಳಿಯ ಲ್ಯಾಮಿಂಗಟನ್ ಹೆಣ್ಣಮಕ್ಕಳ ಪ್ರೌಢಶಾಲೆಯಲ್ಲಿ ಕಲಾಶಿಕ್ಷಕರಾಗಿ ನಿವೃತ್ತಿ ಹೊಂದಿ ಈಗಲೂ ಕಲಾಕೃತಿ ರಚಿಸುತ್ತಿದ್ದಾರೆ.

೧೦. **ಶ್ರೀ ಸುರೇಶ ಹಾಲಭಾವಿ** ಮಹಾರಾಷ್ಟ್ರ ಸರಕಾರದ ಡಿಪ್ಲೋಮಾ ಇನ್ ಕಮರ್ಸಿಯಲ್ ಆರ್ಟ್ ಪದವಿಧರರು. ಸ್ಕೂಲ ಆಫ್ ಆರ್ಟ್‌ನ ಪ್ರಾಚಾರ್ಯರರಾಗಿ ನಿವೃತ್ತಿ ಹೊಂದಿ ಈಗಲೂ ಕಲೆಯ ಬೆಳವಣಿಗೆಗೆ ಶ್ರಮಿಸುತ್ತಿದ್ದಾರೆ.

೧೧. **ಶ್ರೀ ಈಶ್ವರ ಮುರಗೋಡ** ಡಿಪ್ಲೋಮಾ ಪೇಂಟಿಂಗ್, ನವದೆಹಲಿಯ ಸರಕಾರಿ ಕಚೇರಿಯಲ್ಲಿ ಕಲಾವಿದ. ರಾಷ್ಟ್ರದ ಪ್ರಮುಖ ಕಲಾವಿದರಲ್ಲಿ ಒಬ್ಬರು. ಜಗತ್ತಿನಲ್ಲಿಯೇ ಹೆಸರಾಂತ ಕಲಾ ಶಾಲೆ ಫ್ರಾನ್ಸ ದೇಶದ ರಾಜಧಾನಿ ಪ್ಯಾರೀಸ್‌ನಲ್ಲಿ ೧೯೭೬ ಮತ್ತು ೧೯೮೧-೮೨ರಲ್ಲಿ ಕಲಾಧ್ಯಯನ ಪೂರೈಸಿ ಫ್ರಾನ್ಸ ಮತ್ತು ಇತರ ದೇಶಗಳಲ್ಲಿ ಏಕ ವ್ಯಕ್ತಿ ಕಲಾಪ್ರದರ್ಶನ ಮಾಡಿ ಖ್ಯಾತಿ ಪಡೆದಿದ್ದಾರೆ.

೧೨. **ಶ್ರೀ ಶಾಂತವೀರಪ್ಪ ಮುರಗೋಡ** ಇವರ ಅಣ್ಣಂದಿರು ಬೆಂಗಳೂರಿನಲ್ಲಿ ಸರಕಾರಿ ಕಲಾವಿದರಾಗಿ ಕೆಲಸಮಾಡುತ್ತಿದ್ದರು.

೧೩. **ಶ್ರೀ ಭೀಮರಾಯಪ್ಪ ಮುರಗೋಡ** ಕಲಾವಿದರು.

೧೨. **ಶ್ರೀ ಭರತಕುಮಾರ ಸುಣಗಾರ** ಎ.ಎಮ್.ಜೆ.ಡಿ. ಆರ್ಟ್ ಕೆ. ಈ ಬೋರ್ಡ್ ಪ್ರಾಥಮಿಕ ವರ್ಗಗಳಿಗೆ ಕಲಾ ಶಿಕ್ಷಕರಾಗಿ ಕೆಲಸಮಾಡಿದ್ದಾರೆ.

೧೩. **ಡಾ. ಎಸ್. ಸಿ. ಪಾಟೀಲ** ಹಾಲಭಾವಿ ಕಲಾಶಾಲೆಯಲ್ಲಿ ಓದಿದವರು. ಈಗ ರಾಜ್ಯದ ಪ್ರತಿಷ್ಠಿತ ಕನ್ನಡ ವಿ.ವಿ.ಯ ಶಿಲ್ಪ ಮತ್ತು ಚಿತ್ರಕಲಾವಿಭಾಗದ ಮುಖ್ಯಸ್ಥರು ಮತ್ತು ಪ್ರವಾಚಕರು.

೧೪. **ಶ್ರೀ ವಿ.ಬಿ.ಹಿರೇಗೌಡರ** ಹಿರಿಯ ಕಲಾವಿದರಾಗಿ ದಾವಣಗೆರೆ ಕುವೆಂಪು ವಿ.ವಿ.ಯ ಲಲಿತಕಲಾ ಮಹಾವಿದ್ಯಾಲಯದ ಪ್ರಾಚಾರ್ಯರಾಗಿ ನಿವೃತ್ತಿಹೊಂದಿದ್ದಾರೆ. ರಾಜ್ಯದಲ್ಲಿ ಕಲಾಶಿಕ್ಷಣ ಕ್ಷೇತ್ರದಲ್ಲಿ ಅಪಾರವಾಗಿ ಸೇವೆ ಸಲ್ಲಿಸಿ ಕಲಾಕೃತಿ ರಚಿಸಿದ್ದಾರೆ.

ಹಾಲಭಾವಿಯವರ ಕಲಾ ಶಾಲೆಯಲ್ಲಿ ಕಲಿತವರೆಲ್ಲರೂ ಕರ್ನಾಟಕದಲ್ಲಿ ಮತ್ತು ರಾಷ್ಟ್ರ ಅಂತರಾಷ್ಟ್ರೀಯ ಮಟ್ಟದಲ್ಲಿ ಹೆಸರು ಮಾಡಿ ಕಲಾ ಶಾಲೆಯ ಕೀರ್ತಿಯನ್ನು ಎತ್ತರಕ್ಕೆ ತಂದಿದ್ದಾರೆ. ಅವರಲ್ಲಿ ಬಿ. ಕೆ. ಹುಬ್ಳೀಕರ, ಆರ್. ಕೆ. ಬಾಪೂಜಿ, ನಾರಾಯಣ ಮಯ್ಯ ಜಿ. ವಿ. ನಾಗಮುಳೆ, ಶಂಕರ ವೇಣಿ ಬೆಳಗಾಂವಕರ, ಖರಡೆ, ವಿಭೂತಿ, ಬಿ.ಎಸ್. ಹೂಗಾರ, ಅಮರಗೋಳಮಠ. ಆರ್. ಬಿ. ಗರಗ, ಪಿ.ಎಸ್. ಹಿರೆಮಠ. ಎಸ್.ಕೆ. ಹೂಗಾರ. ಗಿರಿಯಪ್ಪವನರು. ರಾಯ್ಕರ, ಚಿನ್ನಣ್ಣವರ ಮುಂತಾದವರು ಹಾಲಭಾವಿಯವರ ಶಿಷ್ಯವರ್ಗದವರು. ಇನ್ನೂ ಅನೇಕ ಹೆಸರಾಂತರು ಹಾಲಭಾವಿಯವರ ಶಿಷ್ಯಂದಿರಾಗಿದ್ದು, ಕರ್ನಾಟಕದಲ್ಲಿ ಹಾಲಭಾವಿಯವರ ಕಲಾಶಾಲೆಯ ಹೆಸರನ್ನು ಅಜರಾಮರವಾಗಿಸಿದ್ದಾರೆ.

೧೯೭೭ರಲ್ಲಿ ಹಾಲಭಾವಿಯವರು ವೃತ್ತಿ ಜೀವನದಿಂದ ನಿವೃತ್ತರಾದರೇ ಹೊರತು, ಪ್ರವೃತ್ತಿಯಿಂದಲ್ಲ. ಧಾರವಾಡ ಕಲಾ ಮಂದಿರದ ಪ್ರಾಚಾರ್ಯ ಹುದ್ದೆಯಿಂದ ವೃತ್ತಿ ಜೀವನದಲ್ಲಿ ತಮ್ಮ ಅಮೂಲ್ಯ ಸಮಯವನ್ನು ಕಲಾ ಶಾಲೆಯ ಅಭಿವೃದ್ಧಿಗಾಗಿ, ವಿದ್ಯಾರ್ಥಿಗಳ ಬೆಳವಣಿಗೆಗಾಗಿ, ಕಲಾಕೃತಿ ರಚನೆಗಾಗಿ ಕಳೆದರು. ಕಲಾ ಶಾಲೆಯ ಮುಂದಿನ ಪ್ರಾಚಾಯರಾಗಿ ಶ್ರೀಮತಿ ತಾರಾ ಪವಾರ ಅವರು ನಿರ್ವಹಿಸಿದರು. ಮುಂದೆ ಇವರು ಸಹ ನಿವೃತ್ತಿ ಹೊಂದಿದ ಮೇಲೆ ಕಲಾ ಮಂದಿರದ ಪ್ರಾಚಾರ್ಯರ ಸ್ಥಾನವನ್ನು ಹಾಲಭಾವಿಯವರು ತಮ್ಮ ಪುತ್ರ ಸುರೇಶ ಹಾಲಭಾವಿಯವರಿಗೆ ವಹಿಸಿಕೊಟ್ಟರು. ಮುಂದೆ ಹಾಲಭಾವಿಯವರು ಕಲಾ ಶಾಲೆಯ ನಿರ್ದೇಶಕರಾಗಿ ಫೈನ್ ಆರ್ಟ ಸೊಸೈಟಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಾ, ಆಳವಾದ ಅನುಭವದಿಂದ ತರುಣ ಕಲಾವಿದರಿಗೆ ಮಾರ್ಗದರ್ಶನ ಮಾಡಿದರು. ಪ್ರಸ್ತುತ ಈ ಸಂದರ್ಭದಲ್ಲಿ ಡಿ.ವಿ.ಹಾಲಭಾವಿಯವರ ಪುತ್ರ ಸುರೇಶ ಹಾಲಭಾವಿಯವರು ಪ್ರಾಚಾರ್ಯ ಹುದ್ದೆಯಿಂದ ಡಿಸೆಂಬರ ೩೦ ೨೦೦೪ರಂದು ನಿವೃತ್ತರಾಗಿ ಪ್ರಾಚಾರ್ಯ ಹುದ್ದೆಯನ್ನು ಶ್ರೀಮತಿ ಗಾಯತ್ರಿ ದೇಸಾಯಿಯವರಿಗೆ ವಹಿಸಿದ್ದಾರೆ. ಕಲಾಶಾಲೆ ಮೂಲ ಸ್ಥಳದ ಸೆಲೆಯಿಂದ ಬೇರ್ಪಟ್ಟು ಈಗ ಮಾಳಮಡ್ಡಿಯ ಬಾಡಿಗೆ ಮನೆಯಲ್ಲಿ ಬೆಳೆಯುತ್ತಿದೆ.

**ಸೃಜನಶೀಲ ಕಲೆಗಾರ**

ಹಾಲಭಾವಿಯವರ ಚಿತ್ರರಚನೆ ಮತ್ತು ಚಿತ್ರಪ್ರದರ್ಶನಗಳು ೧೯೩೦ರಿಂದ ಒಂದು ವ್ಯವಸ್ಥಿತ ಕ್ರಮದಲ್ಲಿ ನಡೆದುಬಂದಿರುತ್ತವೆ. ಆಗಿನ ಇವರ ಚಿತ್ರಗಳು ಭಾರತೀಯ ಸಂಪ್ರದಾಯ ಶೈಲಿಯಲ್ಲಿ ನಿರೂಪಿತವಾದವು. ಇವು ನಿಸರ್ಗದ ದೃಶ್ಯಗಳು ದೇವಾಲಯಗಳು ಸಾಮಾನ್ಯ ಜನ ಜೀವನದ ದೃಶ್ಯಗಳಿಗೆ ಸಂಬಂಧಿಸಿದವುಗಳಾಗಿರುತ್ತವೆ. ೧೯೩೨ ರಲ್ಲಿ ಮುಂಬಯಿಯ ಆರ್ಟ್ ಸೊಸಾಯಿಟಿಯ ಕಲಾಪ್ರದರ್ಶನದಲ್ಲಿ "ಎ ರೋಡ್ ಟು ಹಳಿಯಾಳ" ಎಂಬ ನಿಸರ್ಗ ಕೃತಿಗೆ ಪ್ರಶಸ್ತಿ ಸಿಕ್ಕಿತು. ಇವರು ಅಧ್ಯಯನ ಕಾಲದಲ್ಲಿ ಜೆ.ಜೆ.ಸ್ಕೂಲಿನಲ್ಲಿ ಚಾರಕೋಲ್‌ನಲ್ಲಿ ಮಾಡಿದ ಕೃತಿಯೊಂದು ಪ್ರಶಸ್ತಿ ಗಳಿಸಿತು. ೧೯೩೪ರಲ್ಲಿ ವಿಜಾಪೂರದ "ಆಂಟಿ ಫ್ಯಾಮಿನ್ ಇನ್‌ಸ್ಟಿಟ್ಯೂಟಿ"ಗೆ ಕಳಿಸಿದ ಚಿತ್ರ, ಫ್ಹಿ.ಎಚ್. ನಾಯಕ್ ಕಲೆಕ್ಟರವರ ತೈಲಚಿತ್ರ, ಡೆಪ್ಯೂಟಿ ಚನ್ನಬಸಪ್ಪ, ಡಿ. ಸಿ. ಪಾವಟೆ, ರೊದ್ದ ಶ್ರೀನಿವಾಸರಾವ್ ಮತ್ತು ಟಿ.ಸಿ.ಎಮ್.ಧಾರವಾಡದ ಶತಮಾನೋತ್ಸವಕ್ಕೆ ಕಳುಹಿಸಿದ ಚಿತ್ರಗಳೆಲ್ಲ ೧೯೩೭ರಲ್ಲಿ

ರಚನೆಗೊಂಡಂತಹುಗಳಾಗಿವೆ. ೧೯೬೦ರಲ್ಲಿ ಬಿ.ಡಿ. ಜತ್ತಿಯವರ ತೈಲಚಿತ್ರ, ಲಮಾಣಿಸ್ತ್ರೀ, ಗೋಳಗುಮ್ಮಟದ ಚಿತ್ರವನ್ನು ಇಂಗ್ಲೆಂಡಿನ ಸ್ಲೇ ಎಂಬ ಕಲಾವಿದ ೧೯೬೦ ರಲ್ಲಿ ಖರೀದಿಸಿ ತನ್ನ ದೇಶಕ್ಕೆ ಒಯ್ದಿರುವನು. ಇಂಡಿಯನ್ ಇಂಕದ ೩೦ ಚಿತ್ರಗಳನ್ನು ಅಮೇರಿಕದ ಕಲಾಕಾರನೊಬ್ಬ ೧೯೬೧ರಲ್ಲಿ ಖರೀದಿಸಿ ಒಯ್ದಿರುವನು. ೧೯೬೪ರಲ್ಲಿ ಛತ್ರಪತಿ ಶಿವಾಜಿಯ ತೈಲಚಿತ್ರವನ್ನು ಧಾರವಾಡದ ಮರಾಠಾ ಮಂಡಳಕ್ಕೆ ಮಾಡಿಕೊಟ್ಟಿದ್ದಾರೆ. ೧೯೬೬ರಲ್ಲಿ ಧಾರವಾಡದ ಉಳವಿ ಚನ್ನಬಸವೇಶ್ವರ ಗುಡಿಯಲ್ಲಿ ಐದು ಪೇಂಟಿಂಗ್ಸಗಳನ್ನು ಮಾಡಿದ್ದಾರೆ. ಮೂರು ತೈಲಚಿತ್ರಗಳನ್ನು ಅಮೇರಿಕೆಯ ಕೆನಡಾದಲ್ಲಿ ವಾಸಿಸಿರುವ ಧಾರವಾಡದ ಡಾ. ಶ್ರೀಮತಿ ವಿಜಯಾ ಮತ್ತು ಅವಳ ಪತಿ ಡಾ. ಬೆಳಗಾಂವಕರ ದಂಪತಿಗಳು ಕೆನಡಾಕ್ಕೆ ಒಯ್ದಿದ್ದಾರೆ. ಇವರ ಶಾಲೆಯಿಂದ ಧಾರವಾಡದ ಕಲೆಕ್ಟರರು ೧೯೬೭ರಲ್ಲಿ ದಸರಾ  ಉತ್ಸವಕ್ಕೆ ಅಶ್ವಾರೂಢ ಕಿತ್ತೂರ ಚೆನ್ನಮ್ಮನ ರೂಪಕವೊಂದನ್ನು ಮಾಡಿಸಿ ಮೈಸೂರಿಗೆ ಕಳಿಸಿದ್ದರು. ೧೯೬೫ರಲ್ಲಿ ರಚಿಸಿದ ಅಜಂತಾ ಎಲ್ಲೋರದ ಪ್ರತಿ ಚಿತ್ರಗಳು, ೧೯೬೮ರಲ್ಲಿಯ ಉಣಕಲ್ಲಿನ ಚಂದ್ರಮೌಳೇಶ್ವರರ ಚಿತ್ರ, ೧೯೮೪ರಲ್ಲಿ ಹಂಪೆಯಲ್ಲಿ ರಚಿಸಿದ ಕಲಾಕೃತಿಗಳು ಹೀಗೆ ಅವರ ಚಿತ್ರಗಳ ಪಟ್ಟಿ ಏರುತ್ತಲೆ ಹೋಗುತ್ತದೆ.

ಗಮನಾರ್ಹ ಚಿತ್ರಗಳಲ್ಲಿ ಒಂದಾದ ಒಂಟಮುರಿರಾಜರ ಚಿತ್ರ ಆರು ಅಡಿ ಎತ್ತರದ್ದು, ಈಗ ಬೆಳಗಾಂವಿಯ ಕಾನೂನು ಮಹಾವಿದ್ಯಾಲಯದಲ್ಲಿದೆ. ಮಹಾತ್ಮಾ ಗಾಂಧಿ, ತಾಯಿ ಮಗು, ಮುದುಕಿಯರ, ಯೌವನಸ್ತರ, ಬಾಲ್ಯದ ಹೀಗೆ ಜೀವನದ ಎಲ್ಲ ಹಂತದ ವ್ಯಕ್ತಿಗಳ ಚಿತ್ರಣಗೈದಿದ್ದಾರೆ. ಬದುಕಿನ ಅನೇಕ ಸನ್ನಿವೇಶಗಳು ಇವರ ಚಿತ್ರಗಳಲ್ಲಿ ಮೂಡಿಬಂದಿರುತ್ತವೆ.



ಹಾಲಭಾವಿ ದಾನಪ್ಪನವರ ಚಿತ್ರಗಳು ತೈಲವರ್ಣ, ಜಲವರ್ಣ ಅಲ್ಲದೆ ಪೆನ್ಸಿಲ್‌ನ ರೇಖಾಚಿತ್ರಗಳು, ಚಾರಕೋಲ್‌ನಿಂದ ಮಾಡಿದ ಕಪ್ಪು ಬಿಳುಪು ಚಿತ್ರಗಳು, ಹೀಗೆ ವಿವಿಧ ಮಾಧ್ಯಮಗಳಲ್ಲಿ ಚಿತ್ರಗಳು ಆಕಾರ ಪಡೆದಿವೆ. ಈ ಕಲಾಕೃತಿಗಳಲ್ಲಿ ಭಾವನೆಗಳ ಸಂಯಮವನ್ನು ತಮ್ಮ ರೇಖೆಗಳ ಬಲೆಯಲ್ಲಿ ಬಂಧಿಸಿ ಬಣ್ಣದ ಚಿತ್ತಾರ ಮಾಡಿದ್ದಾರೆ. ದಾನಪ್ಪನವರು ವಸ್ತ ನಿಷ್ಠ ಚಿತ್ರಣವೇ ಇವರ ಕಲಾಕೃತಿಗಳ ಯಶಸ್ಸಿನ ಗುಟ್ಟು, ರಮ್ಯತೆಯಲ್ಲಿಯೂ ನಿಗೂಢತೆಯನ್ನು ಮೈಗೂಡಿಸಿಕೊಂಡು ಪ್ರಕೃತಿಯ ಒಳಹೊರಗನ್ನು ಅರಿಯುವ ಕುತೂಹಲ ಪ್ರಿಯ ಕಲಾವಿದ ಹಾಲಭಾವಿ ಇವರಿಗೆ ವ್ಯಕ್ತಿ ಚಿತ್ರಗಳನ್ನು ತಗೆಯುವದೆಂದರೆ ತುಂಬ ಆಸಕ್ತಿ. ಇವರ ದ್ವಿತೀಯ ಪ್ರಾಶಸ್ತ್ಯ ನಿಸರ್ಗದ ರಮಣೀಯ ದೃಶ್ಯಗಳನ್ನು ಕುಂಚದಲ್ಲಿ ಸೆರೆಹಿಡಿಯುವುದು.[೧೯]



### ಹಾಲಭಾವಿಯವರ ಕಲಾಕೃತಿ ರಚನೆ

ಡಾ. ಪಾಟೀಲ ಪುಟ್ಟಪ್ಪನವರು ಹಾಲಭಾವಿಯವರನ್ನು ಕುರಿತು ಹೀಗೆ– ಕಲಿಕೆಯು ಜೀವನ ವೃಕ್ಷವೆಂದು ವಿಲಿಯಂ ಬ್ಲೇಕ್ ಹೇಳುತ್ತನೆ. ಒಂದು ಸಂಗ್ರಹ ವೃಕ್ಷಕದಲ್ಲಿ ತುಂಬಿದ ಬದುಕಿನ ರೂಪರೇಷೆಗಳೆಲ್ಲವೂ ಇವೆ. ನೀವು ಸೌಷ್ಠವ ಬಣ್ಣ ಎಲ್ಲವನ್ನು ಹೊಂದಿ ಅದು ಜೀವ ಚೈತನ್ಯ ಪಡೆದು ಕಂಗೊಳಿಸುತ್ತದೆ. ಹಾಲಭಾವಿಯವರು ಪ್ರಕೃತಿಯ ಶಿಶು. ಅವರಿಗೆ ಬಣ್ಣಗಳೆಂದರೆ ಬಹು ಪ್ರೀತಿ. ನಿಸರ್ಗವನ್ನು ವೀಕ್ಷಿಸಿ ಅವರು ತಮ್ಮ ಮನಸ್ಸು ತುಂಬಿಕೊಂಡಿದ್ದಾರೆ. ನಿಸರ್ಗದ ರಸ ಸ್ವಾದನೆಯಿಂದ ತಮ್ಮ ಚಿತ್ರಗಳಿಗೆ ಬೇಕಾದ ವರ್ಣ ವೈಖರಿಯನ್ನು ಪಡೆದುಕೊಂಡಿದ್ದಾರೆ.[೨೦]

ಕವಿ ಹಾಗೂ ಕಲಾವಿದ ರವೀಂದ್ರನಾಥ ಠಾಗೋರರಿಗೆ ಪ್ರಸನ್ನತೆಯನ್ನು ತಂದುಕೊಟ್ಟ ಕಾರವಾರದ ವನಶ್ರೀ ಸಮುದ್ರ, ಸೂರ್ಯಸ್ತಗಳು ಹಾಲಭಾವಿಯವರಿಗೆ ಕುಂಚಕ್ಕೆ ರಸದೋಕಳಿಯನ್ನು ತಂದುಕೊಟ್ಟಿವೆ. ಧಾರವಾಡದ  ಪ್ರಕೃತಿ ಮೋಡಿಯಿಂದಲೂ ಅವರು ಹೆಚ್ಚು ಪ್ರಭಾವಿತರಾಗಿದ್ದಾರೆ. ಅವರು ಜನರನ್ನು ಬಹು ಆಸಕ್ತಿಯ ವಸ್ತುಗಳೆಂಬಂತೆ ಅಭ್ಯಸಿಸಿ ಅವರ ಬಾಹ್ಯ ರೇಖೆ, ಬಣ್ಣ, ಭಾವನೆಗಳನ್ನೆಲ್ಲ ತಮ್ಮ ಮನಸ್ಸಿನ ಭಿತ್ತಿಯ ಮೇಲೆ ಮೂಡಿಸಿಕೊಳ್ಳುತ್ತಿದ್ದರು ಎಂದು ಪಾಟೀಲ ಪುಟ್ಟಪ್ಪನವರು ಹೇಳಿದ್ದಾರೆ.[೨೧]

---

೧೯. ಡಾ.ಎಸ್.ಸಿ.ಪಾಟೀಲ, ಸುವರ್ಣ ಮಹೋತ್ಸವ ಸಂಚಿಕೆ, ಪುಟ ೫/೬
೨೦. ಡಾ. ಎಸ್.ಸಿ.ಪಾಟೀಲ(ಸಂ), ಚಿತ್ರಾಕ್ಷಿ, ಪುಟ ೩
೨೧. ಎಸ್.ಕೆ.ಹೂಗಾರ, ಡಿ.ವಿ.ಹಾಲಭಾವಿ, ಪುಟ ೧೬

**ದೇಶ ವಿದೇಶಗಳಲ್ಲಿ ಸಂಗ್ರಹವಿರುವ ಕಲಾಕೃತಿಗಳು**

ಹಾಲಭಾವಿಯವರು ಸುಮಾರು ೫೦೦ ಚಿತ್ರಗಳನ್ನು ತೈಲಮಾಧ್ಯಮದಲ್ಲಿ ೪೦೦ ಚಿತ್ರಗಳನ್ನು ಜಲವರ್ಣಗಳಲ್ಲಿ ಹಾಗೂ ಬಹಳಷ್ಟು ಕಲಾಕೃತಿಗಳನ್ನು ಪೆನ್ಸಿಲ್, ಪೆಸ್ಟಲ್, ಚಾರಕೋಲ್, ಮಾಧ್ಯಮದಲ್ಲಿ ರಚಿಸಿದ್ದಾರೆ. ಅವರು ತಮ್ಮ ಅನೇಕ ಕಲಾಕೃತಿಗಳನ್ನು ವಿದೇಶಕ್ಕೆ ಕಳಿಸಿದ್ದಾರೆ. ಅವುಗಳಲ್ಲಿ ಕೆಲವು ಮಾತ್ರ ಇಲ್ಲಿ ಹೆಸರಿಸಲಾಗಿದೆ.

೧) ಯಾದಗಿರಿ (ಕಿಲ್ಲೆ) ನಿಸರ್ಗಚಿತ್ರ — ಯು.ಎಸ್.ಎ.
೨) ವಿಜಾಪೂರದ (ಗೋಳಗುಮ್ಮಟ) ನಿಸರ್ಗಚಿತ್ರ — ಇಂಗ್ಲೆಂಡ್
೩) ಹಂಪಿಯ (ಕಲ್ಲಿನ ರಥ) ವರ್ಣಚಿತ್ರ — ಸ್ವೀಡನ್
೪) ಮೂರು (ಶಿರಭಾ) ವರ್ಣಚಿತ್ರ — ಚಂದಾ ಹಾಸ್ಪಿಟಲ್, ಅಮೇರಿಕಾ
೫) ಮೀನುಗಾರರ ಜೀವನ ತೈಲವರ್ಣಚಿತ್ರ — ಫ್ರಾನ್ಸ
೬) ಹಂಪಿಯ ಕಯಲಮಹಲ ನಿಸರ್ಗಚಿತ್ರಣ — ಜಪಾನ್
೭) ಭಾರತೀಯ ರೈತನ ಜೀವನ ಕುರಿತು ೩೦ ರೇಖಾ ಚಿತ್ರಗಳನ್ನು ಅಮೇರಿಕೆಗೆ ಕಳಿಸಿಕೊಟ್ಟಿದ್ದಾರೆ. ಈಗಲೂ ಇವರ ಈ ಎಲ್ಲ ಕಲಾಕೃತಿಗಳು ಅಮೇರಿಕೆಯ ವಸ್ತು ಸಂಗ್ರಹಾಲಯದಲ್ಲಿ ನೋಡಲು ಸಿಗುತ್ತವೆ.[೨೨]

**ಕರ್ನಾಟಕದಲ್ಲಿ ಇರುವ ಕಲಾಕೃತಿಗಳು**

ಇವರು ಹಲವಾರು ಚಿತ್ರಗಳನ್ನು ವ್ಯಕ್ತಿಗತವಾಗಿ, ಗ್ರಂಥಗಳಿಗಾಗಿ, ಸಾಮಾಜಿಕ, ಮಠ, ಮಂದಿರ, ಮಸೀದಿ ಮುಂತಾದ ದೇವಮಂದಿರಗಳಿಗಾಗಿ ವಾಣಿಜ್ಯ ವೃತ್ತಿಗಳಿಗಾಗಿ, ಐತಿಹಾಸಿಕ, ಧಾರ್ಮಿಕ ಕಾರ್ಯಗಳಿಗಾಗಿ, ಜಾನಪದ ವಿಷಯಗಳಿಗಾಗಿ ಚಿತ್ರಿಸಿಕೊಟ್ಟಿದ್ದಾರೆ. ಇವರು ಚಿತ್ರಿಸಿದ ಕಲಾಕೃತಿಗಳು ಸುಮಾರು ೬ ಸಾವಿರದಷ್ಟು ಎಂದು ಅಂದಾಜಿಸಲಾಗಿದೆ. ಅವುಗಳಲ್ಲಿ ಕೆಲವು ಕೃತಿ ಸಂಗ್ರಹವನ್ನು ಇಲ್ಲಿ ಹೆಸರಿಸಲಾಗಿದೆ. ಬೆಳಗಾಂ, ಚಿಕ್ಕೋಡಿ, ನಿಪ್ಪಾಣಿ, ಧಾರವಾಡ, ದಾವಣಗೆರೆ, ಬೆಂಗಳೂರ, ಕಾರವಾರ, ಗೋಕಾಕ, ಹಾವೇರಿ, ಹೊನ್ನಾವರ ಮತ್ತಿತರ ಸ್ಥಳಗಳಲ್ಲಿ ಸಂಗ್ರಹಗೊಂಡಿವೆ.

ಪ್ರಭುಲಿಂಗ ಲೀಲೆ, ಶಂಕರದಾಸಿಮಯ್ಯ, ಗೋರಕನಾಥ, ಬಸವೇಶ್ವರರು, ವಾಕ್‌ಯುದ್ಧ, ಭಕ್ತರು, ಶರಣ ಸಿದ್ಧರು, ದೇವತೆಗಳು, ಶಿವಪಾರ್ವತಿಯರು, ರಾಜಾ ಲಖಮನಗೌಡರು, ಮಹಾತ್ಮಾಗಾಂಧಿಜೀ, ಉಪರಾಷ್ಟ್ರಪತಿ ಬಿ.ಡಿ.ಜತ್ತಿ, ಡೆಪ್ಯೂಟಿ ಚೆನ್ನಬಸಪ್ಪ, ಶ್ರೀನಿವಾಸ ರೊದ್ದ, ಧಾರವಾಡದ ಉಪಕುಲಪತಿ ಹಾಗೂ ಪಂಜಾಬ್ ಗವರ್ನರ್ ಡಾ. ಡಿ.ಸಿ. ಪಾವಟೆ, ಸಿಲೋನ ನಿಸರ್ಗ ಚಿತ್ರಗಳು, ಧಾರವಾಡದ ನಿಸರ್ಗ ಚಿತ್ರಗಳು, ಹೊನ್ನಾವರ ನಿಸರ್ಗಚಿತ್ರಗಳು, ಹೊರನಾಡು ನಿಸರ್ಗಚಿತ್ರಗಳು, ಜಮ್ಮು ಕಾಶ್ಮಿರದ ರಮಣೀಯ ದೃಶ್ಯಗಳು, ಬಸವರಾಜ ರಾಜಗುರು, ಡಾ.ಭೀಮಸೇನ ಜೋಶಿ, ಡಾ.ಗಂಗೂಬಾಯಿ ಹಾನಗಲ್, ಹೀಗೆ ಅನೇಕ ಮಹಾನ ವ್ಯಕ್ತಿಗಳ ಭಾವಚಿತ್ರಗಳು, ಹಾಗೂ ಧಾರ್ಮಿಕ ಸನ್ನಿವೇಶಗಳ ಚಿತ್ರಗಳನ್ನು ರಚಿಸಿದ್ದಾರೆ.[೨೩]

**ಹೆಸರು ಮಾಡಿದ ಕೃತಿಗಳು**

ವ್ಯಕ್ತಿ ಚಿತ್ರಣ ಮಾಡುವಲ್ಲಿ ಪ್ರತಿಯೊಂದು ಸ್ವಂತಿಕೆ ಸೆಳಕು ತೋರಿಸದೇ ಬಿಟ್ಟವರಲ್ಲ. ಹಾಲಭಾವಿಯವರು ಜೀವಂತ ಮಾದರಿಗಳನ್ನು ಎದುರಿಗೆ ಇರಿಸಿಕೊಂಡೇ ವ್ಯಕ್ತಿ ಚಿತ್ರಣ ಕಲಾಕೃತಿಗಳಿಗೆ ಜೀವತುಂಬಿದ್ದಾರೆ. ಇವರ ಭಾವ ಚಿತ್ರ, ಪೂರ್ಣ ಭಾವ ಚಿತ್ರಗಳ ಮುಂತಾದ ಕಲಾಕೃತಿಗಳಲ್ಲಿ ಭಾವನೆಗಳ ಸಂಯಮವನ್ನು ತಮ್ಮ ರೇಖೆಗಳ ಬಲೆಯಲ್ಲಿ ಬಂಧಿಸಿ ಬಣ್ಣದ ಬಿರುಸನ್ನು ಮೂಡಿಸಿದ್ದಾರೆ. ಯಥಾವತ್ತಾದ ವಸ್ತು ನಿಷ್ಠ ಚಿತ್ರಣವೇ ಇವರ ಕಲಾಕೃತಿಗಳ ಯಶಸ್ಸಿನ ಗುಟ್ಟು.

---
೨೨. ಎಸ್.ಕೆ.ಹೂಗಾರ, ಡಿ.ವಿ.ಹಾಲಭಾವಿ, ಪುಟ ೧೪
೨೩. ಅದೇ–ಪುಟ ೧೩/೧೪

೧) ಬೆಳಗಾವಿ ಕಾನೂನು ಮಹಾವಿದ್ಯಾಲಯದಲ್ಲಿರುವ ಒಂಟಮುರಿ ರಾಜರ ಆರಡಿಯ ಚಿತ್ರ
೨) ಮಹಾತ್ಮಾ ಗಾಂಧಿಜೀ – ವರ್ಣಚಿತ್ರ
೩) ಡಿ.ಸಿ. ಪಾವಟೆ – ವರ್ಣಚಿತ್ರ
೪) ಬಿ.ಡಿ. ಜತ್ತಿರಯವರ – ವರ್ಣ ಚಿತ್ರ
೫) ಚನ್ನಬಸವ ಪುರಾಣ – ವರ್ಣಚಿತ್ರ
೬) ಹಂಪೆಯ ಕಮಲ್ ಮಹಲ್ – ವರ್ಣಚಿತ್ರ
೭) ಗಿರಿಜಾ ಕಲ್ಯಾಣ – ವರ್ಣಚಿತ್ರ
೮) ಪ್ರಭುಲಿಂಗ ಲೀಲೆ – ವರ್ಣಚಿತ್ರ
೯) ರೇಖಾಚಿತ್ರಗಳು
೧೦) ಶಿರಭಾವ ಚಿತ್ರಗಳು

ಇನ್ನೂ ಅನೇಕ ಕಲಾಕೃತಿಗಳು ಇವರ ಕೀರ್ತಿಯನ್ನು ಉನ್ನತ ಮಟ್ಟಕ್ಕೆ ಕರೆದೊಯುವಲ್ಲಿ ಯಶಸ್ವಿಯಾಗಿದೆ.

**ಕಲಾ ಸಾಹಿತ್ಯ**

ಹಾಲಭಾವಿಯವರಿಗೆ ಕರ್ನಾಟಕ ಕಲಾ ಭಂಡಾರವನ್ನು ಬೆಳಕಿಗೆ ತರಬೇಕೆನ್ನುವ ಹಂಬಲವಿತ್ತು. ಅವರ ತಂದೆಗೆ ಇತಿಹಾಸದ ಬಗೆಗೆ ಆಸಕ್ತಿ ಇದ್ದರೆ, ಇವರಿಗೆ ಕಲೆಯ ಇತಿಹಾಸದ ಕಲೆ ಬಗ್ಗೆ ತುಂಬಾ ಆಸಕ್ತಿ. ಡಿ. ವಿ. ಹಾಲಭಾವಿಯವರು ತಮ್ಮ ಕಲಾ ಶಾಲೆಯ ಜತೆಗೆ ಧಾರವಾಡದಲ್ಲಿ ಕರ್ನಾಟಕ ಆರ್ಟ ಸೊಸೈಟಿಯನ್ನು ಸ್ಥಾಪನೆ ಮಾಡಿ ಸಾರ್ವಜನಿಕ ಕಲಾಭಿಜ್ಞತೆ ಬೆಳೆಸುವಲ್ಲಿ ಹಾಲಭಾವಿಯವರು ಬಹುಮಹತ್ವದ ಪಾಲು ವಹಿಸಿದ್ದಾರೆ.

ಕಲೆಯ ಬೆಳವಣಿಗೆ ಹಾಗೂ ಪುರೋಭಿವೃದ್ಧಿಗೋಸ್ಕರ ಅವರು 'ಆರ್ಟಗಿಲ್ಡ್' ಎಂಬ ಮಾಸ ಪತ್ರಿಕೆಯನ್ನು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ಪ್ರಕಟಿಸಿದ್ದರು. ಮತ್ತು "ಮೈ ಕಂಟೆಪರರಿ ಆರ್ಟಿಸ್ಟ" ಗ್ರಂಥವನ್ನು ೧೯೬೮ ರಲ್ಲಿ ಆಂಗ್ಲಭಾಷೆಯಲ್ಲಿ ಪ್ರಕಟಿಸಿದ್ದಾರೆ. ನನ್ನ "ಸಿಲೋನ ಪ್ರವಾಸ" ಎಂಬ ಪ್ರವಾಸ ಕಥನವನ್ನು ೧೯೬೮ರಲ್ಲಿ, ಜಮ್ಮು ಕಾಶ್ಮೀರದ ಕಿರು ಲೇಖನವನ್ನು ಪ್ರಕಟಿಸಿದ್ದಾರೆ. ಈ ಎಲ್ಲ ಮಾಹಿತಿಯನ್ನು ಅಧ್ಯಾಯ ಆರರಲ್ಲಿ ವಿವರಿಸಲಾಗಿದೆ.

**ಕಲಾಪ್ರದರ್ಶನಗಳು**

೧೯೮೩ ಹೊನ್ನಾವರ, ೧೯೮೫ ದಾಂಡೇಲಿ, ೧೯೮೫ ಕಾರವಾರ, ೧೯೮೫ ಇಳಕಲ್ ಹಾಗೂ ಭಾರತದ ಅನೇಕ ನಗರಗಳಲ್ಲಿ ಲಖನೌ, ಔರಂಗಾಬಾದ್, ಬೆಳಗಾಂ, ಮುಂಬೈ ಹೀಗೆ ಅನೇಕ ನಗರಗಳಲ್ಲಿ ತಮ್ಮ ಕಲಾಪ್ರದರ್ಶನಗಳನ್ನು ಮಾಡಿದ್ದಾರೆ.

**ಹಾಲಭಾವಿಯವರ ಗ್ರಂಥಾಲಯ ಸಂಗ್ರಹ**

ಹಾಲಭಾವಿಯವರಲ್ಲಿ ಚಿಕ್ಕ ವಯಸ್ಸಿನಲ್ಲಿಯೇ ಕಲಾ ಸಾಹಿತ್ಯಾಭ್ಯಾಸವೂ ಬಲು ಎತ್ತರವಾಗಿ ಬೆಳೆದಿತ್ತು, ಕಲಾಪುಸ್ತಕ, ಸಾಹಿತ್ಯ, ಕಲಾ ಪತ್ರಿಕೆಗಳನ್ನು ಕೊಳ್ಳುವ ಹಾಗೂ ದೇಶ ವಿದೇಶಗಳ ಕಲಾವಿದರ ಕುರಿತು ಪತ್ರಿಕೆಯಲ್ಲಿ ಬಂದ ಕಲಾವಿಮರ್ಶೆ ಕೃತಿಗಳ ಸಂಗ್ರಹ, ಮಾಡಿ ಲೇಖನಗಳನ್ನೆಲ್ಲಾ ಕತ್ತರಿಸಿ, ಅಲ್ಬಮ್‌ಗೆ ಅಂಟಿಸಿ ಇಡುತ್ತಿದ್ದರು, ಅನೇಕ ಕಲಾಪುಸ್ತಕಗಳ ಸಂಗ್ರಹಣೆ ಮಾಡುತ್ತಿದ್ದರು. ಇಂತಹ ಖಾಸಗಿ ಕಲಾ ಸಾಹಿತ್ಯ ಗ್ರಂಥ ಭಂಡಾರದಷ್ಟು ದೊಡ್ಡ ಸಂಗ್ರಹವನ್ನು ಮಾಡುವಲ್ಲಿ ಹಾಲಭಾವಿಯವರೊಬ್ಬರೆ ಎಂದರೆ ತಪ್ಪಾಗಲಿಕ್ಕಿಲ್ಲ. ಈ ಕಲಾ ಸಾಹಿತ್ಯ ಜ್ಞಾನದಾಹ ರಕ್ತದಲ್ಲಿತ್ತು. ಕಲಾ ಪೋಷಣೆಗೆ ಅಗತ್ಯವಿದ್ದ ಜ್ಞಾನ, ಬುದ್ಧಿಮತ್ತೆ ಅವರ ಜೀವನದ ಕಲೋಪಾಸನೆಯಲ್ಲಿ ಸಮೃದ್ಧವಾಗಿ ಬೆಳೆಯಿಸಿದ್ದು ಈ ಪುಸ್ತಕ ಸಂಗ್ರಹಾಲಯದಿಂದಲೇ.

## ಹಾಲಭಾವಿಯವರು ಕಲಾಕ್ಷೇತ್ರಕ್ಕೆ ನೀಡಿದ ಅನುಪಮವಾದ ಸೇವೆ

ಧಾರವಾಡ ಉತ್ತರ ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ ಎಂದು ಹೇಳುವ ಒಂದು ಮಾತು ಪ್ರಚಲಿತವಾಗಿದೆ. 'ಸಂಸ್ಕೃತಿ' ಎನ್ನುವದು ಅನೇಕ ಗುಣ ವಿಶೇಷಗಳ ಸುಂದರ ಸಮುಚ್ಚಯ ಕಲೆಯನ್ನು ಮೆಚ್ಚಿಕೊಳ್ಳುವ ದೃಷ್ಟಿಯನ್ನು ಪಡೆಯುವನೆನ್ನುವ ಕಾರಣದಿಂದ ಮನುಷ್ಯನು ಸುಸಂಸ್ಕೃತ ಅಭಿರುಚಿ ಉಳ್ಳವನೆನಿಸುತ್ತಾನೆ. ಧಾರವಾಡದ ಪರಿಸರಕ್ಕೆ ಹಾಲಭಾವಿಯವರು, ತಮ್ಮ ಅನುಪಮ ಕಾಣಿಕೆಯನ್ನು ಸಲ್ಲಿಸಿದ್ದಾರೆ. ಐವತ್ತು ವರ್ಷಗಳಿಂದಲೂ ಧಾರವಾಡದಲ್ಲಿ ತಮ್ಮ ಕಲಾ ಶಾಲೆ ನಡೆಸಿಕೊಂಡು ಬಂದಿರುವ ಅವರನ್ನು 'ಕಲಾಭಾವಿ'ಯವರೆಂದು ಕರೆದರೆ ಹೆಚ್ಚು ಸಮಂಜಸ.

ಧಾರವಾಡದಲ್ಲಿ ಕಲೆಯನ್ನು ನೆಲೆಯಾಗಿ ನಿಲ್ಲಿಸುವ ಆ ಕಾಲದಲ್ಲಿ 'ಯಾಕಲೆ' ಎನ್ನುವ ಜನರ ಮಧ್ಯದಲ್ಲಿ ನಿಂತುಕೊಂಡು 'ಕಲೆ' ಎಂದು ಹೇಳುವ ಕೆಲಸಕ್ಕೆ ನಿಂತರೆನ್ನುವುದೊಂದು ಚಮತ್ಕಾರಿಕ ಘಟನೆ. ಅವರು ಚಿತ್ರಗಳನ್ನು ಬರೆಯುತ್ತ ತಮ್ಮ ಚಿತ್ರಗಳನ್ನು ಸಂವರ್ಧಿಸಿಕೊಂಡು ತರುಣ ಕಲಾವಿದರಿಗೆ ಮಾರ್ಗದರ್ಶನ ಒದಗಿಸಿಕೊಟ್ಟಿದ್ದರು.

ಸತ್ಯ-ಶುದ್ಧ ನಡೆ-ನುಡಿ ಸಚ್ಚಾರಿತ್ರ್ಯ ನ್ಯಾಯ-ನಿಷ್ಠರತೆಗಳಿಂದ ಜನಮನವನ್ನು ಗೆದ್ದ, ಕನ್ನಡ ಸಾಹಿತ್ಯ, ಕಲೆ ಸಂಸ್ಕೃತಿಗಳ ಬೆಳವಣಿಗೆಗಾಗಿ ಕಾರ್ಯಗೈದು ಕಾವ್ಯಾಧ್ಯಯನ, ಕಾವ್ಯ ಪ್ರಕಟಣೆ, ಹಸ್ತಪ್ರತಿ ಪರಿಕ್ಷರಣೆ ಸಜ್ಜನರ ಅನುಭವ ಗೋಷ್ಠಿಯಲ್ಲಿ ನಿತ್ಯ ಶಿವಾನಂದವನ್ನು ಕಂಡು, ಸತ್ಯ, ಧರ್ಮದತ್ತ ಜನಮನವನ್ನು ಸೆಳೆದು, ಶಿವಾಧೀನರಾದ ತಂದೆಯ ಸ್ವಭಾವವನ್ನು ಅನುಕರಿಸಿ, ಕಲೆಯನ್ನು ಸಂಸ್ಕೃತಿಯತ್ತ ಸಲ್ಲಿಸಿದ ಕಲಾದಾನಿ ದಾನಪ್ಪನವರ ಬಾಳು ಅಷ್ಟೇ ಹಸನಾದುದು. ಇವರು ಶ್ರೇಷ್ಠ ವರ್ಗದ ಕಲಾವಿದರಿದ್ದರೂ, ನಿಗರ್ವಿಗಳು, ಸೌಜನ್ಯಶೀಲರು. ಮಾಡಬೇಕೆಂದಿರುವುದನ್ನು ಆಡದೆ ಮಾಡುವ ಸ್ವಭಾವದವರಾಗಿದ್ದರು.

ಇವರು ಸದ್ವಂಶದಲ್ಲಿ ಹುಟ್ಟಿದರೂ ಸದ್ಗುಣಗಳನ್ನು ಜೀವನದಲ್ಲಿರಿಸಿಕೊಂಡು ನಡೆಯುತ್ತಿದ್ದರು. ಇದು ಬಂಗಾರಕ್ಕೆ ಕುಂದಣ ಕೊಟ್ಟಂತೆ. ಇವರ ಬಾಳ ಸಂಗಾತಿ ಸರ್ವಮಂಗಳಾದೇವಿಯವರು ಪತಿಗೆ ತಕ್ಕ ಸತಿಯಾಗಿ ಸಂಸಾರವನ್ನು ಸಾಗಿಸಿದ ಮಹಾಮಾತೆ. ಈ ದಂಪತಿಗಳ ಪುತ್ರ-ಸುಪುತ್ರಿಯರು ಸಂಪತ್ತೂ ಸುಸಂಸ್ಕೃತಿಯಿಂದ ಕೂಡಿದ ವಿಶ್ವನಾಥ, ಸುರೇಶ, ಎಂಬ ಇಬ್ಬರು ಪುತ್ರರು, ಪ್ರೇಮಾ, ಲೀಲಾ, ವಿಮಲಾ, ಎಂಬ ಮೂವರು ಪುತ್ರಿಯರು ಇರುವರು. ಇವರು ಮನೆಗೆ ಮಂಗಳವನ್ನು ತಂದ ದಾನಪ್ಪನವರು ವಂಶದ ಬಳ್ಳಿಯ ಕುಡಿಯಾಗಿ, ಬಾಳಿನ ಬೆಳಕಾಗಿದ್ದರು.

ದಾನಪ್ಪ ಜ್ಞಾನಕ್ಕಾಗಿ ಸದಾ ಹಂಬಲಿಸುವ, ನಿರುತ್ಸಾಹವನ್ನು ಅರಿಯುವ ಮಹಾಮನಸ್ಸಿನವರು, ಗುರುವಾದವನಿಗೆ ಇದು ಅವಶ್ಯ. ಬಿಂಕ, ಅಹಂಕಾರಗಳು ಗುರುಚೈತನ್ಯಕ್ಕೆ ಹೊರತಾದ ಗುಣಗಳು ಸಹನಶೀಲತೆ, ಸಚ್ಚಾರಿತ್ರ್ಯ ಆತ್ಮೀಯತೆ ಪ್ರೀತಿವಾತ್ಸಲ್ಯಗಳು, ವ್ಯಕ್ತಿಯಲ್ಲಿ ಗುರುತ್ವವನ್ನು ತುಂಬುವ ಗುಣಗಳು. ಇಂತಹ ಗುಣ ವಿಶೇಷಗಳು ಮೂರ್ತಿಸ್ವರೂಪ ಹಾಲಭಾವಿಯವರ ನಡೆ ನುಡಿಗಳು ಒಂದಾಗಿ ಶುದ್ಧ ಕಲಾ ಕಾರ್ಯಕ್ರಮದಿಂದ ಜೀವನ ಸಾರ್ಥಕತೆಯನ್ನು ಪಡೆದವರು. ಮುಗ್ಧಮುಖ, ಸದಾಚಾರದ ಮೃದು, ಸ್ವಭಾವ ಮತ್ಸರ ರಹಿತ ಸಹಜ ಪ್ರೀತಿ, ವಾತ್ಸಲ್ಯಗಳು, ಸದಾ ತೆರೆದಿಟ್ಟ ವಿಶಾಲವಾದ ಹೃದಯ, ಸಿಹಿ ನೀರಿನ ಬುಗ್ಗೆಯಂತೆ ಸದಾ ಪುಟಿಯುತ್ತಿರುವ ಹಾಗೆ ಕಾಣುತ್ತಿದ್ದರು.

ತಮ್ಮ ಹಾಗೂ ತಮ್ಮ ಸುತ್ತಲೂ ಇರುವ ಸ್ವಚ್ಛಂದವಾದ ವಾತಾವರಣವು ರೂಪುಗೊಳ್ಳುವಂತೆ ಶ್ರಮಿಸಿದವರು. ಅತಿ ವಿರಳ ಸ್ವಚ್ಛತೆಗೆ, ಅಚ್ಚು ಕಟ್ಟುತನಕ್ಕೆ ಹೆಚ್ಚು ಗಮನವಿತ್ತಂತೆ ಹಾಲಭಾವಿಯವರು ತಮ್ಮ ಮನೆ, ಆಫೀಸು, ಕಲಾ ಮಂದಿರ ಪ್ರತಿಯೊಂದು ವಿಭಾಗದವು ಕೂಡಾ ಅಚ್ಚುಕಟ್ಟತನದಲ್ಲಿ ಕುಂದುಬಾರದಂತೆ, ಪ್ರತಿದಿನವೂ ನೋಡಿಕೊಳ್ಳುತ್ತಿದ್ದರು. ರಾಜದರ್ಬಾರದ ಠೀವಿಯು ಇದ್ದರೆ ಶಾಂತ ಹಾಗೂ ಸುಮಧುರವಾದ ವಾತಾವರಣವನ್ನು

ಕಲಾಮಂದಿರವು ಇವರಿಂದ ಪಡೆದಿರುವುದರಿಂದ ದೀನರಿಂದ–ಧನಿಕ, ಸೇವಕರಿಂದ– ರಾಜರವರೆಗೆ, ಕಿಂಕರರಿಂದ–ಶಂಕರವರೆಗೆ ಪ್ರತಿಯೊಬ್ಬ ನಾಗರಿಕರೂ ಇಲ್ಲಿ ನಿರ್ಭಯ ನಿರಾತಂಕವಾಗಿ ಬಂದು ತಮ್ಮ ಯೋಗಕ್ಷೇಮದೊಡನೆ ಸುಲಭವಾದ ಸುಯೋಗ್ಯ, ಆತಿಥ್ಯ ಪಡೆದು, ಹಗುರ ಮನದಿಂದ ಮುಗುಳು ನಗುತ್ತಾ ಹೋಗುತ್ತಿದ್ದರು. ಇದು ಹಾಲಭಾವಿಯವರ ಹೃದಯ ವೈಶಾಲ್ಯ, ತಾಳ್ಮೆ ಗುಣಗಳನ್ನು ತೋರಿಸುತ್ತದೆ.

ತಮ್ಮ ಆತ್ಮೀಯರಿಗೆ ಅಥವಾ ವಿದ್ಯಾರ್ಥಿಗಳಿಗೆ ಯಾವುದೇ ಬಹುಮಾನ, ಪ್ರಶಸ್ತಿ, ಶ್ರೇಯಸ್ಸು, ದೊರಕಿದಲ್ಲಿ ತಮಗೆ ಅವೆಲ್ಲವೂ ದೊರೆತಂತೆ ಸಂತೋಷಪಡುವ ಸ್ವಭಾವದವರು ಹಾಲಭಾವಿ. ಇವರು ಜೀವಿಸುವ ಆಕರ್ಷಕ ರೀತಿ–ನೀತಿನೋಡಿ ಅರಿತು ಕಲಿಯಬೇಕನ್ನುವ ಶಿಷ್ಯಕೋಟಿಗೆ ಅವರ ಜೀವನವೇ ಒಂದು ಆಕರ್ಷಕ ಪ್ರಗಲ್ಭ ಗ್ರಂಥವಾಗಿದೆ ಎಂದರೆ ತಪ್ಪಾಗಲಾರದು.

**ಕಲಾ ಸಲಹೆಗಾರರಾಗಿ ಸೇವೆ**

ಕಲೆಯ ಬೀಡು ಸಂಸ್ಕೃತಿಯ ಚೆಲುವ ನಾಡಾದ ಕನ್ನಡ ನಾಡಿನ ಧಾರವಾಡ, ಕಾರವಾರ, ಬೆಳಗಾವಿ, ವಿಜಾಪೂರ ಜಿಲ್ಲೆಗಳು ಈ ಹಿಂದೆ ಮುಂಬೈ ರಾಜ್ಯದಲ್ಲಿದ್ದಾಗ ಪ್ರಪ್ರಥಮವಾಗಿ ಕನ್ನಡ ನಾಡಿನಲ್ಲಿಯೇ ಅವಿರತ ಪರಿಶ್ರಮಪಟ್ಟು ಕಲಾಸೇವೆಗೈದ, ಹಾಲಭಾವಿಯವರನ್ನು ಆಯ್ಕೆ ಮಾಡಿಕೊಂಡ ಮುಂಬೈ ಸರ್ಕಾರ ಕಲಾ ಸಲಹೆಗಾರ ಮಂಡಳಿಯ ಸದಸ್ಯರನ್ನಾಗಿ ಮಾಡಿಕೊಂಡಿದ್ದಿತು. ಅಲ್ಲಿ ಸೂಕ್ತ ಸಲಹೆಗಳನ್ನು ಕೊಟ್ಟು ಕೀರ್ತಿಶಾಲಿಗಳಾದರು ಅವರು.

ಕರ್ನಾಟಕ ಒಂದಾಗಿ ಮೈಸೂರ ರಾಜ್ಯವಾದಾಗ ರಾಜ್ಯ ಲಲಿತಕಲಾ ಅಕಾಡೆಮಿ ಸದಸ್ಯರಾಗಿ ಅಮೋಘ ಸೇವೆಯನ್ನು ಸಲ್ಲಿಸಿ, ಅಕಾಡೆಮಿಯನ್ನು ಅಭಿವೃದ್ಧಿಗೊಳಿಸಲು ಸಹಾಯ ಸಹಕಾರ ನೀಡಿದರು. ರಾಜ್ಯ ಕಲಾ ಶಿಕ್ಷಕರ ಸಂಘದ ವಯ್ಸ್ ಚೇರಮನ್‌ರಾಗಿ ರಾಜ್ಯದ ಕಲಾ ಶಿಕ್ಷಕರ ಕುಂದುಕೊರತೆಗಳನ್ನೂ ಶಾಲೆಗಳಲ್ಲಿ ಚಿತ್ರಕಲೆಯ ಸ್ಥಾನವನ್ನು ಭದ್ರಪಡಿಸಲು ಪ್ರಯತ್ನಿಸಿದರು.[೨೪]

ಮೈಸೂರು ರಾಜ್ಯದ ಕಲಾಭ್ಯಾಸದ ಮಂಡಳಿಯ ಸಲಹೆಗಾರರಾಗಿ ೧೯೫೮ರಲ್ಲಿ ಕಾರ್ಯ ನಿರ್ವಹಿಸಿದ್ದಾರೆ. ದಾನಪ್ಪ ಹಾಲಭಾವಿಯವರು ಕರ್ನಾಟಕ ಆರ್ಟ್ ಸೊಸಾಯಿಟಿಯ ಕಾರ್ಯದರ್ಶಿಯಾಗಿ, ೧೯೪೪ರಲ್ಲಿ ಮುಂಬೈ ಪ್ರಾಂತದ ಡ್ರಾಯಿಂಗ್ ಶಿಕ್ಷಕರ ಸಂಘದ ಕಾರ್ಯದರ್ಶಿಯಾಗಿ, ೧೯೪೯ರಿಂದ ೧೯೫೨ರವರೆಗೆ ಸರ್ ಜೆ.ಜೆ.ಸ್ಕೂಲ್ ಆಫ್ ಆರ್ಟ್‌ದಲ್ಲಿ ಮೂರು ವರ್ಷಗಳ ಕಾಲ ಮಾರ್ಗದರ್ಶಕ ಸದಸ್ಯರಾಗಿ, ಮುಂಬೈ ಪ್ರಾಂತದ ಕಲಾಪರೀಕ್ಷೆಗಳ ಪರೀಕ್ಷಕರಾಗಿ ಎಂಟು ವರ್ಷಗಳ ಕಾಲ ಸೇವೆ ಸಲ್ಲಿಸಿದ್ದಾರೆ. ಕರ್ನಾಟಕ ವಿ.ವಿ.ಯಿಂದ ಬಿ.ಎ. ಪರೀಕ್ಷೆಗೆ ಕಲೆಯನ್ನು ಅಭ್ಯಾಸ ಪತ್ರಿಕೆಯಲ್ಲಿ ಸೇರಿಸಬೇಕೆಂದು ಗುಲ್ಬರ್ಗಾ ಹಾಗೂ ಬಾಗಲಕೋಟೆ ಕಾಲೇಜುಗಳಿಗೆ ಇನ್ಸ್‌ಪೆಕ್ಟರ ಆಗಿ ಹೋಗಿ ಬಂದಿದ್ದಾರೆ. ದಾವಣಗೆರೆ ಸರ್ಕಾರಿ ಕಲಾ ಮತ್ತು ಕರಕುಶಲ ಶಾಲೆಯ ಸಲಹೆಗಾರರಾಗಿ ಉತ್ತಮ ಸೇವೆ ಸಲ್ಲಿಸಿದರು. ಧಾರವಾಡ ರೋಟರಿ ಕ್ಲಬ್ ಸದಸ್ಯರಾಗಿ, ರೋಟರಿ ಕ್ಲಬ್ ಸಂಸ್ಥಾಪಕರ ಭಾವಚಿತ್ರವನ್ನು ಸುಂದರವಾಗಿ ಚಿತ್ರಿಸಿ ಕೊಟ್ಟು ಸೇವೆ ಸಲ್ಲಿಸಿರುವರು.

**ಕಲಾಶಿಕ್ಷಕರಾಗಿ ಹಾಲಭಾವಿಯವರು**

ಇವರು ಚಿಕ್ಕೋಡಿಯ ಆರ್.ಡಿ.ವಿ. ಸ್ಕೂಲಿನಲ್ಲಿ ಎರಡು ವರ್ಷ ಕಲಾಶಿಕ್ಷಕರಾಗಿ ಕೆಲಸ (೧೯೨೪ರಿಂದ೨೬ರವರೆಗೆ) ಮಾಡಿದ್ದಾರೆ. ಕೆಲವು ತಿಂಗಳು ನಿಪ್ಪಾಣಿಯ ಮುನ್ಸಿಪ್ಲ್ ಹೈಸ್ಕೂಲಿನಲ್ಲಿ ಚಿತ್ರಕಲಾ ಶಿಕ್ಷಕರಾಗಿ ನೇಮಕಗೊಂಡಿದ್ದರು. ಅದೇ ವರ್ಷ ೧೯೨೮ರಲ್ಲಿ ಆ ಹುದ್ದೆಯಿಂದ ಬಿಡುಗಡೆ ಹೊಂದಿದರು. ಈ ಹಂತದಲ್ಲಿ ಅವರು ಪಡೆದ ಅನುಭವ ಅಪಾರ. ವಿದ್ಯಾರ್ಥಿಗಳ ಅಚ್ಚುಮೆಚ್ಚಿನ ಶಿಕ್ಷಕರೆಂದು ಆಗಲೇ ಹೆಸರು ಪಡೆದಿದ್ದರು. ಹಾಲಭಾವಿಯವರು ತಮ್ಮ ೫೦ನೇ ವಯಸ್ಸಿನಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯನ್ನು ೧೯೫೦ರಲ್ಲಿ

೨೪. ಎಸ್.ಕೆ.ಹೂಗಾರ, ಡಿ.ವಿ.ಹಾಲಭಾವಿ, ಪುಟ ೨೦

ಮುಗಿಸಿದರು. ಮತ್ತು ಅವರ ಅರವತ್ತನೇ ವಯಸ್ಸಿನಲ್ಲಿ ಬಿ.ಎ. ಪ್ರಥಮ ವರ್ಷದ ಪರೀಕ್ಷೆಯನ್ನು ೧೯೭೪ರಲ್ಲಿ ಪಾಸಾಗಿದ್ದಾರೆ. ಹಾಲಭಾವಿಯವರ ಕಲಿಕೆ ತಡವಾಗಿ ಆಗಲು ಚಿತ್ರಕಲೆಯ ಕಡೆಗೆ ಇದ್ದ ಒಲವೇ ಇದಕ್ಕೆ ಕಾರಣವಾಗಿದೆ.[೨೫]

**ಹಾಲಭಾವಿಯವರ ಕುರಿತು ಮೆಚ್ಚುಗೆಯ ಮಾತುಗಳು**

೧೯೪೦ನೇಯ ಇಸ್ವಿ ಫೆಬ್ರುವರಿ ೧೫ನೇ ದಿನಾಂಕದಂದು ಬೆಂಗಳೂರಿನ ಸುಪ್ರಸಿದ್ಧ ಸಾಹಿತಿ ಅ.ನ.ಕೃಷ್ಣರಾಯರು ಧಾರವಾಡ ಕಲಾಮಂದಿರಕ್ಕೆ ಭೇಟಿ ಇತ್ತಾಗ "ಉತ್ತರ ಕರ್ನಾಟಕದಲ್ಲಿ ಇಂತಹ ಕಲೆಯ ಅಭಿರುಚಿಯನ್ನು ಹುಟ್ಟಿಸಲಿಕ್ಕೆ ಯಾವ ಸಾಧನವೂ ಇರಲಿಲ್ಲ. ಅಭ್ಯಾಸ ಮಾಡಬೇಕೆನ್ನುವರು ಮುಂಬೈಗೆ ಹೋಗಬೇಕಾಗುತ್ತಿತ್ತು, ಹಾಲಭಾವಿ ಈ ಕೊರತೆಯನ್ನು ಕಲಾಶಾಲೆಯನ್ನು ಸ್ಥಾಪನೆಯನ್ನು ಮಾಡುವುದರ ಮೂಲಕ ನೀಗಿಸಿದ್ದಾರೆ. ಇದೇ ಪ್ರಸಂಗದಲ್ಲಿ ನಿಸರ್ಗದ ಬೆಡಗು-ಬಿನ್ನಾಣಗಳನ್ನೂ ಚಂದ-ಚೆಲುವುಗಳನ್ನು ಚಿತ್ರಿಸಿದ ಶ್ರೇಷ್ಠ ಕಲಾ ಪುಂಗರವರ ಪ್ರದರ್ಶನವನ್ನು ನೋಡುತ್ತಾ ಶ್ರೀಯುತ ಹಾಲಭಾವಿಯವರು ಕರ್ನಾಟಕದಲ್ಲಿ ಕಲೆಯ ಸಲುವಾಗಿ ಹಗಲಿರುಳು ಶ್ರಮಪಡುತ್ತಿದ್ದಾರೆ. ಕರ್ನಾಟಕ ಆರ್ಟ ಸೊಸೈಟಿಯಲ್ಲಿ ಭಾಗವಹಿಸಿ ಕಲೆಯ ಚಳುವಳಿಯನ್ನು ಎಬ್ಬಿಸಿ ಹತ್ತಿರುವದು ಶುಭಲಕ್ಷಣ. ಇದರ ಸದುಪಯೋಗ ವಿದ್ಯಾರ್ಥಿಗಳು ಮತ್ತು ನಾಡಿನ ಜನತೆ ಮಾಡಿಕೊಳ್ಳಬೇಕು" ಎಂದು ಅ.ನ.ಕೃ ಹೇಳಿದ್ದಾರೆ.

೧೯೫೦ : ಕರ್ನಾಟಕದ ವಿಶ್ವವಿದ್ಯಾಲಯದ ಉಪಕುಲಪತಿಗಳಾದ ಆರ್.ಎ. ಜಾಗೀರದಾರ ಅವರು ನೈಜ ಕಲಾಕೃತಿಯು ದೈವ ಪರಿಪೂರ್ಣತೆಯ ಛಾಯೆ. ಇಂತಹ ಕಲಾವಿದ ಹಾಲಭಾವಿಯವರ ಕಲೆಯನ್ನು ಕುರಿತು ಆಳವಾಗಿ ಅಭ್ಯಾಸ ಮಾಡಿದ್ದಾರೆ. ಅವರ ಉನ್ನತ ಕಲಾಕೃತಿಗಳು ಕಲಾಮಂದಿರಗಳಲ್ಲಿ ಕಂಗೊಳಿಸುತ್ತಿವೆ. ಎಷ್ಟೋ ಪ್ರದರ್ಶನಗಳನ್ನು ಬೆಳೆಸಿವೆ.

೧೯೫೧ : ಧಾರವಾಡದ ಆರ್. ಜಿ. ರೆಬೆರೋ ಕಲೆಕ್ಟರ್ ಅವರು ಪ್ರದರ್ಶನವನ್ನು ಉದ್ಘಾಟಿಸುತ್ತಾ "ಕಲೆಗಾಗಿ ಕಲೆ " ಎಂಬ ಮಾತು ಹಳೆಯದಾಯಿತು. "ಜೀವನಕ್ಕಾಗಿ ಕಲೆ" ಎಂಬುದನ್ನು ಇಂದಿನ ಜನಾಂಗ ಅರಿತುಕೊಳ್ಳಬೇಕು. "ಒಂದು ದೇಶಕ್ಕೆ ಕಲೆ, ಸಾಹಿತ್ಯ, ಸಂಸ್ಕೃತಿ, ಅಳಿದರೆ ನಾಡಿನ ದಿವಾಳಿ ಶತಸಿದ್ಧ" ಕಲೆಯು ರಾಷ್ಟ್ರದ ಜನಜೀವನವನ್ನೂ ಗುಣಮಟ್ಟವನ್ನು ಎತ್ತಿ ತೋರಿಸುವ ಕುರುಹು. ಕಲೆ ಎಂಬುದನ್ನು ಇಂದಿನ ಯುಗವಾಣಿಯಾಗಿದೆ. ಹಾಲಭಾವಿಯಂತಹ ಕಲಾವಿದರಿಗೆ ಪ್ರೋತ್ಸಾಹ ಕೊಡುವುದು ನಾಡಿನ ಒಳ್ಳೇ ಲಕ್ಷಣವಾಗಿದೆ.

೧೯೫೪ : ಭಾರತ ಸರ್ಕಾರದ ವಾಣಿಜ್ಯ ಶಾಖೆಯ ಮಂತ್ರಿಗಳಾದ ದ. ಪ. ಕರಮರಕರ ಅವರು ಹಾಲಭಾವಿಯವರ ಕಲಾ ಪ್ರದರ್ಶನ ಉದ್ಘಾಟಿಸುತ್ತಾ "ಕರ್ನಾಟಕದಲ್ಲಿ ಕಲೆಯ ಏಳ್ಗೆಗಾಗಿ, ಸಾಂಸ್ಕೃತಿಕ ಕೇಂದ್ರವಾದ ಧಾರವಾಡದಲ್ಲಿ ಶ್ರಮಿಸುತ್ತಿರುವ ಹಾಲಭಾವಿಯವರಿಗೆ ಕಲಾಮಾತೆ ಕೃಪೆ ತೋರಲಿ" ಎಂದು ಹರಸಿದರು.

ಡಾ.ಹಿರೇಮಲ್ಲೂರ ಈಶ್ವರನ್ ಅತಿಥಿಗಳಾಗಿ ಬಂದ, ಹಾಲಂಡದ ಜಾನ್ ಹಾಂಡಿಯಸ್ ಅವರು ಕಲಾಪ್ರದರ್ಶನಕ್ಕೆ ಭೇಟಿ ಕೊಟ್ಟಾಗ ಹಾಲಭಾವಿಯವರ ಕಲಾಕೃತಿಗಳನ್ನು ಮೆಚ್ಚಿ ಕೆಲವು ಚಿತ್ರಗಳನ್ನು ಫ್ರೆಂಚ್ ಕಲಾವಿದರಾದ ಮ್ಯಾಟಿಸ್ ಅವರ ಕಲಾಕೃತಿಗೆ ಹೋಲಿಸಿದರು. ಯುರೋಪಿನ ಕಲೆಯ ಬಗ್ಗೆ ಮಾತನಾಡಿ ಕಲಾಮಂದಿರದ ಕಲಾವಿದರಿಗೆ ಶುಭ ಕೋರಿದರು.

೧೯೭೮ : ಕರ್ಮವೀರ ಸಹಾಯಕ ಸಂಪಾದಕ ಎಸ್.ವ್ಹಿ. ಪಾಟೀಲ, ವ್ಹಿ.ಎಸ್. ದಿವಾಕರರೊಂದಿಗೆ ೬೦ ನೇ ವರ್ಷದ ಹಾಲಭಾವಿಯವರು ಹುಟ್ಟುಹಬ್ಬದ ಪ್ರದರ್ಶನಕ್ಕೆ ಬಂದಾಗ ಹಾಲಭಾವಿಯವರು ಒಳ್ಳೆಯ ಕಲಾವಿದರೇನೋ ನಿಜ. ಆದರೆ ಕಲಾ ಶಿಕ್ಷಣ ರಂಗದಲ್ಲಿ ತೊಡಗಿ ತಮ್ಮ ಕಲಾಪ್ರದರ್ಶನ ವಿಕಾಸಕ್ಕೆ ಮಹತ್ವ ಕೊಡದೇ ಹೋಗಿದ್ದರೆ. ನಾಡಿನಲ್ಲಿ ಉಚ್ಚ ಕಲಾಪ್ರದರ್ಶನವಾಗುತ್ತಿದ್ದಿಲ್ಲ. ಕಲಾ ಶಿಕ್ಷಣ, ಕಲಾಪ್ರದರ್ಶನ ಎರಡಕ್ಕೂ ದಾರ್ಶನಿಕರಾಗಿರುವರು ಅವರು ಎಂದರು.

---

೨೫. ಡಾ.ಎಸ್.ಸಿ.ಪಾಟೀಲ, ಸುವರ್ಣಮಹೋತ್ಸವ ಸಂಚಿಕೆ, ಪುಟ ೩

೧೯೭೭ : ಡಾ. ಎಂ. ವ್ಹಿ. ಮಿಣಜಗಿ ಅವರ ಅಧ್ಯಕ್ಷತೆಯಲ್ಲಿ ಪತ್ರಕರ್ತ ಪಾಟೀಲ ಪುಟ್ಟಪ್ಪನವರು ಕಲಾ ಪ್ರದರ್ಶನ ಉದ್ಘಾಟಿಸುತ್ತಾ ಜನರ ಮೆಚ್ಚುಗೆಗೆ ಹಾಲಭಾವಿಯವರು ಪಾತ್ರರಾಗಿರುವರು ಎಂದು ಅಂದರು. ಜನರು ಮೆಚ್ಚಲಿ, ಬಿಡಲಿ ಚಿತ್ರ ಬರೆಯುತ್ತಿರುವುದು ನನ್ನ ಕೆಲಸ "ಕಾಯಕವೇ ಕೈಲಾಸ" ವೆಂದು ಹಾಲಭಾವಿಯವರು ನುಡಿದರು.

೧೯೭೮ : ಹಾಲಭಾವಿಯವರು ಚಿತ್ರಕಲಾ ಪ್ರದರ್ಶನವನ್ನು ಸಾರ್ವಜನಿಕರಿಗಾಗಿ ಏರ್ಪಡಿಸಿದಾಗ ಕುಂಚದ ಮೋಹದಲ್ಲಿ ತಮ್ಮ ಸರ್ವಸ್ವ ಧಾರೆ ಎರೆದು ಕಲಾ ಶಾಲೆಯನ್ನು ಕಟ್ಟಿಸಿದ ಕಲಾಕಾರ ಹಾಲಭಾವಿಯವರನ್ನು 'ಕುಂಚಬ್ರಹ್ಮ' ಎಂದು ಸಾಹಿತಿ ಎನ್ಕೆ ಕುಲಕರ್ಣಿ ಬಣ್ಣಿಸಿದ್ದರು.

೧೯೮೧ : ಸ್ಕೂಲ್ ಆಫ್ ಆರ್ಟ್ಸ ಸಂಸ್ಥೆಯ ಬೆಳ್ಳಿಹಬ್ಬದ ಕಾರ್ಯಕ್ರಮವು ಧಾರವಾಡ ಮುರುಘಾಮಠದ ಶ್ರೀ ಮ. ನಿ. ಪ್ರ. ಸ್ವ. ಮಹಾಂತಸ್ವಾಮಿಗಳವರ ಸನ್ನಿಧಾನದಲ್ಲಿ ಜರುಗಿದ ಈ ಉತ್ಸವಕ್ಕೆ ಮಹಾರಾಷ್ಟ್ರದ ನಿವೃತ್ತ ಡ್ರಾಯಿಂಗ್ ಇನ್ಸಪೆಕ್ಟರ್ ಆಗಮಿಸಿದ್ದರು. ಆ ಸಂದರ್ಭದಲ್ಲಿ ಏರ್ಪಡಿಸಿದ ಪ್ರದರ್ಶನವನ್ನು "ಸಂಯುಕ್ತ ಕರ್ನಾಟಕ"ದ ಎಮ್. ನಾಗರಾಜ ಅವರು " ಹಾಲು ಜೇನುಗಳ ರುಚಿಯನ್ನು ಕೊಡುತ್ತದೆ. ಹಾಲಭಾವಿಯವರ ಕಲಾ ಪ್ರದರ್ಶನ ಮತ್ತು ಇವರು ಶಿಕ್ಷಣದ ಅಡಿಪಾಯ ಹಾಕಿರುವರು" ಎಂದು ಮನತುಂಬಿ ಮಾತನಾಡಿದ್ದರು.

೧೯೮೪ : ಸುಪ್ರಸಿದ್ಧ ಕಲಾವಿದ ಡಿ. ವಿ. ಹಾಲಭಾವಿ ಅರವತ್ತು ವರ್ಷಗಳ ಹಿಂದೆ ೧೯೨೦-೧೯೨೩ ರ ವರೆಗೆ ಶಿಕ್ಷಣ ಪಡೆದ ಹೊನ್ನಾವರದಲ್ಲಿ ವಸ್ತು ಕಲಾ ಪ್ರದರ್ಶನವನ್ನು ಸ್ಮರಿಸಿ ತಾವು ಕಲಿತ ಶಾಲೆಯಲ್ಲಿ ಮತ್ತೆ ಕಲಾಪ್ರದರ್ಶನ ನಡೆಸುವ ಸುಯೋಗ ತಮಗೆ ಪ್ರಾಪ್ತವಾದ ಬಗ್ಗೆ ತೃಪ್ತಿಪಟ್ಟರು. ಪ್ರದರ್ಶನ ಉದ್ಘಾಟಿಸಿದ ರೆವರೆಂಡ್ ಮ್ಯಾಥೋ ಪಿ. ಜೇಕಬ್ ಅಧ್ಯಕ್ಷತೆ ವಹಿಸಿದ್ದರು. ನ್ಯಾಯಾಧೀಶ ಎ. ಕೆ. ಪಾಟೀಲ, ಜೆ. ಅಬ್ರಹಮ್ ಮೊದಲಾದವರು ಮತ್ತು ಕಲಾ ಶಿಕ್ಷಕರು ಸೇರಿ ಪ್ರಶಂಸಿಸಿದರು.

೧೯೮೫ : ದಾಂಡೇಲಿ ಜೆ.ಸಿ. ಅವರ ಆಶ್ರಯದಲ್ಲಿ ಕಲಾ ಮಂದಿರದ ಸ್ವರ್ಣ ಮಹೋತ್ಸವ ಅಂಗವಾಗಿ ಏಕವ್ಯಕ್ತಿ ಪ್ರದರ್ಶನ ಜೆ. ಡಿ. ಮಹೇಶ್ವರಿ– ಅವರಿಂದ ಉಧ್ಘಾಟನೆಯಾಗಿ ಜೆ. ಸಿ. ಅವರಿಂದ " ಕಲಾ ತಪಸ್ವಿ " ಎಂದು ಪ್ರಶಸ್ತಿ ಹಾಗೂ ಬಹುಮಾನ ದೊರೆಯಿತು.

ಇವರ ಕಲಾ ಪ್ರದರ್ಶನವನ್ನು ಕಂಡ ಹಿಂದಿನ ಮಹಾರಾಷ್ಟ್ರದ ಡ್ರಾಯಿಂಗ್ ಇನ್ಸ್‌ಪೆಕ್ಟರ್ ಡಿ. ವ್ಹಿ. ಬಡಿಗೇರ ಇವರು ಹಾಲಭಾವಿ ಅವರು ನಡೆಸುತ್ತಿರುವ ಕಲಾಪ್ರದರ್ಶನ, ಕಲಾ ಮಂದಿರದ ಸರ್ ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ ಮಾದರಿಗೆ ಸರಿಸಮಾನವಾಗಿ ಇದೆ ಎಂದು ತಮ್ಮ ಭೇಟಿಯ ವೇಳೆಯಲ್ಲಿ ಉದ್ಗಾರ ತೆಗೆದು, ಕಲಾ ಮಂದಿರ ಏಳ್ಗೆಗೆ ಕಾರಣಪುರುಷರಾಗಿದ್ದಾರೆ ಎಂದು ಹರಿಸಿದರು. ಶ್ರೀ ಮ.ನಿ.ಪ್ರ.ಸ್ವ ಗಂಗಾಧರ ರಾಜೇಂದ್ರ ಮಹಾಸ್ವಾಮಿಗಳು, ಮೂರುಸಾವಿರಮಠ, ಹುಬ್ಬಳ್ಳಿ ಅವರು ಉದ್ಘಾಟಿಸುತ್ತಾ, ಹಾಲಭಾವಿಯವರು ಕಲೆಯ ಬೀಡಾದ ಕರ್ನಾಟಕದ ಕಲೆಯನ್ನು ಬೆಳೆಯಿಸಿ, ಉಳಿಸಿಕೊಂಡು ಬಂದಿದ್ದಾರೆ ಎಂದು ಆಶೀರ್ವಚನಗೈದರು.

ಜಗದ್ಗುರು ಶ್ರೀ ಮ. ನಿ. ಪ್ರ. ಸ್ವ ಸಿದ್ಧಲಿಂಗ ಮಹಾಸ್ವಾಮಿಗಳು, ತೋಂಟದಾರ್ಯಮಠ ಗದಗ. ಅವರು ಕಲಾ ವಿಚಾರಗೋಷ್ಠಿ ಮತ್ತು ಪ್ರಾತ್ಯಕ್ಷಿಕೆ ಉಧ್ಘಾಟನೆ ಮಾಡುತ್ತಾ, ಹಾಲಭಾವಿಯವರು ಕನ್ನಡನಾಡಿನ ಕಿರಿಯ ಕಲಾವಿದರಿಗೆ ಮಾರ್ಗದರ್ಶನ ಮಾಡಿ ಪ್ರಪಂಚಕ್ಕೆ ಒಳ್ಳೆ ಕಲಾವಿದರನ್ನು ನೀಡಿದ್ದಾರೆ ಎಂದು ಪ್ರಶಂಸಿಸಿದರು. ಮಾನ್ಯ ಬಿ. ಆರ್. ಯಾವಗಲ್ , ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್ ರಾಜ್ಯ ಸಚಿವರು ಮುಖ್ಯ ಅತಿಥಿಗಳಾಗಿ ಹಾಲಭಾವಿಯವರ ಕಲಾಪ್ರದರ್ಶನದಲ್ಲಿಯ ಕಾಶ್ಮೀರ, ಕಾರವಾರ, ಸಿಲೋನ, ಧಾರವಾಡ ಮುಂತಾದ ನಿಸರ್ಗ ಚಿತ್ರಗಳು, ಅಜಂತಾ ಗುಹೆಗಳಿಲ್ಲಿಯ ವರ್ಣಚಿತ್ರಗಳು, ಅನೇಕ ಭಾವಚಿತ್ರಗಳು, ಪೌರಾಣಿಕ, ಐತಿಹಾಸಿಕ, ಆಧುನಿಕ ಮುಂತಾದ ಜಲವರ್ಣ, ತೈಲವರ್ಣ, ಹುಡಿವರ್ಣ, ಮಾಧ್ಯಮದ ಕಲಾ ಪ್ರತಿಗಳನ್ನು ನೋಡಿ ಅವರು ಕನ್ನಡ ನಾಡಿನ ಕಲಾ ಕೊಡುಗೆಯಾಗಿದ್ದಾರೆ ಎಂದು ವರ್ಣಿಸಿದರು.

ಸೋಮಶೇಖರ ಎಂ. ಸಾಲಿ ಸುವರ್ಣಮಹೋತ್ಸವದ ಅಧ್ಯಕ್ಷ ಸ್ಥಾನವಹಿಸಿ ಹಾಲಭಾವಿಯವರು ಕರ್ನಾಟಕದಲ್ಲಿ ಪ್ರಪ್ರಥಮವಾಗಿ ಕಲಾ ಮಂದಿರ ಸ್ಥಾಪನೆ ಮಾಡಿ, ಕರ್ನಾಟಕಕ್ಕೆ ಅಲ್ಲದೆ ಭಾರತಕ್ಕೆ ಕಲಾವಿದರನ್ನು ಒದಗಿಸಿಕೊಟ್ಟ ಕೀರ್ತಿಗೆ ಪಾತ್ರರಾಗಿರುವರು. ಅವರ ಶಿಷ್ಯನಾದ ನಾನು ಇಂದು ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷನಾಗಿರುವುದು ಅವರ ಕೃಪಾಬಲದಿಂದ ಎಂದರು.

ಸೌಂದರ್ಯವೇ ಸತ್ಯ, ಸತ್ಯವೇ ಸೌಂದರ್ಯ ಲೋಕದಲ್ಲಿ ಗೋಚರಿಸುವುದೆಲ್ಲ, ಇದುವೆ ನೀ ಸರಿಯಬೇಕಾದುದೆಲ್ಲವೂ ಇದುವೇ ಓದಿ ಅರಿತುಕೊಳ್ಳುವುದಕ್ಕಿಂತಲೂ ನೋಡಿ ಮಾಡಿ ಅರಿತುಕೊಳ್ಳುವುದು ಬಹುಕಾಲ ಮಾನವನ ಮನದಲ್ಲಿ ಉಳಿದುಕೊಳ್ಳುವದು ಎಂಬ ಅರಿವಿನ ಕಲಾವಿದರಾದ ಡಿ. ವಿ. ಹಾಲಭಾವಿ ಭಾರತದ ಒಳ ಹಾಗೂ ಹೊರ ಪ್ರದೇಶಗಳ ಕಲಾ ವಿದ್ಯಾರ್ಥಿಗಳೊಂದಿಗೆ ಮಾಡಿ ಅವರಿಗೆ ಸೌಂದರ್ಯ ಪ್ರಜ್ಞೆಯನ್ನು ಜಾಗತಿಕ ಕಲೆಯ ಮಾಹಿತಿಯನ್ನು ನೀಡಿದ್ದಾರೆ.

ಕರ್ನಾಟಕದ ಶಾಲೆ, ಕಾಲೇಜಗಳಲ್ಲಿ ನಡೆಯುವ ಕಲಾ ಶಿಕ್ಷಣ ವಿಷಯಕ್ಕೆ ಪ್ರವಾಸ ಕೈಗೊಂಡು ಕಲೆಯ ಜ್ಞಾನವನ್ನು ಉಪನ್ಯಾಸ, ಕಲಾಕೃತಿ ರಚನೆಯೊಂದಿಗೆ ಪಾಠ ಕೊಡುವುದರ ಮೂಲಕ ಸೇವೆ ಸಲ್ಲಿಸಿರುವರು.

ಮುಂಬೈ, ಬೆಂಗಳೂರು, ಹೈದರಾಬಾದ್ , ಧಾರವಾಡ, ಮೈಸೂರು, ಮದ್ರಾಸು ಮುಂತಾದ ಪಟ್ಟಣಗಳಲ್ಲಿ ನಡೆದ ಕಲಾವಿದರ ಹಾಗೂ ಕಲಾಶಿಕ್ಷಕರ ಸಮ್ಮೇಳನಗಳಲ್ಲಿ ಪಾಲ್ಗೊಂಡು ಕಲಾವಿದರಿಗೆ, ಕಲಾಶಿಕ್ಷಕರಿಗೆ ಇದ್ದ ಕುಂದುಕೊರತೆಗಳನ್ನು ಹೋಗಲಾಡಿಸಲು ಪ್ರಯತ್ನ ಮಾಡಿರುವರು, ಸಭೆ ಸಮ್ಮೇಳನ, ಸೆಮಿನಾರ್, ಇತ್ಯಾದಿಗಳಿಗೆ ಉಪನ್ಯಾಸಕರಾಗಿ, ಉದ್ಘಾಟಕರಾಗಿ, ಅಧ್ಯಕ್ಷರಾಗಿ ಕಲೆಯ ಪರಿಪೂರ್ಣ ಜ್ಞಾನವನ್ನು ಕಲಾವಿದ್ಯಾರ್ಥಿಗಳಿಗೆ ಕಲಾವಿದರಿಗೆ, ಕಲಾಶಿಕ್ಷಕರಿಗೆ ಹಾಲಭಾವಿಯವರು ನೀಡಿದರು. ಇದಲ್ಲದೇ ಅನುಭವಿಗಳಾದ ಇವರು ಉಚ್ಚಕಲಾ ಪರೀಕ್ಷೆಗಳ ಮಾರ್ಗದರ್ಶಕರಾಗಿ, ಮೇಲ್ವಿಚಾರಕರಾಗಿ, ಮುಂಬೈ ಪ್ರಾಂತ್ಯದಲ್ಲಿ ಕರ್ನಾಟಕ ರಾಜ್ಯದಲ್ಲಿ ಬಹುದಿವಸಗಳ ಬಹಳ ವರ್ಷಗಳವರೆಗೆ ಸೇವೆ ಸಲ್ಲಿಸಿರುವರು.

**ಪ್ರಶಸ್ತಿ ಗೌರವಗಳು**

ಹಾಲಭಾವಿಯವರ ಕಲಾಸೇವೆ ಮೆಚ್ಚಿ ಅಂತರಾಷ್ಟ್ರೀಯ ಖ್ಯಾತ ಕಲಾವಿದ ಸರ್ ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ, ಬಾಂಬೆ ಇದರ ಡೈರೆಕ್ಟರ್ ಪದ್ಮಶ್ರೀ ಎಂ. ಅರ್. ಅಂಬೇರಕರ ಇವರಿಂದ ಹಾಲಭಾವಿಯವರಿಗೆ ಸನ್ಮಾನ ಮತ್ತು ಭಾವಚಿತ್ರ ಕಾಣಿಕೆಯನ್ನು ನೀಡಲಾಯಿತು.

ಕರ್ನಾಟಕ ಲಲಿತ ಕಲಾ ಅಕಾಡೆಮಿಯ ಗೌರವ ಪ್ರಶಸ್ತಿ, ೧೯೬೮ ರಾಜ್ಯೋತ್ಸವ ಪ್ರಶಸ್ತಿ ೧೯೬೪, ಐದನೇ ಧಾರವಾಡ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ ೧೯೬೪, ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ ೧೯೯೫.

೧೯೬೮ :ಎಲೆಯ ಮರೆಯ ಕಾಯಿಯಂತೆ ನಾಡು ನುಡಿಗೆ ತಮ್ಮನ್ನೇ ತಾವೇ ಅರ್ಪಿಸಿಕೊಂಡು ಗಂಧದ ಕೊರಡಿನಂತೆ ಜೀವನವನ್ನು ಸವೆಸಿ ಸುವಾಸನೆ ಬೀರಿ "ಕಲೆಯೇ ಜೀವನ ಜೀವನವೇ ಕಲೆ" ಎಂದು ಕಾರ್ಯೋನ್ಮುಖರಾಗಿ ಡಿ. ವಿ. ಹಾಲಭಾವಿಯವರಿಗೆ "ಕನ್ನಡ ಕಲಾ ಜೀವನದ ಜೀವಾಳ" ಎಂದು ಗೋಕಾಕ ನಾಗರಿಕರಿಂದ ಸನ್ಮಾನ ದೊರೆಯಿತು.

೧೯೭೩ : ಹುಬ್ಬಳ್ಳಿ ನಗರ ವಾಸಿಗಳು ಮೆಚ್ಚಿ "ಸುಂದರ ಕಲಾ ಬಳ್ಳಿ" ಎಂದು ಸನ್ಮಾನಿಸಿದರು.

೧೯೭೮ : ಧಾರವಾಡ ಹುಬ್ಬಳ್ಳಿ ಮಹಾನಗರ ಪಾಲಿಕೆಯವರು ೨೫ನೇ ರಾಜೋತ್ಸವದಲ್ಲಿ ಕರ್ನಾಟಕ ಸಂಸ್ಕೃತಿಯ ಕಲಾಜ್ಯೋತಿ, ಎಂದು ಸನ್ಮಾನಿಸಿದರು.

೧೯೮೧ : ಧಾರವಾಡದ ಸಾಹಿತ್ಯ ಸಮ್ಮೇಳನದಲ್ಲಿ ಕನ್ನಡ ನಾಡಿನಲ್ಲಿ ಕಲಾ ಸೇವೆಗೈದ ಕಲಾಗುರು ಎಂದು ಸನ್ಮಾನಿಸಿದರು.

೧೯೮೪ : ಗೋಕಾಕದ ೫೪ ನೇ ವರ್ಷದ ಶ್ರೀ ಗುರು ಬಸವಣ್ಣನವರ ಮತ್ತು ಶರಣರ ಸಪ್ತಾಹದಲ್ಲಿ 'ಕಲಾಶರಣ'ನೆಂದು ಸನ್ಮಾನ ಮಾಡಿದರು.

ಕರ್ನಾಟಕದಲ್ಲಿ ಕಲಾಭಿವೃದ್ಧಿ ಆಗುವ ಬಗೆಗೆ ಕಲಾಯೋಗಿ ಹಾಲಭಾವಿಯವರು ಬಹುದೊಡ್ಡ ಕನಸುಗಳನ್ನು ಕಟ್ಟಿಕೊಂಡಿರುವರು. ೫೦,೦೦೦ ಜನಸಂಖ್ಯೆ ಇರುವ ಪ್ರತಿಯೊಂದು ನಗರದಲ್ಲಿ ಆರ್ಟ ಗ್ಯಾಲರಿ ಆಗಬೇಕೆಂದು ಅವರು ಮಹಾದಾಸೆ ಇಟ್ಟುಕೊಂಡಿದ್ದರು. ಅಲ್ಲದೇ ಜನರ ತನು ಮನಗಳನ್ನು ತುಂಬುವ ಕಲೆಯನ್ನು ಕಲಾವಿದ ಕೊಡಬೇಕು, ಸಮಾಜದ, ಸರ್ಕಾರದ ಔದಾರ್ಯದಿಂದ ಕಲಾವಿದ ಬದುಕಬೇಕು ಎಂದು ಅವರ ಬಲವಾದ ಬಯಕೆಯಾಗಿತ್ತು. ವಿಜ್ಞಾನ ಯುಗದಲ್ಲಿ ಯಾಂತ್ರಿಕ ಜೀವನದಿಂದಾಗಿ ಮಾನವನಲ್ಲಿಯ ಸೌಂದರ್ಯ ಪ್ರಜ್ಞೆಯು ದಿನದಿನಕ್ಕೆ ನಶಿಸುತ್ತ ನಡೆದಿರುವುದರಿಂದ ಮಾನವ ತನ್ನ ನೈಜಗುಣವನ್ನು ಕಳೆದುಕೊಳ್ಳುತ್ತಾ ವಿನಾಶದ ದಾರಿಯಲ್ಲಿದ್ದಾನೆ. ಮಾನವನು ಸುಂದರವಾಗಿ ಬದುಕಬೇಕಾದರೆ ಬಾಹ್ಯ ಬೆಳವಣಿಗೆಗೆ ವಿಜ್ಞಾನವು ಅಂತರಂಗ ವಿಕಾಸಕ್ಕೆ ಕಲೆಯು ಪೂರಕವಾಗಬೇಕು ಎಂಬುದು ಇವರ ವಿಚಾರ. ಅಂತಹ ಮಾನವನ ಭವಿಷ್ಯ ಬಾಳಿಗೆ ಸುಖದ ಮಾರ್ಗವನ್ನು ತೋರುವ ದಿಕ್ಸೂಚಿಯಾಗಿದ್ದರು.

### ಹಾಲಭಾವಿಯವರ ಮಾತುಗಳು

ವಿಜಯನಗರ ಸಾಮ್ರಾಜ್ಯ ೧೫೬೬ ರಲ್ಲಿ ಹಾಳಾದ ಮೇಲೆ ಆರನೂರು ವರ್ಷಗಳವರೆಗೆ, ಉತ್ತರ ಕರ್ನಾಟಕದಲ್ಲಿ ಕಲೆಗೆ ಯಾವ ಪ್ರೋತ್ಸಾಹವಿರಲಿಲ್ಲ. ಇಂಥ ಪರಿಸ್ಥಿತಿಯಲ್ಲೂ ಕಲಾಶಾಲೆಯನ್ನು ಸ್ಥಾಪಿಸಿದ್ದನ್ನು ಕಂಡು ಕೆಲವರು ಮೂಗು ಮುರಿದದ್ದುಂಟು. ಆದರೂ ಕಲಾಶಾಲೆಯನ್ನು ಸ್ಥಾಪಿಸಿದರು. ೧೯೫೫ರವರೆಗೂ ಕಲಾ ಶಾಲೆ ಕುಟುಂತ್ತಾ ನಡೆದು ಕ್ರಮೇಣ ಗೆಲುವನ್ನು ಕಂಡಿತ್ತು. ೧೯೬೦ ರಲ್ಲಿ ಬೆಳ್ಳಿಹಬ್ಬವನ್ನು, ೧೯೮೫ ರಲ್ಲಿ ಸುವರ್ಣಮಹೋತ್ಸವ ಆಚರಿಸಿದ ಕೀರ್ತಿ ಈ ಶಾಲೆಗಿದೆ. ಕರ್ನಾಟಕದಲ್ಲಿ ಅತ್ಯಂತ ಹೆಸರು ಮಾಡಿದ ಹೆಮ್ಮೆಯ ಸಂಕೇತ ಸ್ಕೂಲ್ ಆಫ್ ಆರ್ಟ್.[೨೬]

ಇಂದು ರಾಜ್ಯದಲ್ಲಿ ೭೫ಕ್ಕೂ ಹೆಚ್ಚು ಕಲಾ ಶಾಲೆಗಳಿವೆ ಅಲ್ಲಿ ಕಲಾಶಿಕ್ಷಕರ ಸ್ಥಿತಿ ನೆಟ್ಟಗಿದೆ. ಆದರೆ ಕಲಾವಿದರ ಸ್ಥಿತಿಗತಿ ಅಷ್ಟೊಂದು ಚೆನ್ನಾಗಿಲ್ಲ. ಸರಕಾರವಾಗಲಿ, ಲಲಿತಕಲಾ ಅಕಾಡಮಿಯಾಗಲಿ ಕೊಡುವ ಸಹಾಯಧನ, ಸ್ಕಾಲರಶಿಪ್ ಇತ್ಯಾದಿಗಳು ಕೇವಲ ಶೇ ೩೦ರಷ್ಟು ಜನರಿಗೆ ಮಾತ್ರ ತಲುಪುತ್ತಿವೆ. ರಾಜ್ಯದ ಹೊರಗೂ, ಅಂದರೆ ಮುಂಬೈ, ಮದ್ರಾಸ್, ಹೈದರಾಬಾದ, ಜಮ್ಮು, ಮತ್ತು ಕಾಶ್ಮೀರ ಮುಂತಾದೆಡೆ ಕಲಾಕಾರರ ಸ್ಥಿತಿ ಕರ್ನಾಟಕದಲ್ಲಿ ಇರುವದಕ್ಕಿಂತಲೂ ಉತ್ತಮವಾಗಿದೆ. ಅಲ್ಲಿ ಕಷ್ಟ ಪಟ್ಟು ಕೆಲಸ ಮಾಡುವವರಿಗೆ ಪ್ರತಿಫಲ ಇದ್ದೇ ಇದೆ. ಈ ದೇಶದಲ್ಲಿ ಕಲಾಕಾರನ ಬದುಕು ಕಷ್ಟದಾಯಕ. ಅದೆಷ್ಟೋ ಜನ ಕಷ್ಟದಲ್ಲಿ ಮುಳುಗಿದ್ದಾರೆ. ಇನ್ನುಳಿದವರು ಉಪಜೀವನ ನಡೆಸುತ್ತಿದ್ದಾರೆ. ಜನತೆಗಾಗಲಿ, ಸರಕಾರಕ್ಕಾಗಲಿ ಬೆನ್ನು ಹತ್ತಿದರೆ ಮಾತ್ರ ಕೆಲಸವಾಗುತ್ತದೆ. ಆದರೂ ಕೊನೆ ತಲುಪುವ ಭರವಸೆ ಇರುವದಿಲ್ಲ.

### ನವ್ಯಕಲೆ ಕುರಿತು

ಈ ನವ್ಯಕಲೆ ಜನ ಸಾಮಾನ್ಯರಿಗೆ ಅರ್ಥವಾಗದು, ಅದರರ್ಥ ಚಿತ್ರಿಸಿದವರಿಗೆ ಗೊತ್ತು. ತೀರಾ ಆಧುನಿಕ ಕಲೆಯ ಬಗ್ಗೆ ಹೇಳಬೇಕೆಂದರೆ ಈ ಕಲೆ ಬರೆಯುವವನಿಗೆ ತಿಳಿಯದು, ತಾನೇ ತೆರೆದು ನೋಡಿ, ಕಲಾಕಾರ (ಮಳೆ ಬಂದ ಕಡೆ ಛತ್ರಿ ಹಿಡಿಯಬೇಕಲ್ಲವೆ ) ಸಂತೋಷ ಪಡುತ್ತಾನೆ.

### ವಾಣಿಜ್ಯ ಕಲೆ (ಕಮರ್ಶಿಯಲ್ ಆರ್ಟ) ಕುರಿತು

ಕಮರ್ಶಿಯಲ್ ಆರ್ಟ ತುಂಬಾ ಉಪಯುಕ್ತವಾದದ್ದು ಬಡಕಲಾಕಾರನಿಗೆ ಕೊಂಚ ಮಟ್ಟಿಗಾದರೂ ಬದುಕುವ ಆಸರೆ ಅದು ನೀಡುತ್ತದೆಯೆನ್ನುವಲ್ಲಿ ಅರ್ಥವಿದೆ ಎನಿಸುತ್ತದೆ. ಕಾಮ ಪ್ರಚೋದಿತ ಚಿತ್ರಗಳ ಕಟು

---

೨೬. ಡಾ.ಎಸ್.ಸಿ.ಪಾಟೀಲ(ಸಂ), ಚಿತ್ರಾಕ್ಷಿ, ಪುಟ ೧೬

ವಿರೋಧಿ ಹಾಲಭಾವಿ. ಅದು ಮನುಜನ ಆದರ್ಶಬಾಳನ್ನೇ ಬುಡಮೇಲು ಮಾಡುವ ಈ ಕಲೆಗೆ ಧಿಕ್ಕಾರವಿರಲಿ ಎಂದಿದ್ದಾರೆ.[೨೭]

**ಕಲಾ ವಿದ್ಯಾರ್ಥಿಗಳ ಕುರಿತು**

ಅರ್ಧ ಶತಮಾನದ ಅವಧಿಯಲ್ಲಿ ಸಹಸ್ರ ಕಲಾರಸಿಕರಿಗೆ ಮಾರ್ಗತೋರಿ ಅಂದಿನ ಹಾಗೂ ಇಂದಿನ ವಿದ್ಯಾರ್ಥಿಗಳಲ್ಲಿ ಕಂಡು ಬರುವ ಅಂತರವನ್ನು ಎತ್ತಿ ತೋರಿಸಿದ್ದಾರೆ. ಅಂದಿನ ವಿದ್ಯಾರ್ಥಿಗಳಲ್ಲಿದ್ದ ಶಿಸ್ತು, ಶ್ರದ್ಧೆ ಮತ್ತು ಗುರುಭಕ್ತಿ ಇಂದಿನವರಿಗಿಲ್ಲ. ಇವರಿಗೆ ಪರೀಕ್ಷೆಗಳು ಮುಖ್ಯವೇ ಹೊರತು, ಅರ್ಥವತ್ತಾದ ವಿದ್ಯೆಯಲ್ಲ. ಇವರು ಬೆಳಗಾಗುತ್ತಲೇ ಪ್ರಸಿದ್ಧಿ ಪಡೆಯಬೇಕೆನ್ನುತ್ತಾರೆ. ತಾಳ್ಮೆಯೇ ಇಲ್ಲ ಎಂದು ವಿಷಾದ ವ್ಯಕ್ತಪಡಿಸಿದ್ದಾರೆ.

ಒಳ್ಳೆಯ ಕಲಾಕಾರನಾಗ ಬಯಸುವವ "ಹತ್ತು ಸಾವಿರ ಪುಸ್ತಕ ಓದು ಹತ್ತು ಸಾವಿರ ಮೈಲು ಸಂಚರಿಸು" ಎನ್ನುವ ಮಾತನ್ನು ಹೇಳುವ ಓರ್ವ ಜೀವಿ, ಕಲಾಕಾರನ ಉದಾಹರಣೆಯನ್ನು ತಮ್ಮ ನೆನಪಿನಂಗಳದಿಂದ ಹೇಳಿರುವ ಹಾಲಭಾವಿಯವರು ಒಬ್ಬ ಕಲಾವಿದನು, ಇನ್ನೊಬ್ಬ ಕಲಾವಿದನನ್ನು ಕಂಡು ಅಸೂಯೆಪಡಬಾರದು. ಅವನಿಗಿಂತಲೂ ತಾನು ಇನ್ನೂ ಚೆನ್ನಾಗಿ ಚಿತ್ರಿಸಬೇಕೆಂದು ಬಯಸಬೇಕು ಎಂದು ಅಭಿಪ್ರಾಯಪಟ್ಟಿದ್ದಾರೆ. ಬಡ ಕಲಾವಿದರಿಗೆ ಉಚಿತ ಶಿಕ್ಷಣ ಕೊಡುವಂತಾದರೆ ತುಂಬಾ ಉಪಕಾರವಾದಂತೆ ಎನ್ನುವುದು ಇವರ ಹಿತನುಡಿಯಾಗಿದೆ.[೨೮]

ಹಾಲಭಾವಿಯವರು ಕಲಾ ಕ್ಷೇತ್ರದ ಕನಸಿನ ದೇಗುಲ. ಧಾರವಾಡದಲ್ಲಿ ನೆಲೆಯೂರಿ ಇಂದಿಗೆ ೧೪೦ ವರ್ಷವಾಯಿತು. ಇಂದಿಗೂ ಸ್ಕೂಲ್ ಆಫ್ ಆರ್ಟ್‌ದಿಂದ ಸಾವಿರಾರು ವಿದ್ಯಾರ್ಥಿಗಳು ವಿದ್ಯೆಯನ್ನು ಕಲಿಯುತ್ತಾ ಕಲಾಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಹಾಲಭಾವಿಯವರ ಬದುಕಿನ ಸಾಹಸಗಾಥೆಯನ್ನು ಹೇಳುವ ಸ್ಕೂಲ್ ಆಫ್ ಆರ್ಟ್ ತನ್ನ ಮೂಲ ಸೆಲೆಯನ್ನು ಕಳಚಿಕೊಂಡು ಮಾಳಮಡ್ಡಿಯ ಬಾಡಿಗೆಯ ಮನೆಗೆ ಸ್ಥಳಾಂತರಗೊಂಡಿದೆ. ಆದರೆ ಮೂಲ ಕಲಾಶಾಲೆಯು ಬಿಕೋ ಎನ್ನುತ್ತಿದೆ. ಇದಕ್ಕೆ ಆರ್ಥಿಕ ತೊಂದರೆಯೂ ಮೂಲ ಕಾರಣವಾಗಿದೆ. ಕಲಾಶಾಲೆಯನ್ನು ಉಳಿಸಿಕೊಳ್ಳಲು ಹಾಲಭಾವಿಯವರ ಕುಟುಂಬ ವರ್ಗ ಅವಿರತ ಪ್ರಯತ್ನ ಮಾಡಿದ್ದು ಅಷ್ಟಿಷ್ಟಲ್ಲ.

---

೨೭. ಡಾ.ಎಸ್.ಸಿ.ಪಾಟೀಲ(ಸಂ), ಚಿತ್ರಾಕ್ಷಿ, ಪುಟ ೧೭

೨೮. -ಅದೇ- ಪುಟ ೧೭

# ಡಿ.ವಿ.ಹಾಲಭಾವಿಯವರ ಕಲಾಕೃತಿಗಳ ವರ್ಗೀಕರಣ

**ಕಲಾಕೃತಿಗಳ ಹರವು**

**I. ರೇಖಾಚಿತ್ರಗಳು**

೧. ರೇಖಾ ಶಿರಭಾವಚಿತ್ರಗಳು
೨. ಪೂರ್ಣ ಶಿರಭಾವ ಚಿತ್ರಗಳು
೩. ಸಂಯೋಜನ ಚಿತ್ರಗಳು

**II. ವರ್ಣಚಿತ್ರಗಳು**

**ಜಲವರ್ಣ**

೧. ಶಿರಭಾವ ಚಿತ್ರಗಳು
೨. ಸಂಯೋಜನ ಚಿತ್ರಗಳು
೩. ಪ್ರಕೃತಿ ಚಿತ್ರಗಳು

**ತೈಲವರ್ಣ**

೧. ಶಿರಭಾವ ಚಿತ್ರಗಳು
೨. ಪೂರ್ಣ ಶಿರಭಾವ ಚಿತ್ರಗಳು
೩. ಸಂಯೋಜನಾ ಚಿತ್ರಗಳು

**III. ಛಾಯಾಚಿತ್ರಗಳು**

೧. ಶಿರಭಾವ ಚಿತ್ರಗಳು
೨. ಪೂರ್ಣ ಶಿರಭಾವ ಚಿತ್ರಗಳು
೩. ಪ್ರಕೃತಿ ಚಿತ್ರಗಳು



೧೦. ೧೯೩೩



೧೧. ೧೯೩೩



೧೨. ೧೯೩೩



೧೩. ೧೯೩೩

ಸೀಸದ ಕಡ್ಡಿಯ ಚಿತ್ರಗಳು



೧. ವೀರಭದ್ರಪ್ಪ ಹಾಲಭಾವಿ. ೧೯೫೭



೨. ರಾವ್ ಬಹದ್ದೂರ. ೧೯೮೭



೧೦. ಗಂಗೂಬಾಯಿ ಹಾನಗಲ್, ೧೯೯೩



೧೧. ೧೯೮೯



೧೮. ೧೯೩೫



೧೯. ಕುಮಾರಿ. ನಾಗೂರಮಠ, ೧೯೬೩




೨೦. ಸಿಗ್ಮೋರ್ ಹ್ಯಾಂಡಿಯಸ್, ೧೯೬೦



ಕಲಾವಿದನ ಮನಸ್ಸಿನಲ್ಲಿ ಅಮೂರ್ತ ಭಾವನೆ, ಕಲ್ಪನೆ, ಪ್ರತಿಬಿಂಬ, ನೆನಪು ಮುಂತಾದವುಗಳಿಂದ ಕೂಡಿದ ತುಮುಲಗಳು ಉದ್ಭವಿಸಿ ಮೂರ್ತವಾದ ರೂಪ ಆಕಾರಗಳನ್ನು ಪಡೆದು ಕಲಾಕೃತಿ ಸೃಷ್ಟಿಯಾಗುತ್ತದೆ. ಪ್ರತಿಯೊಂದು ಕಲಾಕೃತಿಯೂ ಅನನ್ಯವಾದದ್ದೇ. ಅದರ ವಸ್ತು ವಿಷಯ ಯಾವುದೇ ಇದ್ದರೂ ಅದಕ್ಕೆ ಕಲಾವಿದನು ತನ್ನ ಮನೋಗತ ಭಾವನೆಗಳನ್ನು ಬೀಜಗೊಳಿಸಿ ಬಿತ್ತಿ ಬೆಳೆಸಿ, ಪೋಷಿಸಿ ದೃಶ್ಯರೂಪ ನೀಡುತ್ತಾನೆ. ಕಲಾವಿದನ ಭಾವಾಭಿವ್ಯಕ್ತಿಯ ನಿಖರತೆಯನ್ನು ಕಲಾಕೃತಿಗಳ ಮೂಲಕ ಮಾತ್ರವೇ ಅಳೆಯಲು ಸಾಧ್ಯ. ಕಲಾವಿದನು ತನ್ನ ಅಂತರಂಗವನ್ನು ದೃಶ್ಯಾತ್ಮಕ ರೂಪದಲ್ಲಿ ಅಭಿವ್ಯಕ್ತಿಸುವಂತಹ ಸಂದರ್ಭದಲ್ಲಿ ಆ ಕಲಾಕೃತಿಗಳು ಅವನ ಮನಸ್ಸಿನ ಭಾವಗಳ ಪ್ರತಿಬಿಂಬವಾಗುತ್ತವೆ. ವಿಭಿನ್ನ ನೆಲೆಯಲ್ಲಿ ಭಾವಾಬಿವ್ಯಕ್ತಿಯ ಮೂಸೆಯಲ್ಲಿ ಅರಳಿದ ಕಲಾಕೃತಿಗಳ ವಿಸ್ತಾರವಾದ ಅಧ್ಯಯನವಾದಾಗ ಮಾತ್ರ ಕಲಾವಿದನ ಕಲಾಸೃಷ್ಟಿಯ ಆಸಯವು ಹೊರ ಪ್ರಪಂಚಕ್ಕೆ ತೆರೆದುಕೊಳ್ಳುತ್ತದೆ. ಹೀಗಾಗಿ ಬಣ್ಣಗಳ ಒಡನಾಟ, ಕುಂಚಗಳ ಬಿಸುಪು, ಸೆಳೆತ, ಗತಿ ಇವುಗಳ ಬೇರುಗಳಲ್ಲಿ ಮೂಡಿದ ಕಲಾವಿದನ ಆಶಯವನ್ನರಿಯಲು ಅಧ್ಯಯನ ಅತ್ಯವಶ್ಯ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಾಯದಲ್ಲಿ ಹಾಲಭಾವಿಯವರ ಚಿತ್ರ ಕೃತಿಗಳನ್ನು ಈ ಕೆಳಗಿನಂತೆ ವಿಂಗಡಿಸಿ ಅಧ್ಯಯನಕ್ಕೊಳಪಡಿಸಲಾಗಿದೆ.

**ಕಲಾಕೃತಿಗಳ ವರ್ಗೀಕರಣ**

**ಭಾಗ I : ರೇಖಾಚಿತ್ರಗಳು**

೧. ಶಿರಭಾವ ರೇಖಾಚಿತ್ರಗಳು

೨. ಪೂರ್ಣ ಶಿರಭಾವ ರೇಖಾಚಿತ್ರಗಳು

೩. ಸಂಯೋಜನಾ ರೇಖಾಚಿತ್ರಗಳು

**ಭಾಗ II : ವರ್ಣಚಿತ್ರಗಳು**

೧. ತೈಲವರ್ಣ ಚಿತ್ರಗಳು

೨. ಜಲವರ್ಣ ಚಿತ್ರಗಳು

**ಭಾಗ III : ಛಾಯಾಚಿತ್ರಗಳು**

೧. ಶಿರಭಾವ ಛಾಯಾಚಿತ್ರಗಳು

೨. ಪೂರ್ಣ ಶಿರಭಾವ ಛಾಯಾಚಿತ್ರಗಳು

೩. ಪ್ರಕೃತಿ ಛಾಯಾಚಿತ್ರಗಳು

೧. ರೇಖಾ ಚಿತ್ರಗಳು

ಇತ್ತಿಚೀನ ದಿನಗಳಲ್ಲಿ ರೇಖಾ ಚಿತ್ರಕಲೆಯೇ ಒಂದು ಸ್ವಯಂ ಪೂರ್ಣ ಕಲೆಯೆಂದು ಗುರುತಿಸಲಾಗಿದ್ದು ಇದರ ವ್ಯಾಪಕತೆಗೆ ಒಂದು ನಿದರ್ಶನವಾಗಿದೆ. ಚಿತ್ರಕಲೆಯ ಮೂಲ ಆಧಾರಸ್ತಂಭವೇ ರೇಖೆ. ಈ ರೇಖೆಗಳು ಚಿತ್ರಕಲೆಯಲ್ಲಿ ತುಂಬಿಕೊಡಲು ಅರ್ಥ ಸ್ವರೂಪ, ಪ್ರಕಾರ, ಗುಣಲಕ್ಷಣ ಇತ್ಯಾದಿ ಅಂಶಗಳು ಕುತೂಹಲಕಾರಿಯಾಗಿವೆ. 'ರೇಖೆ' ಎಂಬ ಪದ ನಮ್ಮ ದೈನಂದಿನ ಬದುಕಿನಲ್ಲಿ ಬೇರೆ ಬೇರೆ ಸಂದರ್ಭದಲ್ಲಿಯೂ ಕಂಡುಬರುತ್ತದೆ. ಆಕಾರಗಳನ್ನು ಸರಳಗೊಳಿಸುವದೇ ರೇಖೆಯ ಮೂಲ ಗುಣವಿಶೇಷವೆಂದು ಎಲ್ಲ ಚಿತ್ರಕಲಾವಿದರೂ ಒಪ್ಪುತ್ತಾರೆ. ಅದೇ ಅದರ ಸತ್ವ ಹಾಗೂ ಸೌಂದರ್ಯ ಕೂಡ. ಅಂತೆಯೇ ಪಸ್ಸೆರಿಯವರು ರೇಖಾಚಿತ್ರವು ವರ್ಣಚಿತ್ರ ಕಲೆಯ ಪಿತಾಮಹ ಎಂದು ಹೇಳಿದ್ದಾರೆ.

ನಮ್ಮ ಭಾರತೀಯ ಚಿತ್ರಕಲೆ ಮೂಲತಃ ರೇಖಾ ಪ್ರಧಾನವಾದ ಶೈಲಿಯನ್ನು ಹೊಂದಿದೆ. ಕಲಾವಿದನೊಬ್ಬನನ್ನು ನಿಜಕ್ಕೂ ಬಯಲು ಮಾಡುವದು ರೇಖಾ ಚಿತ್ರಗಳೇ. ಅದು ಅವನ ಸಹಿ ಇದ್ದಂತೆ ಎನ್ನುವ ಮಾತುಂಟು. ಕಲಾವಿದನೊಬ್ಬನನ್ನು ಅರ್ಥ ಮಾಡಿಕೊಳ್ಳಲು ಅವನ ರೇಖಾ ಚಿತ್ರಗಳನ್ನು ವಿಶ್ಲೇಷಿಸುವುದು ಬಹುಮುಖ್ಯ. ಅಂತೆಯೇ ಭಾರತೀಯ ಕಲೆಗಳಲ್ಲಿ ರೇಖೆಗಳೇ ಸಂವಹನಕ್ಕೆ ತಳಹದಿ. ಪುರಾತನ ಗ್ರಂಥಗಳಲ್ಲಿ ಹಸ್ತಲೇಖ ರೇಖಾಪ್ರಧಾನ, ವರ್ತನ ಮುಂತಾದ ತಾಂತ್ರಿಕ ವಿಧಾನಗಳು ವರ್ಣಿತವಾಗಿವೆ. ಚಿತ್ರ ರೇಖೆಯ ಸಿದ್ಧಿಯನ್ನು ಪ್ರಶಂಸಿದ ಸಂದರ್ಭಗಳಿವೆ. ದೃಢವಾಗಿ ಲಲಿತವಾಗಿ ರಚಿತವಾದ ರೇಖಾ ಚಿತ್ರಕ್ಕೆ ಬಹುಮಾನ್ಯತೆ ಇತ್ತು. ಈ ರೇಖೆಗಳಲ್ಲಿ ಲಯ, ಆನಂದ, ಅನುಕಂಪ, ವಿಸ್ಮಯ ಮೊದಲಾದ ಭಾವಸಂಚಾರ, ಜೀವನೋಲ್ಲಾಸದ ಉನ್ಮಾದ ಹಾಗೆಯೇ ಭಯ, ಕಾತರ, ನೋವು ಇಂಥ ಭಾವಗಳು ಸಹಜ ಎನಿಸುವ ಅಭಿವ್ಯಕ್ತಿಯನ್ನು ಕಾಣುತ್ತೇವೆ. ಅದು ಕಲಾವಿದನ ಮಾನಸಿಕ ಉದ್ದೇಶವನ್ನು ಅದರ ತೀವ್ರತೆಯೊಂದಿಗೆ ಪರಿಶುದ್ಧ ಸ್ಥಿತಿಯಲ್ಲಿ ವ್ಯಕ್ತಪಡಿಸುವುದಷ್ಟೇ ಅಲ್ಲದೇ ಚಿತ್ರ ಸೃಷ್ಟಿಕಾಲದ ಅವನ ಮನಃಸ್ಥಿತಿಯನ್ನು, ಚಿತ್ರವೃತ್ತಿಯನ್ನು ಭಾವನೆಗಳನ್ನು ಆ ಕ್ಷಣಕ್ಕೆ ನಮ್ಮ ಮುಂದೆ ತೆರೆದಿಡುತ್ತವೆ, ಎನ್ನುವುದು ಗಮನಾರ್ಹವಾಗಿದೆ.

ರೇಖೆಗೆ ಸಂಗೀತದಂತೆ ಲಯಬದ್ಧತೆ ಇದೆ. ನೃತ್ಯದಂತೆ ಛಂದೋಬದ್ಧ ಚಲನೆ ಇದೆ. ಕಾವ್ಯದಂತೆ ಅಂತರ ಪ್ರೇರಣೆ ಇದೆ. ರೇಖೆಗಳ ಸಮ್ಮಿಲನದಲ್ಲಿ ಸಾಂಗತ್ಯವಿದೆ. ಇಂತಹ ರೇಖೆಗಳ ಸಮ್ಮಿಲನದಿಂದ ಸ್ಪಷ್ಟವಾದ ಆಕೃತಿ ನಿಖರವೆನಿಸುವ ವಿವರಗಳು, ಕಲಾವಿದನ ಅಂತರಿಕ ಕಲಾ ಪ್ರಜ್ಞೆಯನ್ನು ಸಹಜವಾಗಿ ವೀಕ್ಷಕ ಗುರುತಿಸಬಹುದಾದಂತಹ ರೇಖಾ ವಿನ್ಯಾಸ ಡಿ. ವಿ. ಹಾಲಭಾವಿಯವರದಾಗಿದೆ. ಸೌಂದರ್ಯ ಪ್ರಜ್ಞೆಯನ್ನು ಹಿನ್ನಲೆಯಲ್ಲಿ ನಿಸರ್ಗ, ವ್ಯಕ್ತಿ ಸಮಾಜ ಇವುಗಳ ಸಂಬಂಧಗಳ ಸೂಕ್ಷ್ಮತೆಯನ್ನು ಅವರ ಚಿತ್ರಗಳ ಭಾವ ಸಂಚಾರದ ಮೂಲಕ ಗುರುತಿಸುತ್ತೇವೆ.

ಹಾಲಭಾವಿಯವರ ಕಲಾಕೃತಿಗಳಲ್ಲಿ ಅಸಪ್ಪವಾದ ರೇಖೆಗಳ ಮುಖಾಂತರ ಚಿತ್ರರಚನೆ ಮಾಡಿದ್ದಾರೆ. ಇಲ್ಲಿ ರೇಖೆಗಳನ್ನು ಮಾತ್ರ ಬಳಸಿಕೊಂಡು ಕೆಲವು ಕಲಾಕೃತಿಗಳನ್ನು ಚಿತ್ರಿಸಿ ಅವುಗಳಿಗೆ ಜೀವ ತುಂಬಿದ್ದಾರೆ. ಇನ್ನೂ ಕೆಲವು ಕಲಾಕೃತಿಗಳಿಗೆ ರೇಖೆಗಳ ಮುಖಾಂತರ ವರ್ಣಛಾಯೆಯನ್ನು ನೀಡಿ ಕಲಾಕೃತಿಗಳಿಗೆ ಮೆರಗು ನೀಡಿದ್ದಾರೆ. ಹಾಲಭಾವಿಯವರು ಕಲಾಕೃತಿಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ರೇಖೆಗಳ ಸ್ಪಷ್ಟತೆಯನ್ನು ಪೂರ್ಣವಾಗಿ ಕಾಣಬಹುದು.

ಬಿಂದು ಶೂನ್ಯದ ಸಂಕೇತ. ಆದರೆ ಬಿಂದು ರೇಖೆಯಾಗಿ ಸಾಗುವ ಅದು ಅನಂತತೆಗೂ ಸಂಕೇತವಾಗುತ್ತದೆ. ರೇಖೆಯ ಗತಿ ಕಲಾವಿದನ ಸೃಜನಶೀಲತೆಯನ್ನನುಸರಿಸುವಾಗ ಅದರಲ್ಲಿ ವ್ಯಕ್ತವಾಗುವ ಭಾವಸಂಚಾರವೂ ಅನಂತವೆನಿಸುವುದು. ಹೃದಯ ಸಂವಾದಿಯಾಗುವ ಅಂತಹ ರೇಖೆ, ವೀಕ್ಷಕನ ಹೃದಯವನ್ನು ತಟ್ಟುತ್ತದೆ. ಆನಂದಾನುಭೂತಿಗೆ ಕಾರಣವಾಗುತ್ತದೆ. ರೇಖಾಚಿತ್ರ ಅಭಿವ್ಯಕ್ತಿ ಮಾಧ್ಯಮದಲ್ಲಿ ಅತ್ಯಂತ ಪಾರದರ್ಶಕವಾದುದು.

ಅಂತೆಯೇ ವಿಷ್ಣುಧರ್ಮೋತ್ತರ ಪುರಾಣದಲ್ಲಿ "ರೇಖಾಂ ಪ್ರಶಂಸತಾಚಾರ್ಯಃ" ಎಂದು ರೇಖೆಗಳು ನುರಿತ ನಿಪುಣ ಕಲಾವಿದನೊಬ್ಬನ ಅತ್ಯುನ್ನತ ಸಾಧನೆ ಎನ್ನುವ ಪ್ರಶಂಸೆ ಇದೆ.

ಹಾಲಭಾವಿಯವರ ಚಿತ್ರಕಲೆಯಲ್ಲಿ ರೇಖಾಚಿತ್ರಗಳು ಅಭ್ಯಾಸ ಸಂದರ್ಭ ಹಾಗೂ ಸಂಯೋಜನಾ ಕೃತಿಗಳ ಪೂರ್ವಸಿದ್ಧತೆಗೋಸ್ಕರವಾಗಿ ಚಿತ್ರಿಸುವಂಥವುಗಳಾಗಿದ್ದವು. ಅನೇಕ ಸಾಮಗ್ರಿಗಳನ್ನು, ಮಾನವರ ವಿವಿಧ ಹಾವ ಭಾವಗಳನ್ನು ಹಾಗೂ ವಿವಿಧ ಆಕೃತಿಗಳ ನೆರಳು ಬೆಳಕನ್ನು ರೇಖಾಚಿತ್ರದಿಂದ ಯಥೇಚ್ಛವಾಗಿ ಆಯ್ದು ಸಂಯೋಜನೆಗೆ ಹೊಂದಾಣಿಕೆಯಾಗಿ ಜೋಡಿಸಿ, ಪುನಃ ಕಲಾಕೃತಿರಚಿಸಿ ವರ್ಣಚಿತ್ರಗಳಾಗಿ ಚಿತ್ರಿಸುವ ಪದ್ಧತಿ ಇತ್ತು.

ರೇಖೆ ಸಮತಲದ ಮೇಲೆ ಮೂರು ಆಯಾಮಗಳ ಸೂಚನೆ ಇಲ್ಲದೆಯೂ ರೂಪ ತಾಳಬಹುದು, ಲಯಬದ್ಧವಾಗಿ ಹರಿಯುವ ಮೂಲಕ ಅಥವಾ ಅಂಕುಡೊಂಕಾಗಿ, ವಕ್ರವಾಗಿ ತಡೆ ತಡೆದು, ನಿಂತೂ ಹೋಗಬಹುದು. ದಪ್ಪ, ತಿಳು ನವಿರಾಗಬಹುದು. ಅಥವಾ ಬೆಳಕಿನ, ನೆರಳಿನ ಸೂಚನೆಯನ್ನು ನೀಡುವಂತೆ ಕಂಡು ಮರೆಯಾಗಬಹುದು, ತುಂಡಾಗಬಹುದು. ಬಣ್ಣಗಳ ತೀಕ್ಷಣತೆಗಳಿಗನುಸಾರವಾಗಿ ಹೀಗಾಗಿ ರೇಖೆಗೆ ಅದರದೇ ಚೈತನ್ಯವಿದೆ. ವೈವಿಧ್ಯಮಯ ವರ್ತನೆ ಇದೆ. ಸ್ವತಂತ್ರ ವ್ಯಕ್ತಿತ್ವವಿದೆ ಎನ್ನುವಲ್ಲಿ ಎರಡು ಮಾತಿಲ್ಲ.

ಇಂತಹ ಸ್ವತಂತ್ರ ವ್ಯಕ್ತಿತ್ವ ಹೊಂದಿದ ರೇಖೆಗಳನ್ನು ಹಾಲಭಾವಿಯವರು ತಮ್ಮ ಕಲಾಪ್ರತಿಭೆಗೆ ತಕ್ಕಂತೆ ರೂಪಕೊಟ್ಟಿದ್ದಾರೆ, ಈ ರೇಖಾ ಚಿತ್ರಗಳು ಪೆನ್ಸಿಲ್, ಇಂಕ್ ಹಾಗೂ ಚಾರ್ಕೋಲನಿಂದ ರಚಿಸಲ್ಪಟ್ಟಿದ್ದಾರೆ. ಈ ರೀತಿ ಚಿತ್ರಿಸಿದ ರೇಖಾ ಚಿತ್ರಗಳಲ್ಲಿ ಭಾವಚಿತ್ರ ಸಂಯೋಜನಾ ಚಿತ್ರಗಳು ಹೀಗೆ ವೈವಿಧ್ಯಮಯ, ವೀಕ್ಷಣಗಳನ್ನೊಳಗೊಂಡ ರೇಖಾ ಚಿತ್ರಗಳನ್ನು ಇಲ್ಲಿ ಕಾಣುತ್ತೇವೆ. ಅಲ್ಲದೆ ಅವರು ದೈನಂದಿನ ರೂಢಿಗಾಗಿ ಅನೇಕ ಸ್ಕೆಚ್, ರೇಖಾಚಿತ್ರಗಳನ್ನು ಅವರೂ ರಚಿಸುತ್ತಲೇ ಬಂದಿದ್ದರು. ಕಲಾವಿದನ ಕಲೆಯ ಅಭಿವ್ಯಕ್ತಿ ಕುರಿತು ತುಡಿತಕ್ಕೆ ಸಮಯ, ಪರಿಕರಗಳ ನಿರ್ಬಂಧವಿಲ್ಲ, ಯಾವಾಗಲೂ ಅವರ ಹತ್ತಿರ ಸ್ಕೇಚ್ ಬುಕ್ ಇದ್ದೇ ಇರುತ್ತಿತ್ತು. ಆ ಒಂದು ಕ್ಷಣ ಗಮನ ಸೆಳೆಯುವ ಯಾವುದೇ ವಸ್ತು ವಿಷಯವಿರಲಿಲ್ಲ. ಆಗ ಕಲಾವಿದನಲ್ಲಿಯ ಸೃಜನಶೀಲ ಪ್ರಜ್ಞೆ ಜಾಗೃತವಾಗಿ ತನ್ನಷ್ಟಕ್ಕೆ ತಾನೆ ರೇಖೆಗಳ ಮುಖಾಂತರ ಅಭಿವ್ಯಕ್ತಗೊಳ್ಳುತ್ತದೆ. ಹಾಲಭಾವಿಯವರು ಎಲ್ಲ ರೇಖಾಚಿತ್ರಗಳು ಈ ಎಲ್ಲ ಆಯಾಮಗಳನ್ನು ಪಡೆದುಕೊಂಡೇ ರಚನೆಯಾಗಿವೆ.

## I. ರೇಖಾಚಿತ್ರಗಳು

**೧. ರೇಖಾ ಭಾವ ಚಿತ್ರಗಳು** : ೧. ೧೯೪೪ರಲ್ಲಿ ಹಾಲಭಾವಿಯವರು ಯುವಕನ ಒಂದು ಭಾವಚಿತ್ರವನ್ನು ಎದುರು ನೋಟದಲ್ಲಿ ಇಂಕ ಮಾಧ್ಯಮದಲ್ಲಿ ಚಿತ್ರಿಸಿದ್ದಾರೆ. ಈ ಕಲಾಕೃತಿಯು ತುಂಬಾ ನೈಜವಾಗಿ ಮೂಡಿ ಬಂದಿದೆ. ರೇಖೆಗಳ ಅದ್ಭುತತೆ ಎದ್ದು ಕಾಣುತ್ತದೆ. ಅಲ್ಲದೆ ನೆರಳು ಬೆಳಕು ಯಥೇಚ್ಛವಾಗಿ ಕೃತಿಯಲ್ಲಿ ಮೂಡಿ ಬಂದಿದೆ. ಕೊರಳಿಗೆ ಹಾಕಿದ ನೆಕ್ ಟೈ, ಶರ್ಟಿನ ವಿನ್ಯಾಸ ತುಂಬಾ ಅದ್ಭುತವಾಗಿ ಈ ಕಲಾಕೃತಿಯಲ್ಲಿ ಮೂಡಿ ಬಂದಿದೆ.

೨. ೧೯೪೪ರಲ್ಲಿ ಹಾಲಭಾವಿಯವರು ಮಹಿಳೆಯ ಭಾವಚಿತ್ರವನ್ನು ಇಂಕ ಮಾಧ್ಯಮದಲ್ಲಿ ಮೇಲ್ಮುಖವಾಗಿ ನೋಡುತ್ತಿರುವ ಭಾವ ಚಿತ್ರವನ್ನು ರಚಿಸಿದ್ದಾರೆ. ಇಲ್ಲಿ ರೇಖೆಗಳನ್ನು ವೇಗವಾಗಿ ಲಂಬಾಕಾರ ಮತ್ತು ಓರೆ ಆಕಾರದಲ್ಲಿ ರೇಖೆಗಳನ್ನು ಎಳೆದು ಅದರಲ್ಲಿ ಬೆಳಕಿನ ಛಾಯೆಯನ್ನು ಅದ್ಭುತವಾಗಿ ಚಿತ್ರಿಸಿದ್ದಾರೆ. ಇಲ್ಲಿ ಕಣ್ಣುಗಳ ಮೇಲ್ನೋಟದ ದೃಶ್ಯ ನೈಜವಾಗಿ ಮೂಡಿ ಬಂದಿದೆ.

೩. ೧೯೪೫ ರಲ್ಲಿ ಯಜಮಾನನ ಭಾವಚಿತ್ರವನ್ನು ಪೆನ್ಸಿಲ್ ಮಾಧ್ಯಮದಲ್ಲಿ ಎದುರಿಗೆ ಮುಖ ಮಾಡಿದ ಕಲಾಕೃತಿಯನ್ನು ರಚಿಸಿದ್ದಾರೆ, ಆಗಿನ ಕಾಲದಲ್ಲಿ ಪೇಟಾಸುತ್ತು ಸರ್ವಸಾಮಾನ್ಯವಾಗಿತ್ತು. ಮುಖದ ಮೇಲೆ ದಪ್ಪವಾದ ಮೀಸೆ, ಅಗಲವಾದ ಮುಖ, ಮತ್ತು ನೆರಳ ಬೆಳಕನ್ನು ಸಮಾನವಾಗಿ ಚಿತ್ರಿಸಿದ್ದಾರೆ.

೪. ೧೯೩೮ ರಲ್ಲಿ ಮಹಿಳೆಯ ಓರೆ ಮುಖಮಾಡಿರುವ ಭಾವಚಿತ್ರವನ್ನು ಪೆನ್ಸಿಲ್ ಮಾಧ್ಯಮದಲ್ಲಿ ಚಿತ್ರಿಸಿದ್ದಾರೆ. ಇಲ್ಲಿ ಕಣ್ಣುಗಳ ದೃಷ್ಟಿ ಮುಖದ ಭಾವನೆ ಚನ್ನಾಗಿ ಮೂಡಿ ಬಂದಿದೆ. ಅಲ್ಲದೆ ನೆರಳು ಬೆಳಕನ್ನು ಕೇವಲ ಬೀಸುಗಳಿಂದ ಬಳಸಿಕೊಂಡಿದ್ದಾರೆ.

೫. ೧೯೩೮ ರಲ್ಲಿ ರಚಿಸಿದ ಮುದುಕನ ಓರೆ ಮುಖ ಮಾಡಿರುವ ಭಾವಚಿತ್ರವನ್ನು ಪೆನ್ಸಿಲ್ ಮಾಧ್ಯಮದಲ್ಲಿ ಚಿತ್ರಿಸಿದ್ದಾರೆ, ತಲೆಗೆ ಪೇಟವನ್ನು ಸುತ್ತಿದ್ದು ಮುಖದಲ್ಲಿ ಸಿಟ್ಟಿನ ಗಾಂಭೀರ್ಯತೆಯನ್ನು ಅದ್ಭುತವಾಗಿ ಚಿತ್ರಿಸಿದ್ದಾರೆ, ನೆರಳು, ಬೆಳಕನ್ನು ಗಾಢವಾಗಿ ಚಿತ್ರಿಸಿದ್ದಾರೆ.

೬. ೧೯೩೦ ರಲ್ಲಿ ಈ ಭಾವಚಿತ್ರವನ್ನು ಕಪ್ಪು ಚಾರ್ಕೋಲ ಮಾಧ್ಯಮದಲ್ಲಿ ರಚಿಸಿದ್ದಾರೆ. ಮುಖ ೨/೪ ಅಂಶ ಭಾಗದಲ್ಲಿ ಚಿತ್ರಿಸಿದ್ದಾರೆ. ನೆರಳು ಬೆಳಕಿನ ಛಾಯೆಯನ್ನು ಅತ್ಯಂತ ಗಾಢವಾಗಿ ಚಿತ್ರಿಸಿದ್ದಾರೆ. ಕಣ್ಣುಗಳ ದೃಷ್ಟಿ ಮತ್ತು ಮೂಗಿನ ಮೇಲೆ ಹೈಲೈಟ್ ನೀಡಿದ್ದಾರೆ. ಹಣೆಯಲ್ಲಿ ಉಬ್ಬುವಿಕೆ ಮೇಲೆ ನೆರಳ ಬೆಳಕು ಗಾಢವಾಗಿ ಚಿತ್ರಿಸಿದ್ದಾರೆ, ಇಲ್ಲಿ ಟೊಪ್ಪಿಗೆ ಹಾಕಿರುವುದು ಮತ್ತು ಅದರಲ್ಲಿ ಸೂಕ್ಷ್ಮತೆಯ ನೆರಳು ಬೆಳಕು ನೀಡಿದ್ದಾರೆ.

೭. ೧೯೬೦ ರಲ್ಲಿ ಲಂಬಾಣಿಯ ೨/೪ ಅಂಶದ ಭಾಗದಲ್ಲಿ ಚಾರ್ಕೋಲ ಮಾಧ್ಯಮದಲ್ಲಿ ಪೋಸ್ಟರ ಮಾಧ್ಯಮ ಮತ್ತು ಬೂದಿ ಬಣ್ಣದ ಹಾಳೆಯಲ್ಲೂ ಈ ಕಲಾಕೃತಿ ರಚಿಸಿದ್ದು ವಿಶೇಷವಾಗಿದೆ. ಮುಖದ ಹಾವ ಭಾವ ನೈಜವಾಗಿ ಮೂಡಿ ಬಂದಿದೆ. ಕೊರಳಲ್ಲಿ ಆಭರಣಗಳನ್ನು ಪೋಸ್ಟರ ಕಲರಿನ ಬಿಳಿ ಬಣ್ಣದಲ್ಲಿ ಚಿತ್ರಿಸಿದ್ದಾರೆ. ಈ ಕಲಾಕೃತಿಯು ಮಿಶ್ರಮಾಧ್ಯಮದಲ್ಲಿ ರಚನೆ ಮಾಡಿದ್ದಾರೆ.

೮. ೧೯೬೧ ರಲ್ಲಿ ಯುವತಿಯ ಭಾವಚಿತ್ರವನ್ನು ಎದುರು ನೋಟದಲ್ಲಿ ಪೆನ್ಸಿಲ್ ಮಾಧ್ಯಮದಲ್ಲಿ ಚಿತ್ರಿಸಿದ್ದಾರೆ. ಈ ಭಾವಚಿತ್ರವು ಹಾಲಭಾವಿಯವರ ಸ್ಕೆಚ್ ಬುಕ್‌ನಲ್ಲಿ ಚಿತ್ರಿಸಿದ್ದಾರೆ. ಈ ಭಾವಚಿತ್ರದಲ್ಲಿ ಪ್ರತಿಯೊಂದು ಅಂಶವನ್ನು ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ. ಹಣೆಯ ಮೇಲಿನ ಕುಂಕುಮ ಮತ್ತು ಹಿಂದೆ ಜಡೆಯನ್ನು ಪೂರ್ಣ ಪ್ರಮಾಣದಲ್ಲಿ ಚಿತ್ರಿಸಿಲ್ಲವಾದರೂ ಅದನ್ನು ಅಲ್ಲಿ ಮರ್ಜ ಮಾಡಿದ್ದಾರೆ. ಮುಖದಲ್ಲಿ ನೆರಳು ಬೆಳಕನ್ನು ಸ್ಪಷ್ಟವಾಗಿ ಚಿತ್ರಿಸಿದ್ದಾರೆ.

೯. ೧೯೬೧ ರಲ್ಲಿ ಮಹಿಳೆಯ ಭಾವಚಿತ್ರವನ್ನು ಪೆನ್ಸಿಲ್ ಮಾಧ್ಯಮದಿಂದ ಚಿತ್ರಿಸಿದ್ದಾರೆ. ಕಣ್ಣುಗಳ ನೋಟ, ಮೂಗು, ಕೊರಳಲ್ಲಿ ಮಾಂಗಲ್ಯ, ಬಿಳಿ ಕೇಶಗಳನ್ನು, ಇಲ್ಲಿ ನೈಜವಾಗಿ ಚಿತ್ರಿಸಿದ್ದಾರೆ. ಸ್ವಲ್ಪ ಪ್ರಮಾಣದಲ್ಲಿ ನೆರಳು, ಬೆಳಕಿನ ಛಾಯೆಯನ್ನು ನೀಡಿ ಕಲಾಕೃತಿಗೆ ಮೆರಗು ನೀಡಿದ್ದಾರೆ.

೧೦. ೧೯೩೬ ರಲ್ಲಿ ಪ್ಲಾಸ್ಟರ್ ಆಫ್ ಪ್ಯಾರಿಸ್‌ನಲ್ಲಿ ಭಾವಚಿತ್ರವನ್ನು ಸೀಸ ಪುಡಿಯಿಂದ ಹಾಳೆಯ ಮೇಲೆ ಚಿತ್ರಿಸಿದ್ದಾರೆ. ನೇರವಾಗಿ ಮಾಡಲ್‌ನ ಭಾವಚಿತ್ರ ರಚಿಸುವುದಕ್ಕಿಂತ ಮೊದಲು ಪೂರ್ವಭಾವಿ ಅಭ್ಯಾಸವನ್ನು ಮಾಡಿರುವುದು ಹಾಲಭಾವಿಯವರಲ್ಲಿ ಕಂಡು ಬರುತ್ತದೆ. ಈ ಚಿತ್ರದಲ್ಲಿ ಕಣ್ಣುಗಳು ಕೆಳಗಡೆ ದೃಷ್ಟಿ ಹಾಯಿಸಿರುವುದು ಮೇಲ್ಗಡೆ, ಟೋಪಿಯನ್ನು ಧರಿಸಿರುವುದು, ಮತ್ತು ವಸ್ತು ವಿನ್ಯಾಸದಲ್ಲಿ ಗಾಢವಾದ ನೆರಳು ಬೆಳಕನ್ನು ತೋರಿಸಿದ್ದಾರೆ.

೧೧. ೧೯೩೬ ರಲ್ಲಿ ಪ್ಲಾಸ್ಟರ್ ಆಫ್ ಪ್ಯಾರಿಸ್ ಭಾವಚಿತ್ರವನ್ನು ಸೀಸದ ಪುಡಿ ಮಾಧ್ಯಮದಲ್ಲಿ ರಚಿಸಿದ್ದಾರೆ. ಈ ಕಲಾಕೃತಿಯ ಎಡ ಪಾಶ್ವ ನೋಟದಲ್ಲಿ ನೋಡುತ್ತಿರುವ, ಎಡ ಕಣ್ಣಿನ ಭಾಗದಲ್ಲಿ, ಗಾಢವಾದ ನೇರಳೆ ಛಾಯೆಯನ್ನು ತೋರಿಸಿದ್ದಾರೆ, ಮತ್ತು ಕೇಶಗಳ ವಿನ್ಯಾಸ, ದೇಹದ ಭಾಗವನ್ನು ಕಲ್ಲಿನ ಮೂರ್ತಿಯ ಮೈ ಹೋಲಿಕೆಯನ್ನು ನೀಡಿದ್ದಾರೆ.

೧೨. ೧೯೩೬ ರಲ್ಲಿ ಪ್ಲಾಸ್ಟರ ಆಫ್ ಪ್ಯಾರೀಸ್‌ನಲ್ಲಿ ಕೆಳಗಡೆ ಮುಖ ಮಾಡಿರುವ ಮುದುಕನ ಭಾವಚಿತ್ರವನ್ನು ಸೀಸದ ಪುಡಿಯ ಮಾಧ್ಯಮದಲ್ಲಿ ಚಿತ್ರಿಸಿದ್ದಾರೆ, ಈ ಚಿತ್ರದಲ್ಲಿ ಮುಖ ಕೆಳಗಡೆ ಇದ್ದರೂ ಕಣ್ಣುಗಳ ದೃಷ್ಟಿ ಮೇಲೆ ನೋಡುತ್ತಿರುವುದು ಅದ್ಭುತವಾಗಿದೆ. ಹಣೆಯ ಮೇಲಿನ ನೀರಿಗೆಗಳು, ಮುಖದ ಮೇಲೆ ಕೇಶ ವಿನ್ಯಾಸದಲ್ಲಿಯ ನೆರಳು ಬೆಳಕನ್ನು ಅತಿ ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ.

೧೩. ೧೯೩೬ ರಲ್ಲಿ ಪ್ಲಾಸ್ಟರ ಆಫ್ ಪ್ಯಾರೀಸ್‌ನ ಮಹಿಳೆಯ ಎಡ ಪಾರ್ಶ್ವನೋಟದಲ್ಲಿ ನೋಡುತ್ತಿರುವ ಭಾವಚಿತ್ರವನ್ನು ಸೀಸದ ಪುಡಿ ಮಾಧ್ಯಮದಲ್ಲಿ ರಚಿಸಿದ್ದಾರೆ. ಮೂಗಿನ ಎಡಭಾಗದಲ್ಲಿ, ಕತ್ತಿನ ಎಡಭಾಗದಲ್ಲಿ, ಗಾಢವಾದ ನೆರಳಿನ ಛಾಯೆಯನ್ನು ನೀಡಿದ್ದಾರೆ. ಅಲ್ಲದೆ ಕಣ್ಣಿಗೆ ದೃಷ್ಟಿಯನ್ನು ಎಡ ಭಾಗಕ್ಕೆ ನೋಡುತ್ತಿರುವಂತೆ ಚಿತ್ರಿಸಿದ್ದಾರೆ.

೧೪. ೧೯೩೬ ರಲ್ಲಿ ಮಹಿಳೆಯ ಭಾವಚಿತ್ರವನ್ನು ಸೀಸದ ಪುಡಿಯಲ್ಲಿ ಚಿತ್ರಿಸಿದ್ದಾರೆ. ಅಗಲವಾದ ಮುಖ, ಕಣ್ಣುಗಳು, ಮೂಗು, ಹಾಗೂ ಕುಂಕುಮ ಎದ್ದು ಕಾಣುವಂತಿವೆ. ಇಲ್ಲಿ ಗಾಢವಾದ ನೆರಳಿನ ಛಾಯೆಯನ್ನು ಚಿತ್ರಿಸಿ ಸ್ವಲ್ಪ ಪ್ರಮಾಣದಲ್ಲಿ ಬೆಳಕನ್ನು ತೋರಿಸಿದ್ದಾರೆ. ಆದ್ದರಿಂದ ಈ ಕೃತಿಗೆ ನೆರಳು, ಬೆಳಕಿನ ಸಮತೋಲನವನ್ನು ತೋರಿಸಿದಂತೆ ಕಾಣುತ್ತದೆ.

**ಪೂರ್ಣಭಾವ ರೇಖಾಚಿತ್ರ :** ೧೫. ೧೯೩೭ ರಲ್ಲಿ ಕೊಡವನ್ನು ಹಿಡಿದುಕೊಂಡು ಕುಳಿತಿರುವ ಮಹಿಳೆಯು ಚಿತ್ರವನ್ನು ಮಿಶ್ರಮಾಧ್ಯಮದಲ್ಲಿ ಚಿತ್ರಿಸಿದ್ದಾರೆ. ಮುಖದ ಮೇಲಿನ ಗಾಂಭೀರ್ಯತೆ, ಮತ್ತು ಸೀರೆಯ ನೀರಗೆಯ ವಿನ್ಯಾಸ, ಕೈ ಬೆರಳುಗಳು, ಹಾಗೂ ಕೊಡ ಇವುಗಳೆನ್ನೆಲ್ಲ ಭಾವಚಿತ್ರದಲ್ಲಿ ಆಯ್ದುಕೊಂಡಿದ್ದು ವಿಶೇಷವಾಗಿದೆ. ಈ ಕೃತಿಯಲ್ಲಿ ನೆರಳು ಬೆಳಕನ್ನು ಸಮತೋಲನವಾಗಿ ಚಿತ್ರಿಸಿದ್ದಾರೆ.

**೨. ಸಂಯೋಜನಾ ರೇಖಾಚಿತ್ರಗಳು**

**೧. ಧಾರ್ಮಿಕ ಸನ್ನಿವೇಶ :** ೧೯೪೧ರಲ್ಲಿ ರಚಿಸಿದ ಈ ಕಲಾಕೃತಿಯನ್ನು ಲಿನೋದಲ್ಲಿ ಕಪ್ಪು, ಬಿಳುಪು, ಚಿತ್ರಿಸಲಾಗಿದೆ. ಈ ಕಲಾಕೃತಿಗೆ ಗ್ರಾಫಿಕ್ ಮಾಧ್ಯಮದ ಕಲಾಕೃತಿ ಎನ್ನಬಹುದು. ೩ ಗೋರಪ್ಪಗಳು ಒಂದು ಧಾರ್ಮಿಕ ಮರಕ್ಕೆ ಭೇಟಿ ನೀಡಿರುವ ಸನ್ನಿವೇಶವಿದೆ. ಎಡಭಾಗದಲ್ಲಿ ಬ್ರಾಹ್ಮಣ ಪೂಜಾರಿಗಳು ಬಲಭಾಗದಲ್ಲಿ ಸೇವಕಿಯರು ಪೂಜಾ ಸಾಮಗ್ರಿಗಳನ್ನು ಹಿಡಿದು ನಿಂತಿರುವ ದೃಶ್ಯವಿದೆ. ಗೋರಪ್ಪಗೆ ವಸ್ತ್ರ ವಿನ್ಯಾಸ, ಅಲ್ಲದೆ ನೆರಳು ಬೆಳಕಿನ ಸ್ಪಷ್ಟತೆ ಇದೆ. ಮತ್ತೆ ಬ್ರಾಹ್ಮಣ ಪೂಜಾರಿಗಳ ವಸ್ತ್ರ ವಿನ್ಯಾಸ ಮತ್ತು ಏನನ್ನೋ ಹೇಳುವ ಭಂಗಿ ಅದ್ಭುತವಾಗಿ ಮೂಡಿಬಂದಿದೆ. ಸೇವಕಿಯರ ಅಲ್ಪ ಪ್ರಮಾಣದ ವಸ್ತ್ರ ವಿನ್ಯಾಸ ಅವರ ಹಾವ ಭಾವ ಅದ್ಭುತವಾಗಿ ಮೂಡಿಬಂದಿದೆ. ಒಟ್ಟಾರೆ ಕಲಾಕೃತಿಯನ್ನು ಆವರಿಸಿದಾಗ ಚಲನವಲನವನ್ನು ಈ ಕಲಾಕೃತಿಯಲ್ಲಿ ತೋರಿಸಿದ್ದು, ಹಾಲಭಾವಿಯವರ ಕೈ ಚಳಕ ಎನ್ನಬಹುದು.

**೨. ಮರಳಿ ಮನಗೆ :** ೧೯೩೮ರಲ್ಲಿ ರಚಿಸಿದ ಈ ಕಲಾಕೃತಿಯು ಸೀಸದ ಪುಡಿ ಮಾಧ್ಯಮದಲ್ಲಿ ಇದೆ. ಇಬ್ಬರು ಯುವತಿಯರು ಮತ್ತು ವಯಸ್ಸಾದ ಮುದುಕಿ ಹೊಲದಿಂದ ಕೆಲಸವನ್ನು ಮುಗಿಸಿಕೊಂಡು ಮರಳಿ ಮನಗೆ ಹೋಗುತ್ತಿದ್ದಾರೆ. ಜೊತೆಯಲ್ಲಿ ನಾಯಿಯು ಕೂಡಾ ಅವರನ್ನು ಹಿಂಬಾಲಿಸುತ್ತಿದೆ. ತಲೆಯ ಮೇಲಿನ ಗಂಟು ಮತ್ತು ಬುಟ್ಟಿ ಅವರ ವಸ್ತ್ರ ವಿನ್ಯಾಸ ಗಾಢವಾದ ನೆರಳು ಬೆಳಕಿನ ವಿನ್ಯಾಸ ಅದ್ಭುತವಾಗಿ ಮೂಡಿಬಂದಿದೆ. ಹಿಂದೆ ಅಜ್ಜಿಯ ಚಿತ್ರವು ಸ್ಪಷ್ಟತೆಯಿಂದ ಕೂಡಿದೆ. ಎಡಗೈಯಲ್ಲಿ ಕುಡಗೋಲು ಹಿಡಿದಿರುವುದು. ಬಲಗೈಯಲ್ಲಿ ಕೋಲು ಹಿಡಿದು ಉರುಕೋಲು ಊರಿಕೊಂಡು ಹೋಗುತ್ತಿರುವ ದೃಶ್ಯ ಅಜ್ಜಿಯನ್ನು ಗಮನಿಸಿದಾಗ ೭೦ರಿಂದ–೮೦ವರ್ಷದ ಅಜ್ಜಿಯೆಂದು ಕಲಾಕೃತಿ ಸ್ಪಷ್ಟವಾಗಿದೆ. ಹಿನ್ನಲೆಗೆ ಪ್ರಾವಿಣ್ಯತೆ ಇಲ್ಲದಿದ್ದರೂ ಮೂಲ ಕಲಾಕೃತಿಗಳಿಗೆ ಇಲ್ಲಿ ಪ್ರಮುಖ್ಯತೆಯನ್ನು ನೀಡಿದ್ದಾರೆ.

**II. ವರ್ಣಚಿತ್ರಗಳು**

**ಉದ್ಯಾನವನದಲ್ಲಿ ಸಾರೋಟ :** ಪೋಸ್ಟರ್‌ವರ್ಣದ ಈ ಕಲಾಕೃತಿಯಲ್ಲಿ ಹಿಂದೆ ಗಾಡಿಯನ್ನು ಎಳೆದುಕೊಂಡು ಒಂದು ಕುದುರೆ ಓಡುತ್ತಿರುವ ದೃಶ್ಯವಿದೆ. ಇಬ್ಬರು ಯುವಕರು ಅದನ್ನು ನಿಭಾಯಿಸುವ ದೃಶ್ಯವಿದೆ. ಮುಂದೆ ಎಡಭಾಗದಲ್ಲಿ ಯುವಕನೊರ್ವನನ್ನು ಕೂತುಹಲದಿಂದ ವಿಕ್ಷಿಸುವ ದೃಶ್ಯವಿದೆ. ಈ ಕಲಾಕೃತಿಯಲ್ಲಿ ಹಸಿರು ಮತು ಕಡು ವರ್ಣ ಲೇಪನವಿದೆ. ಎಡ ಮತ್ತು ಬಲಭಾಗದಲ್ಲಿ ಉದ್ಯನೆಯ ಅಶೋಕ ಮರಗಳು ಇವೆ. ಈ

ಕಲಾಕೃತಿಯಲ್ಲಿ ಗಮನಿಸಿದಾಗ ಯಥಾದರ್ಶನದ ಸ್ಪಷ್ಟತೆ ಈ ಕಲಾಕೃತಿಯಲ್ಲಿ ಕಂಡು ಬರುತ್ತದೆ. ಅಲ್ಲದೇ ನೆರಳು ಬೆಳಕಿನ ಸ್ಪಷ್ಟತೆ ಕಂಡು ಬರುವ ಇಲ್ಲಿ ಮನುಷ್ಯ ಆಕೃತಿಗಳ ಸ್ಪಷ್ಟತೆ ತೋರಿಸಿದರೆ, ನಿಸರ್ಗಕ್ಕೆ ಹೆಚ್ಚಿನ ಮಹತ್ವ ನೀಡಿದ್ದಾರೆ.

**೪. ವನಭೋಜನ :** ಈ ಕಲಾಕೃತಿಯು ಪೋಸ್ಟರ ವರ್ಣ ಮಾಧ್ಯಮದಲ್ಲಿದ್ದು ಹದಿಮೂರು ಆಕೃತಿಯನ್ನು ಬಳಸಿಕೊಂಡಿದ್ದಾರೆ. ಇದು ಒಂದು ಕುಟುಂಬದ ಪೂರ್ಣಚಿತ್ರವೆನ್ನಬಹುದು. ಕುಳಿತಿರುವ ಹಾಗೂ ನಿಂತಿರುವ ಮತ್ತು ವಸ್ತ್ರಗಳನ್ನು ಕೈಯಲ್ಲಿ ಹಿಡಿದುಕೊಂಡು ಬಲಭಾಗಕ್ಕೆ ಹೊರಟಿರುವ ದೃಶ್ಯವನ್ನು ಗಮನಿಸಿದಾಗ ಈ ಕಲಾಕೃತಿಯಲ್ಲಿ ಚಲನೆ ಇದೆ ಎಂಬುದನ್ನು ಗಮನಿಸಬಹುದಾಗಿದೆ. ಹಿನ್ನಲೆಯಲ್ಲಿ ಮರದ ವಿನ್ಯಾಸವಿದ್ದು. ತೆಳು ವರ್ಣದ ಭೂಮಿಯ ವಿನ್ಯಾಸವನ್ನು ತೋರಿಸಿದ್ದಾರೆ. ಹೆಣ್ಣು ಮಗಳು ಬಾಳೆಹಣ್ಣು ತಿನ್ನುವ ದೃಶ್ಯ ಇನ್ನೊರ್ವ ಯುವಕ ಗಿಡದ ಟೊಂಗೆಯನ್ನು ಹಿಡಿದು ಕುಳಿತಿರುವ ದೃಶ್ಯ ತುಂಬಾ ಅದ್ಭುತವಾಗಿ ಮೂಡಿ ಬಂದಿದೆ.

**೫. ಗಿರಿಜಾ ಕಲ್ಯಾಣ :** ಈ ಕಲಾಕೃತಿಯು ಧಾರ್ಮಿಕ ಸನ್ನಿವೇಶದ ಕಲಾಕೃತಿಯಾಗಿದೆ. ೩೦ ರಿಂದ ೪೦ ಜನರ ಆಕೃತಿಗಳನ್ನು ಈ ಕಲಾಕೃತಿಯಲ್ಲಿ ಹಾಲಭಾವಿಯವರು ರಚಿಸಿರುವುದು ಅದ್ಭುತವಾಗಿದೆ. ಈ ಕಲಾಕೃತಿಗಳಲ್ಲಿ ವಸ್ತ್ರಾಭರಣವನ್ನು ತುಂಬಾ ಸಮತೋಲನವಾಗಿ ಹಾಕಿದ್ದಾರೆ. ಪರ್ವತ ರಾಜನ ಮಗಳಾಗಿ ಹುಟ್ಟಿ ಶಿವನನ್ನೆ ಮದುವೆ ಆಗಬೇಕೆಂದು ತಪಗೈದು ಅವನನ್ನು ಒಲಿಸಿಕೊಂಡು ಗಿರಿಜೆಯ ಕಲ್ಯಾಣ ಕಾರ್ಯಕ್ರಮದ ದೃಶ್ಯ ಇದಾಗಿದೆ. ಶಿವನು ಗಿರಿಜೆಗೆ ಮಾಲೆಯನ್ನು ಹಾಕಲು ಮುಂದಾಗಿದ್ದು, ಕೈಲಾಸದ ಶಿವಗಣಗಳ ಸಮೂಹ ಋಷಿಪುಂಗ ಸಮೂಹ ಒಟ್ಟಾಗಿ ಕಲ್ಯಾಣ ಕಾರ್ಯಕ್ರಮ ಯಶಸ್ವಿಯಾಗಿ ನಡೆಯುವಂತೆ ಒಟ್ಟು ಸೌಂದರ್ಯ ಪ್ರಜ್ಞೆಯೊಂದಿಗೆ ಗಿರಿಜಾ ಕಲ್ಯಾಣದ ದೃಶ್ಯ ಸುಮಂಗಲವಾಗಿ ಕಾಣುವಂತಿದೆ.

**೬. ವನಭೋಜನ :** ಈ ಕಲಾಕೃತಿಯ ಶಿರ್ಷಿಕೆ ವನಭೋಜ (ಪಿಕನಿಕ್ ಸ್ಪಾಟ) ಸುಮಾರು ೧೦ ಜನರು ಕುಟುಂಬದೊಂದಿಗೆ ವನಭೋಜನಕ್ಕೆ ಸುಪಾ ಡ್ಯಾಮಗೆ ಬಂದಿರುವ ಈ ಕಲಾಕೃತಿ ೧೯೮೬ ರಲ್ಲಿ ಹಾಲಭಾವಿಯವರು ಜಲವರ್ಣದಲ್ಲಿ ರಚಿಸಿದ್ದಾರೆ. ಆಕೃತಿಗಳಿಗೆ ಸ್ಪಷ್ಟತೆ ಇಲ್ಲದಿದ್ದರೂ ಹಿನ್ನಲೆ ಮತ್ತು ಡ್ಯಾಮ, ಕೆಳಗಡೆ ನೀರಿನ ದೃಶ್ಯವನ್ನು ಯಥಾವತ್ತಾಗಿ ಚಿತ್ರಿಸಿದ್ದಾರೆ.

**೭. ನಿತ್ಯ ಕಾಯಕ :** ಈ ಕಲಾಕೃತಿಯ ಶಿರ್ಷಿಕೆ 'ನಿತ್ಯಕಾಯಕ'. ಅಂದರೆ ಕೆಲಸಗಾರರ ಕೆಲಸದ ನಿರತರಾದವರು. ಈ ಕಲಾಕೃತಿಯು ಮಿಶ್ರಮಾಧ್ಯಮದಲ್ಲಿವೆ, ಪೋಸ್ಟರ ಮತ್ತು ಪೇಸ್ಟಲ್ ವರ್ಣಗಳನ್ನು ಬಳಸಿಕೊಂಡು ಮನ್ನೆಲೆ ಮತ್ತು ಹಿನ್ನೆಲೆ ಮೆರಗು ತಂದಿದ್ದಾರೆ. ಇಲ್ಲಿ ಐದು ಜನ ಲಂಬಾಣಿಯರು ಕಲ್ಲುಗಳನ್ನು ಹೊತ್ತುಕೊಂಡು ಹೋಗುವ ಇನ್ನೋರ್ವ ವ್ಯಕ್ತಿ ಒಂದು ಕಡೆ ಪಕ್ಕದಲ್ಲಿಯೇ ಹೊರಟಿರುವಂತಿದೆ. ಮುಂದೆ ಜನರು ದಿನ ನಿತ್ಯದ ಕೆಲಸ ಕಾರ್ಯಗಳಿಗೆ ಹೋಗುತ್ತಿರುವ ದೃಶ್ಯವಿದೆ. ಹಿನ್ನಲೆಯಲ್ಲಿ ಬೃಹದಾಕಾರದ ಮರವಿದೆ. ಅಲ್ಲಿ ಗಾಢವಾದ ನೆರಳು ಬೆಳಕಿನ ಛಾಯೆಯನ್ನು ತೋರಿಸಿದ್ದಾರೆ. ಒಟ್ಟಾರೆ ಈ ಕಲಾಕೃತಿಯು ನೈಜತೆಯಿಂದ ಕೂಡಿದ್ದು, ಇಲ್ಲಿ ಮನುಷ್ಯ ಕೃತಿಯ ಚಲನವಲನಗಳನ್ನು ಈ ಸಂಯೋಜನೆ ಚಿತ್ರದಲ್ಲಿ ಕಾಣಬಹುದಾಗಿದೆ. ಲಂಬಾಣಿಯರ ಹಾವ-ಭಾವ, ವಸ್ತ್ರವಿನ್ಯಾಸಗಳು ನೈಜವಾಗಿ ಮೂಡಿ ಬಂದಿವೆ.

**೮. ಶಂಕರ ದಾಸಿಮಯ್ಯ :** ಈ ಕಲಾಕೃತಿಯು ಒಂದು ಧಾರ್ಮಿಕ ಮಠದ ಸ್ವಾಮಿಜಿಯವರ ಕಲಾಕೃತಿಯಾಗಿದ್ದು, ಇಲ್ಲಿ ದೇಸಾಯಿ ಮನೆತನದವರು ಸ್ವಾಮಿಜಿಯವರನ್ನು ಭೇಟಿ ಮಾಡಿದ ಸಂದರ್ಭದ ಕೃತಿಯಾಗಿದೆ. ಜಲವರ್ಣ, ಪೋಸ್ಟರ ವರ್ಣ(ಮಿಶ್ರಮಾಧ್ಯಮ)ದಲ್ಲಿ ಹಾಲಭಾವಿಯವರು ರಚಿಸಿದ್ದಾರೆ. ಸ್ವಾಮಿಯ ಬಲಗೈಯಲ್ಲಿ ಬೆತ್ತ, ಎಡಗೈಯಲ್ಲಿ ನೀರಿನ ಕಮಂಡಲ ಹಿಡಿದು ನಿಂತಿರುವ ದೃಶ್ಯ, ಇನ್ನೊಂದು ಕಡೆ ದೇಸಾಯಿಯವರು ಪೇಟವನ್ನು ಸುತ್ತಿಕೊಂಡು ನಿಂತಿರುವ ದೃಶ್ಯ ಒಂದೇವರ್ಣ ದ್ವಿಬಣ್ಣದಲ್ಲಿ (ಬ್ಲೂ ಪೇಂಟಿಂಗ್)ಮೂಡಿ ಬಂದಿದ್ದು ವಿಶೇಷವಾಗಿದೆ. ಹಿನ್ನೆಲೆಯಲ್ಲಿ ಗಾಢವಾದ ಛಾಯೆ ಮುನ್ನಲೆಯಲ್ಲಿ ಸಮತೋಲನವಾದ ನೆರಳು ಬೆಳಕನ್ನು ತೋರಿಸಿದ್ದಾರೆ.

**ಶಿರಭಾವಚಿತ್ರಗಳು**

ಚಿತ್ರಕಲಾವಿದ ಡಿ. ವಿ. ಹಾಲಭಾವಿಯವರು ತಮ್ಮ ಶೈಕ್ಷಣಿಕ ಬದುಕಿನ ಮತ್ತು ಬದುಕಿನ ಮಧ್ಯದಲ್ಲಿ ನೂರಾರು ಭಾವಚಿತ್ರಗಳನ್ನು ತೈಲವರ್ಣ ಮತ್ತು ಜಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಅವುಗಳಲ್ಲಿ ಕೆಲವು ಭಾವಚಿತ್ರಗಳ ವಿವರಣೆಯನ್ನು ಸಂಕ್ಷಿಪ್ತವಾಗಿ ಹೇಳಲಾಗಿದೆ.

೧. **ವೀರಭದ್ರಪ್ಪ ಹಾಲಭಾವಿ** : ಹಾಲಭಾವಿಯವರು ತಮ್ಮ ತಂದೆಯ ಭಾವಚಿತ್ರವನ್ನು ೧೯೫೭ರಲ್ಲಿ ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ತಲೆಯ ಮೇಲೆ ಮೈಸೂರ ಪೇಟಾ ಮತ್ತು ಕರಿಕೋಟಿನ ವಿನ್ಯಾಸ ನೈಜವಾಗಿ ಮೂಡಿ ಬಂದಿದೆ. ಮುಖದ ಹಾವಭಾವ ಮತ್ತು ಕತ್ತಿನ ಮೇಲೆ ಮತು ಕೆಳಗಡೆ ಗಾಢವಾದ ಛಾಯೆಯನ್ನು ಬಳಸಿಕೊಂಡು ನೀರಿಗೆಯ ವಿನ್ಯಾಸವನ್ನು ಸ್ಪಷ್ಟವಾಗಿ ತೋರಿಸಿದ್ದಾರೆ. ಕಣ್ಣಿಗೆ ನೇರ ದೃಷ್ಟಿ, ಮೂಗು ಮತ್ತು ಹಣೆಯ ಮೇಲೆ, ಬೆಳಕಿನ ಛಾಯೆಯನ್ನು ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಈ ಕಲಾಕೃತಿಯಲ್ಲಿ ನಾವು ಪಾಶ್ಚಿಮಾತ್ಯ ಶೈಲಿಯಲ್ಲಿ ವರ್ಣಗಳ ಬಳಕೆಯನ್ನು ಕಾಣಬಹುದು. ಹಿನ್ನಲೆಯಲ್ಲಿ ಹಳದಿ ಮಿಶ್ರಿತ ನೀಲಿವರ್ಣವನ್ನು ಲೇಪಿಸಿದ್ದಾರೆ.

೨. **ರಾವ್ ಬಹದ್ದೂರ** : ಹಾಲಭಾವಿಯವರು ತಮ್ಮ ಗುರುಗಳಾದ ರಾವ್ ಬಹದ್ದೂರ ದುರಂಧರ ಅವರ ಭಾವಚಿತ್ರವನ್ನು ೧೯೮೭ ರಲ್ಲಿ ರಚಿಸಿದ್ದಾರೆ. ನೇರನೋಟದಲ್ಲಿ ರಚಿಸಿದ ಈ ಭಾವಚಿತ್ರವು, ಕಣ್ಣಿಗೆ ಕನ್ನಡಕವನ್ನು ಧರಿಸಿರುವ, ಹಾಗೂ ಸೂಟ್, ಟೈ ಹಾಕಿಕೊಂಡಿರುವ ಭಂಗಿಯಲ್ಲಿ ರಚಿಸಿರುವ ಹಾಲಭಾವಿಯವರು ಇಲ್ಲಿ ಸಮಾನಾಂತರವಾದ ನೆರಳು ಬೆಳಕನ್ನು ಚಿತ್ರಿಸಿದ್ದಾರೆ. ಕನ್ನಡಕದ ಸ್ಪಷ್ಟತೆ, ಹಾಗೂ ಟೈನ ಸ್ಪಷ್ಟತೆ ಇರುವುದು ಗಮನಾರ್ಹವಾಗಿದೆ. ಹಿನ್ನೆಲೆಯಲ್ಲಿ ಮಸುಕಾದ ಹಳದಿ ಬಣ್ಣದ ಲೇಪನವಿದೆ.

೩. **ಯುವಕನ ಭಾವಚಿತ್ರ** : ಹಾಲಭಾವಿಯವರು ಯುವಕನ ಭಾವಚಿತ್ರವನ್ನು ೧೯೮೩ ರಲ್ಲಿ ತೈಲವರ್ಣದಲ್ಲಿ ರಚಿಸಿದ್ದಾರೆ. ತಲೆಗೆ ರುಮಾಲನ್ನು ಸುತ್ತಿರುವ ಈ ಯುವಕ ಕೆಲಸ ಮಾಡುವ ಕಾರ್ಮಿಕ ಕಾಣುವಂತೆ ರಚಿಸಿದ್ದಾರೆ. ರುಮಾಲಿನಲ್ಲಿಯ ನೀರಗೆಯ ವಿನ್ಯಾಸ ಮತ್ತು ನೆರಳು ಬೆಳಕಿನ ವಿನ್ಯಾಸ ಮತ್ತು ಮುಖದ ಮೇಲೆ ನೆರಳು ಮತ್ತು ಬೆಳಕು ಕಣ್ಣುಗಳ ನೋಟ ತುಂಬಾ ಆಕರ್ಷಕವಾಗಿ ಮೂಡಿ ಬಂದಿದೆ. ಹಿನ್ನಲೆಯಲ್ಲಿ ನೀಲಿ ವರ್ಣದ ಲೇಪನ ಮಾಡಿದ್ದಾರೆ.

೪. **ವೃದ್ಧನ ಭಾವಚಿತ್ರ** : ಹಾಲಭಾವಿಯವರು ಮುದುಕನ ಭಾವಚಿತ್ರವನ್ನು ೧೯೮೦ರಲ್ಲಿ ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಇಲ್ಲಿಯೂ ಕೂಡಾ ತಲೆಯ ಮೇಲೆ ರುಮಾಲು ಸುತ್ತಿಕೊಂಡಿರುವ, ಮತ್ತು ಮುಖದ ಮೇಲೆ ಬಿಳಿ ಕೇಶ ವಿನ್ಯಾಸ ಅದ್ಭುತವಾಗಿ ಮೂಡಿ ಬಂದರೆ, ಕಣ್ಣುಗಳ ದೃಷ್ಟಿಯಲ್ಲಿ ಸ್ಪಷ್ಟತೆಯನ್ನು ತೋರಿಸಿರುವುದಿಲ್ಲ. ಆದರೆ ನೆರಳು ಬೆಳಕಿನ ಗಾಢವಾದ ಛಾಯೆಯನ್ನು ಬಳಸಿ ಕೃತಿಗೆ ಮೆರಗು ನೀಡಿದ್ದಾರೆ. ಹಿನ್ನೆಲೆಯಲ್ಲಿ ಗುಲಾಬಿ ವರ್ಣದ ಲೇಪನವಿದೆ.

೫. **ಮಹಿಳೆಯ ಶಿರಭಾವಚಿತ್ರ** : ಹಾಲಭಾವಿಯವರು ಮಹಿಳೆಯ ಭಾವಚಿತ್ರವನ್ನು ೧೯೮೮ ರಲ್ಲಿ ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಮುಖದಲ್ಲಿ ಮಂದಹಾಸ ನಗು ಅದ್ಭುತವಾಗಿ ಮೂಡಿ ಬಂದಿದೆ. ಮುಖದ ಮೇಲೆ ಮುಕ್ಕಾಲು ಭಾಗ ಬೆಳಕಿನ ಛಾಯೆಯನ್ನು ತೋರಿಸಿದ್ದಾರೆ. ಅದನ್ನು ಗಮನಿಸಿದಾಗ ಮಹಿಳೆ ತೊನ್ನಿನ ರೋಗ ವಿರಬಹುದೆಂದು ಸೂಚಿಸುತ್ತದೆ. ಮೂಗಿನಲ್ಲಿರುವ ಮೂಗುನತ್ತು, ಕೊರಳಿನಲ್ಲಿರುವ ನಕ್ಲೇಸ ಮತ್ತು ಕೆಂಪು ಸೀರೆಯನ್ನು ತಲೆಯ ಮೇಲೆ ಸೆರಗು ಹೊತ್ತೊಕೊಂಡಿರುವ ಸೆರಗಿನ ವಿನ್ಯಾಸದ ಸಮಪ್ರಮಾಣದಲ್ಲಿ ನೆರಳು ಬೆಳಕುನ್ನು ಚಿತ್ರಿಸಿದ್ದಾರೆ. ಹಿನ್ನೆಲೆಯಲ್ಲಿ ನೀಲಿವರ್ಣವನ್ನು ಬಳಸಿದ್ದಾರೆ.

೬. **ಮಹಿಳೆಯ ಶಿರಭಾವಚಿತ್ರ** : ಹಾಲಭಾವಿಯವರು ೧೯೮೫ ರಲ್ಲಿ ಈ ಭಾವಚಿತ್ರವನ್ನು ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಮುಖದ ನೇರವಾದ ನೋಟ, ತಲೆಯ ಮೇಲೆ ಸೆರಗನ್ನು ಹೊತ್ತುಕೊಂಡಿರುವ

ದೃಶ್ಯ ಮತ್ತು ಸೀರೆಯಲ್ಲಿ ನೀರಿಗೆಯ ವಿನ್ಯಾಸಗಳು ನೈಜವಾಗಿ ಮೂಡಿ ಬಂದಿದೆ. ಮುಖದ ಮೇಲೆ ನೆರಳು ಬೆಳಕಿನ ಸ್ಪಷ್ಟತೆ ತೋರಿಸಿದ್ದಾರೆ. ಕೊರಳುಗಳಲ್ಲಿ ಆಭರಣಗಳು ಮತ್ತು ಮೂಗಿನಲ್ಲಿರುವ ಮೂಗನತ್ತು ನೈಜವಾಗಿ ಚಿತ್ರಿಸಿದ್ದಾರೆ. ಹಿನ್ನಲೆಯಲ್ಲಿ ನೀಲಿ ವರ್ಣದ ಲೇಪನ ಮಾಡಿದ್ದಾರೆ.

**೭. ಮಹಿಳೆಯ ಶಿರಭಾವಚಿತ್ರ :** ಹಾಲಭಾವಿಯವರು ೧೯೮೭ರಲ್ಲಿ ರಚಿಸಿದ ಈ ಕಲಾಕೃತಿಯು ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಈ ಕಲಾಕೃತಿಯ ವೈಶಿಷ್ಟವೆಂದರೆ ಮುಖದ ಭಾಗ ನೇರವಾಗಿ ಇದೆ. ಆದರೆ ದೇಹ ಬಲಭಾಗಕ್ಕೆ ಹೊರಳಿದೆ. ಮುಖದ ಮೇಲಿನ ಗಾಂಭೀರ್ಯತೆ ಕಿವಿಯಲ್ಲಿಯ ಓಲೆಗಳು, ಹಣೆಯ ಮೇಲಿನ ಕುಂಕುಮ, ಕೊರಳಲ್ಲಿಯ ಆಭರಣಗಳು ನೈಜವಾಗಿ ಮೂಡಿ ಬಂದಿದೆ. ತಲೆಯ ಮೇಲಿನ ಸೆರಗು ಕೇಶಗಳ ಹಿಂದೆ ಸರಿದಿದೆ. ಸೀರೆಯಲ್ಲಿ ಗಾಢವಾದ ನೆರಳು ಬೆಳಕಿನ ಪ್ರಮಾಣ ತೋರಿಸಿದ್ದಾರೆ. ಮುಖದ ಮೇಲೆ ಸಮಪ್ರಮಾಣದ ನೆರಳು ಬೆಳಕನ್ನು ತೋರಿಸಿದ್ದಾರೆ. ಹಿನ್ನಲೆಯಲ್ಲಿ ಬಲಭಾಗದಲ್ಲಿ ಕಂದುಬಣ್ಣ ಲೇಪನವಿದ್ದರೆ, ಎಡಭಾಗದಲ್ಲಿ ಹಳದಿ ಮಿಶ್ರಿತ ನೀಲಿ ಬಣ್ಣದ ಲೇಪನವಿದೆ.

**೮. ಮಹಿಳೆಯ ಶಿರಭಾವಚಿತ್ರ :** ಹಾಲಭಾವಿಯವರು ಈ ಕಲಾಕೃತಿಯನ್ನು ೧೯೮೮ ರಲ್ಲಿ ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಈ ಕಲಾಕೃತಿಯು ಎಡಭಾಗಕ್ಕೆ ಹೊರಳಿ ಕುಳಿತಿರುವ ಕಲಾಕೃತಿಯಾಗಿದೆ. ಸೀರೆಯಲ್ಲಿ ನೆರಳು-ಬೆಳಕಿನ ಸ್ಪಷ್ಟತೆ ಇಲ್ಲದಿದ್ದರೂ ಮುಖದಲ್ಲಿ ಮತ್ತು ಕೇಶ ವಿನ್ಯಾಸದಲ್ಲಿ ನೆರಳು-ಬೆಳಕಿನ ಸ್ಪಷ್ಟತೆ ಕಂಡು ಬರುತ್ತದೆ. ಹಿನ್ನೆಲೆಯಲ್ಲಿ ಕಂದು ಬಣ್ಣದ ಲೇಪನವಿದೆ.

**೯. ಮಹಿಳೆಯರ ಶಿರಭಾವಚಿತ್ರಗಳು :** ಹಾಲಭಾವಿಯವರು ಮೂವರು ಮಹಿಳೆಯರ ಭಾವಚಿತ್ರಗಳನ್ನು ೧೯೮೫ ರಲ್ಲಿ ತೈಲವರ್ಣದಲ್ಲಿ ರಚಿಸಿದ್ದಾರೆ. ಹಿಂದುಳಿದ ಮಹಿಳೆಯ ಜನಾಂಗದ ಕೃತಿಗಳಾಗಿದ್ದು, ಮುಖದ ನೇರವಾದ ನೋಟ, ವಸ್ತ್ರಾಭರಣಗಳು ನೈಜವಾಗಿ ಇಲ್ಲಿ ಮೂಡಿ ಬಂದಿದೆ. ಗಾಢವಾದ ನೆರಳು ಬೆಳಕನ್ನು ತೋರಿಸಿ ಕೃತಿಗೆ ಹೆಚ್ಚು ಮೆರಗು ನೀಡಿದ್ದಾರೆ. ಹಿನ್ನೆಲೆಯಲ್ಲಿ ಹಳದಿ ಬಣ್ಣದ ಲೇಪನವಿದೆ. ಇನ್ನೊಂದು ಭಾವಚಿತ್ರದಲ್ಲಿ ಮಹಿಳೆಯು ಗಡಿಗೆಯನ್ನು ಹಿಡಿದುಕೊಂಡು ಕುಳಿತಿರುವ ದೃಶ್ಯವಿದೆ. ಎದೆಯ ಭಾಗವನ್ನು ಇಲ್ಲಿ ಮೂರುನಾಲ್ಕಾಂಶ ಭಾಗದಷ್ಟು ತೋರಿಸಲಾಗಿದೆ. ಈ ಮಹಿಳೆಯ ಮುಖದಲ್ಲಿ ಮಂದಹಾಸದ ನಗುವಿದೆ. ಮತ್ತು ಗಾಢವಾದ ನೆರಳು ಬೆಳಕಿನ ವಿನ್ಯಾಸವಿದೆ.

ಇನ್ನೊಂದು ಕಲಾಕೃತಿಯಲ್ಲಿ ಮಹಿಳೆಯ ನೇರನೋಟವಿದ್ದು, ಮುಖದ ಮೇಲೆ ನೆರಳು-ಬೆಳಕಿನ ಸಮಪ್ರಮಾಣದ ಲೇಪನವಿದೆ. ದೃಷ್ಟಿ ಗಾಂಭೀರ್ಯತೆ ಇದೆ. ಈ ಮೂರು ಕಲಾಕೃತಿಗಳನ್ನು ಹಾಲಭಾವಿಯವರು ತೈಲ ಮಾಧ್ಯಮದಲ್ಲಿ ಅದ್ಭುತವಾಗಿ ಚಿತ್ರಿಸಿದ್ದಾರೆ. ಮತ್ತು ಈ ಕಲಾಕೃತಿಗಳು ಕೆನಡಾ ಹಾಸ್ಪಿಟಲ್ ಅಮೇರಿಕಾದಲ್ಲಿ ಸಂಗ್ರಹವಿದೆ.

**೧೦. ಡಾ.ಗಂಗೂಬಾಯಿ ಹಾನಗಲ್ :** ಹಾಲಭಾವಿಯವರು ಡಾ. ಗಂಗೂಬಾಯಿ ಹಾನಗಲ್‌ರವರ ಭಾವಚಿತ್ರವನ್ನು ೧೯೯೩ ರಲ್ಲಿ ತೈಲ ಮಾಧ್ಯಮದಲ್ಲಿ ರಚಿಸಿದ್ದಾರೆ. ಮುಖದ ನೀರವದ ನೋಟ, ಕನ್ನಡಕ ಧರಿಸಿದ ಸ್ಪಷ್ಟತೆ ಮತ್ತು ಸೀರೆಯ ಸ್ಪಷ್ಟತೆ ಇದ್ದು, ನೆರಳು-ಬೆಳಕಿನ ಗಾಢವಾದ ಛಾಯೆ ಕಂಡು ಬರುವದು. ಮುಖದಲ್ಲಿ ಸಮ ಪ್ರಮಾಣದ ನೆರಳು-ಬೆಳಕು ಕಂಡು ಬರುವದು. ಹಿನ್ನಲೆಯಲ್ಲಿ ನೀಲಿ ಬಣ್ಣದ ಲೇಪನವಿದೆ.

**೧೧. ಮಹಿಳೆಯ ಶಿರಭಾವಚಿತ್ರ :** ಹಾಲಭಾವಿಯವರು ಈ ಕಲಾಕೃತಿಯನ್ನು ೧೯೮೯ ರಲ್ಲಿ ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಮುಖದ ಮೇಲೆ ಹೆಚ್ಚಾಗಿ ಕೆಂಪು ವರ್ಣವನ್ನು ಬಳಸಿದ್ದು ನೆರಳು-ಬೆಳಕನ್ನು ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಸೀರೆಯಲ್ಲಿ ನೀರಿಗೆಯ ವಿನ್ಯಾಸ ನೈಜವಾಗಿ ಮೂಡಿ ಬಂದಿದೆ. ಹಿನ್ನೆಲೆಯಲ್ಲಿ ಗುಲಾಬಿ ವರ್ಣದ ಲೇಪನವಿದೆ.

೧೨. **ಮಹಿಳೆಯ ಶಿರಭಾವಚಿತ್ರ** : ಹಾಲಭಾವಿಯವರು ಈ ಕಲಾಕೃತಿಯನ್ನು ೧೯೩೫ ರಲ್ಲಿ ಅಂದರೆ ಅವರ ವಿದ್ಯಾಭ್ಯಾಸದ ಸಮಯದಲ್ಲಿ ತೈಲವರ್ಣ ಮಾಧ್ಯಮದಲ್ಲಿ ರಚಿಸಿದ ಕಲಾಕೃತಿಯಾಗಿದೆ. ಮುಖದಲ್ಲಿ ಗಾಂಭೀರ್ಯತೆ, ಮತ್ತು ಗಾಢವಾದ ನೆರಳು-ಬೆಳಕು ಅದ್ಭುತವಾಗಿ ಮೂಡಿ ಬಂದಿದೆ. ಕೇಶಗಳ ವಿನ್ಯಾಸ, ಸೀರೆಯ ವಿನ್ಯಾಸ ಇಲ್ಲಿ ನೈಜವಾಗಿ ಮೂಡಿ ಬಂದಿದೆ. ಹಿನ್ನಲೆಯಲ್ಲಿ ನೀಲಿವರ್ಣದ ಲೇಪನವಿದೆ.

೧೩. **ಚನ್ನಬಸಣ್ಣೆವ್ವ ಶಿರಭಾವಚಿತ್ರ** : ಹಾಲಭಾವಿಯವರ ತಾಯಿ ಭಾವಚಿತ್ರವಿದು. ಈ ಕಲಾಕೃತಿಯನ್ನು ೧೯೭೭ರಲ್ಲಿ ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ನೇರವಾದ ಮುಖ, ಹಣೆಯ ಮೇಲೆ ವಿಭೂತಿ, ಕೊರಳಲ್ಲಿಯ ಆಭರಣಗಳು, ಕಿವಿಯಲ್ಲಿಯ ಓಲೆಗಳು ನೈಜವಾಗಿ ಮೂಡಿ ಬಂದಿವೆ. ಒಟ್ಟಾರೆ ಈ ಕಲಾಕೃತಿಯಲ್ಲಿ ನೆರಳು ಬೆಳಕಿನ ಸ್ಪಷ್ಟತೆಯನ್ನು ಸಮಾಂತರವಾಗಿ ಚಿತ್ರಿಸಿದ್ದಾರೆ. ಹಿನ್ನೆಲೆಯಲ್ಲಿ ನೀಲಿವರ್ಣದ ಲೇಪನವಿದೆ.

೧೪. **ಮಾಜಿ ರಾಷ್ಟ್ರಪತಿ ಬಿ.ಡಿ.ಜತ್ತಿ ಶಿರಭಾವಚಿತ್ರ** : ಹಾಲಭಾವಿಯವರು ೧೯೫೯ರಲ್ಲಿ ಬಿ.ಡಿ. ಜತ್ತಿಯವರ ಭಾವಚಿತ್ರವನ್ನು ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಮುಖದ ನೇರವಾದ ನೋಟ, ಮತ್ತು ನೆರಳು-ಬೆಳಕಿನ ಸ್ಪಷ್ಟತೆ ನೈಜವಾಗಿ ಮೂಡಿ ಬಂದಿದೆ. ತಲೆಯ ಮೇಲಿನ ಟೋಪಿ, ಮತ್ತು ಶರ್ಟನ ವಿನ್ಯಾಸ ತುಂಬಾ ಅದ್ಭುತವಾಗಿ ಮೂಡಿ ಬಂದಿದೆ. ಹಿನ್ನೆಲೆಯಲ್ಲಿ ಕಂದು ಬಣ್ಣದ ಲೇಪನವಿದೆ.

೧೫. **ಮಹಿಳೆಯ ಶಿರಭಾವಚಿತ್ರ** : ಹಾಲಭಾವಿಯವರು ಈ ಮಹಿಳೆಯ ಭಾವಚಿತ್ರವನ್ನು ೧೯೬೧ರಲ್ಲಿ ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದರೆ. ಮುಖದಲ್ಲಿಯ ನಗು, ಕಣ್ಣುಗಳ ನೇರ ನೋಟ, ಕಿವಿಯಲ್ಲಿ ರಿಂಗುಗಳು, ಕೊರಳಲ್ಲಿ ಬಂಗಾರದ ಆಭರಣಗಳು-ಕೈಬೆರಳಲ್ಲಿ ಯಥೇಚ್ಚವಾಗಿ ಮೂಡಿ ಬಂದಿದ್ದು, ಸೀರೆಯಲ್ಲಿ ನೀರಿಗೆಗಳು ತುಂಬಾ ಉತ್ಕಷ್ಟಮಟ್ಟದ್ದಾಗಿದೆ. ಸೀರೆಯ ನೀರಿಗೆಯಲ್ಲಿ ಗಾಢವಾದ ನೆರಳು-ಬೆಳಕನ್ನು ತೋರಿಸಿದ್ದಾರೆ. ಮುಖದಲ್ಲಿ ಸಮಾಂತರವಾದ ನೆರಳು ಬೆಳಕನ್ನು ತೋರಿಸಿದ್ದಾರೆ. ಹಿನ್ನೆಲೆಯಲ್ಲಿ ವೀಣೆಯ ಚಿತ್ರವು ಕಂಡುಬಂದಿದ್ದು. ಹಿನ್ನೆಲೆಯಲ್ಲಿ ಕೆಂಪು ವರ್ಣದ ಲೇಪನವಿದೆ.

೧೬. **ಲಂಬಾಣಿ ಮಹಿಳೆ ಶಿರಭಾವಚಿತ್ರ** : ಹಾಲಭಾವಿಯವರು ಈ ಲಂಬಾಣಿಯ ಮಹಿಳೆ ಭಾವಚಿತ್ರವನ್ನು ೧೯೬೫ರಲ್ಲಿ ತೈಲ ವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಎಡಭಾಗಕ್ಕೆ ತಿರುಗಿ ಕುಳಿತಿರುವ ಭಾವಚಿತ್ರ ಇದಾಗಿದೆ. ಕಣ್ಣಿನ ನೇರವಾದ ನೋಟ, ಕೇಶಗಳ ವಿನ್ಯಾಸ, ಕೊರಳಲ್ಲಿಯ ಆಭರಣಗಳು ಮತ್ತು ಕೇಶಗಳಲ್ಲಿಯು ಆಭರಣಗಳು ಯಥೇಚ್ಚವಾಗಿ ಮೂಡಿ ಬಂದಿದೆ. ಇಲ್ಲಿ ವೇಷಭೂಷಣಗಳಿಗೆ ಗಾಢವಾದ ನೆರಳು ಬೆಳಕನ್ನು ತೋರಿಸಿ ಕೃತಿಗೆ ಮೆರಗು ನೀಡಿದ್ದಾರೆ. ನೀಲಿ ಮತ್ತು ಬಿಳಿವರ್ಣಗಳನ್ನು ಮಿಶ್ರಣ ಮಾಡಿ ಕೃತಿ ರಚಿಸಿದ್ದಾರೆ. ಹಿನ್ನೆಲೆಯಲ್ಲಿ ತೆಳು ನೀಲಿ ಬಣ್ಣದ ಲೇಪನವಿದೆ.

೧೭. **ಪುರುಷನ ಶಿರಭಾವಚಿತ್ರ** : ಹಾಲಭಾವಿಯವರು ಈ ಕಲಾಕೃತಿಯನ್ನು ೧೯೬೭ರಲ್ಲಿ ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಇದು ಕುರುಬನ ಕಲಾಕೃತಿಯಾಗಿದೆ. ತಲೆಯ ಮೇಲೆ ರುಮಾಲು, ಹೆಗಲ ಮೇಲೆ ಕಂಬಳಿಯನ್ನು ಹಾಕಿಕೊಂಡಿರುವ ದೃಶ್ಯವಿದೆ. ಶರ್ಟಿನಲ್ಲಿ ನೆರಳು-ಬೆಳಕಿನ ಸ್ಪಷ್ಟತೆ ಕಾಣದಿದ್ದರೂ, ಮುಖ, ತಲೆಯ ಮೇಲೆ ರುಮಾಲು, ಹೆಗಲ ಮೇಲಿನ ಕಂಬಳಿಯಲ್ಲಿ ಸ್ಪಷ್ಟವಾದ ಮತ್ತು ಗಾಢವಾದ ನೆರಳು-ಬೆಳಕನ್ನು ತೋರಿಸಿದ್ದಾರೆ. ಹಿನ್ನೆಲೆಯಲ್ಲಿ ನೀಲಿವರ್ಣದ ಲೇಪನವಿದೆ.

೧೮. **ಮಹಿಳೆಯ ಶಿರಭಾವಚಿತ್ರ** : ಹಾಲಭಾವಿಯವರು ಈ ಕಲಾಕೃತಿಯನ್ನು ೧೯೬೫ರಲ್ಲಿ ತೈಲವರ್ಣದ ಮಾಧ್ಯಮದಲ್ಲಿ ರಚಿಸಿದ್ದಾರೆ. ಮುಖದ ನೇರವಾದ ನೋಟ, ಮುಖದಲ್ಲಿ ಗಾಢವಾದ ನೆರಳು-ಬೆಳಕು, ಸೀರೆಯ ನೀರಿಗೆಯ ಸ್ಪಷ್ಟತೆ ಹಾಗೂ ಕುಪ್ಪಸದ ವಿನ್ಯಾಸ ನೈಜವಾಗಿ ಮೂಡಿ ಬಂದಿದೆ. ತಲೆಯ ಮೇಲಿನ ಕೇಶ ವಿನ್ಯಾಸದ ಸಮಾಂತರವಾದ ನೆರಳು-ಬೆಳಕಿನ ವಿನ್ಯಾಸವಿದೆ. ಹಿನ್ನೆಲೆಯಲ್ಲಿ ಹಸಿರು ವರ್ಣದ ಲೇಪನವಿದೆ.

೧೯. **ಕುಮಾರಿ ನಾಗೂರಮಠ ಶಿರಭಾವಚಿತ್ರ** : ಹಾಲಭಾವಿಯವರ ಈ ಕಲಾಕೃತಿನ್ನು ೧೯೬೨ರಲ್ಲಿ ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಯುವತಿಯ ನೇರವಾದ ನೋಟ ಮುಖದಲ್ಲಿ ನೆರಳು-ಬೆಳಕಿನ ಸ್ಪಷ್ಟತೆ ಕಿವಿಯಲ್ಲಿ ಓಲೆ, ತಲೆಯ ಕೇಶವಿನ್ಯಾಸ, ಕಣ್ಣಿನ ಸ್ಪಷ್ಟತೆ ಇವುಗಳೆಲ್ಲವೂ ನೈಜವಾಗಿ ಮೂಡಿ ಬಂದಿವೆ. ಹಿನ್ನೆಲೆಯಲ್ಲಿ ನೀಲಿ ಮಿಶ್ರಿತ ಕೆಂಪು ಬಣ್ಣದ ಲೇಪನವಿದೆ.

೨೦. **ಹಾಲಂಡ್ ಸಿಗ್ನೋರ ಹ್ಯಾಂಡಿಯಸ್ ಶಿರಭಾವಚಿತ್ರ** : ಹಾಲಭಾವಿಯವರು ಹಾಲಂಡ ಸಿಗ್ನೋರ್ ಹ್ಯಾಂಡಿಯಸ್ ಅವರ ಭಾವಚಿತ್ರವನ್ನು ೧೯೬೦ರಲ್ಲಿ ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಇಲ್ಲಿ ಪಾಶ್ಚಿಮಾತ್ಯ ಶಿಲ್ಪಿಯ ವರ್ಣವನ್ನು ಬಳಸಿಕೊಂಡು ಗಾಢವಾದ ನೆರಳು-ಬೆಳಕನ್ನು ತೋರಿಸಿದ್ದಾರೆ. ಮುಖದಲ್ಲಿ ಕೇಶವಿನ್ಯಾಸ ಕನ್ನಡಕ ಹಾಕಿರುವ ನೈಜ ದೃಷ್ಟಿ ಈ ಕಲಾಕೃತಿಯಲ್ಲಿದೆ. ಹಿನ್ನೆಲೆಯಲ್ಲಿ ಹಸಿರು ಮತ್ತು ಹಳದಿ ಬಣ್ಣದ ಲೇಪನವಿದ್ದು ಕಲಾಕೃತಿಯ ಈಗ ಸ್ವಲ್ಪ ಮಟ್ಟಿಗೆ ಹಾಳಾಗಿದೆ.

**ಜಲವರ್ಣ**

೨೧. **ಮಹಿಳೆಯ ಶಿರಭಾವಚಿತ್ರ** : ಹಾಲಭಾವಿಯವರು ೧೯೬೨ರಲ್ಲಿ ಈ ಕಲಾಕೃತಿಯನ್ನು ಜಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಮುಖವನ್ನು ಕೆಳಗಡೆ ಮಾಡಿಕೊಂಡು ಕುಳಿತಿರುವ ದೃಶ್ಯ-ಇದಾಗಿದೆ. ಮುಖದಲ್ಲಿ ಏನೋ ವಿಚಾರವಂತಿಕೆಯ ಭಾಸವಾದಂತೆ ಕಾಣುತ್ತದೆ ಮುಖದ ಗಾಢವಾದ ನೆರಳು-ಬೆಳಕಿನ ವಿನ್ಯಾಸದ ಹಾಳೆಯನ್ನು ಹಾಗೆಯೇ ಬಿಳಿಯಾಗಿ ಬಿಟ್ಟಿದ್ದು ಇಲ್ಲಿ ಈ ಕೃತಿಯ ವಿಶೇಷವೆನ್ನಬಹುದು.

೨೨. **ಪುರುಷ ಶಿರಭಾವಚಿತ್ರ** : ಹಾಲಭಾವಿಯವರು ೧೯೬೧ರಲ್ಲಿ ಈ ಕಲಾಕೃತಿಯನ್ನು ಜಲವರ್ಣದಲ್ಲಿ ರಚಿಸಿದ್ದಾರೆ. ಈ ಕಲಾಕೃತಿಯಲ್ಲಿ ನೇರವಾದ ದೃಷ್ಟಿ, ತಲೆಯ ಮೇಲೆ ಹಸಿರು ಬಣ್ಣದ ಪೇಟಾ ಧರಿಸಿರುವ ದೃಶ್ಯ-ಕೊರಳಲ್ಲಿ ಪದಕನ್ನು ಧರಿಸಿರುವ ದೃಶ್ಯ ಇಲ್ಲಿ ನೈಜವಾಗಿ ಈ ಕಲಾಕೃತಿಯಲ್ಲಿ ಮೂಡಿ ಬಂದಿದೆ. ಪೇಟಾದಲ್ಲಿ, ಗಾಢವಾದ ನೆರಳು-ಬೆಳಕು ತೋರಿಸಿದರೆ, ಮುಖದಲ್ಲ ಸಮಾಂತರವಾದ ನೆರಳು-ಬೆಳಕನ್ನು ತೋರಿಸಿದ್ದಾರೆ. ಹಿನ್ನೆಲೆಯಲ್ಲಿ ಹಳದಿ ಮಿಶ್ರಿತ ಹಸಿರು ಬಣ್ಣದಲ್ಲಿ ಲೇಪನವಿದೆ.

೨೩. **ಗೋರವಪ್ಪ ಶಿರಭಾವಚಿತ್ರ** : ಹಾಲಭಾವಿಯವರು ಈ ಕಲಾಕೃತಿಯನ್ನು ೧೯೬೫ರಲ್ಲಿ ಜಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ತಲೆಯ ಮೇಲಿನ ತೆಳು ಕೆಂಪು ವರ್ಣದ ರುಮಾಲಿನ ವಿನ್ಯಾಸದಲ್ಲಿ ನೆರಳು-ಬೆಳಕಿನ ಸ್ಪಷ್ಟತೆಯ ಛಾಯೆಯನ್ನು ತೋರಿಸಿ ಬಲಭಾಗಕ್ಕೆ ಬೆಳಕಿನ ಸ್ಪಷ್ಟತೆಯನ್ನು ತೋರಿಸಿದ್ದರಿಂದ ಕೃತಿ ಹೆಚ್ಚು ಮೆರಗು ಬಂದಿದೆ. ಎಡಗೈಯಲ್ಲಿ ಹಿಡಿದಿರುವ ಗಂಟೆ ಮತ್ತು ತ್ರಿಶೂಲ, ಬಲಗೈಯಲ್ಲಿ ಡಮರನ್ನು ಹಿಡಿದಿರುವದು ಸ್ಪಷ್ಟತೆಯಿಂದ ಕೂಡಿದೆ. ಜಲವರ್ಣಗಳನ್ನು ಕಡಿಮೆ ಪ್ರಮಾಣದಲ್ಲಿ ಬಳಸಿಕೊಂಡು ಕಲಾಕೃತಿಗೆ ಹೆಚ್ಚು ಮೆರಗು ತಂದಿದ್ದಾರೆ. ಹಿನ್ನೆಲೆಯಲ್ಲಿ ತೆಳು ವರ್ಣದ ಹಳದಿ ಬಣ್ಣದ ಲೇಪನವಿದೆ.

**ಪೂರ್ಣ ಶಿರಭಾವಚಿತ್ರಗಳು (ತೈಲವರ್ಣ)**

೧. **ಮಹಿಳೆಯ ಪೂರ್ಣ ಶಿರಭಾವಚಿತ್ರ** : ಹಾಲಭಾವಿಯವರು ಮಹಿಳೆಯ ಪೂರ್ಣ ಭಾವ ಚಿತ್ರವನ್ನು ೧೯೮೫ರಲ್ಲಿ ತೈಲ ವರ್ಣದಲ್ಲಿಮಾಧ್ಯಮದಲ್ಲಿ ರಚಿಸಿದ್ದಾರೆ. ಪೂರ್ಣಭಾವಚಿತ್ರಗಳನ್ನು ಇಲ್ಲಿ ಗಮನಿಸಿದಾಗ ಭಾವಚಿತ್ರಗಳಿಗಿಂತ ಪೂರ್ಣಭಾವ ಚಿತ್ರಗಳಲ್ಲಿ ಸೌಂದರ್ಯ ಪ್ರಜ್ಞೆ, ಸ್ಪಷ್ಟತೆ ಎದ್ದು ಕಾಣುವದು. ಇಲ್ಲಿ ಮಹಿಳೆಯ ಬಲಭಾಗಕ್ಕೆ ತಿರುಗಿ ಕುಳಿತಿರುವದು. ಮುಖವನ್ನು ನೇರವಾಗಿ ಕಲಾವಿದರನ್ನು ನೋಡುತ್ತಿರುವುದು. ಹಳದಿ ಸೀರೆಯಲ್ಲಿ ನೀರಿಗೆಯಲ್ಲಿ ನೆರಳು-ಬೆಳಕಿನ ಸ್ಪಷ್ಟತೆ ಮುಖದಲ್ಲಿಯ ಹಾವಭಾವ ಎದ್ದು ಕಾಣುವಂತಿದೆ. ಕೈಯಲ್ಲಿ ಗುಲಾಬಿ ಹಿಡಿದುರುವುದು. ಕೊರಳಲ್ಲಿಯ ಮತ್ತು ಕೈಯಲ್ಲಿ ಆಭರಣಗಳು ಇಲ್ಲಿ ಸ್ಪಷ್ಟವಾಗಿ ಮೂಡಿ ಬಂದಿವೆ. ಹಿನ್ನೆಲೆಯಲ್ಲಿ ನೀಲಿವರ್ಣ ಲೇಪನವಿದೆ.

**೨. ಮಹಿಳೆಯ ಪೂರ್ಣ ಶಿರಭಾವಚಿತ್ರ** : ಹಾಲಭಾವಿಯವರು ೧೯೮೦ರಲ್ಲಿ ಎನ್.ಸಿ.ಸಿ. ಬಟ್ಟೆಗಳನ್ನು ಹಾಕಿಕೊಂಡಿರುವ ಮಹಿಳೆಯ ಕಲಾಕೃತಿಯನ್ನು ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಬಲಭಾಗಕ್ಕೆ ತಿರುಗಿ ಕುಳಿತಿರುವ ಈ ಕೃತಿಯು ಆಕರ್ಷಕವಾಗಿದೆ. ತಲೆ ಮೇಲಿನ ಟೊಪ್ಪಿಗೆ, ಬಟ್ಟಗಳಲ್ಲಿಯ ಗಾಢವಾದ ನೆರಳು–ಬೆಳಕಿನ ವ್ಯತ್ಯಾಸ, ಕೆಳಗಡೆ ಕುಳಿತಿರುವ ಕಟ್ಟೆಯ ವಿನ್ಯಾಸ ನೈಜವಾಗಿ ಮೂಡಿ ಬಂದಿದೆ. ಮುಖ ಮತ್ತು ಕೈ ಕೈಬೆರಳುಗಳಲ್ಲಿಯ ಹಿನ್ನೆಲೆ ಬೆಳಕಿನ ವಿನ್ಯಾಸ ಯಥೇಚ್ಛವಾಗಿ ಮೂಡಿ ಬಂದಿದೆ. ಹಿನ್ನಲೆಯಲ್ಲಿ ತೆಳು ವರ್ಣದ ಲೇಪನವಿದೆ.

**೩. ಮಹಿಳೆಯ ಪೂರ್ಣ ಶಿರಭಾವಚಿತ್ರಗಳು** : ಹಾಲಭಾವಿಯವರು ಈ ಅಜ್ಜಿಯ ಪೂರ್ಣಭಾವಚಿತ್ರವನ್ನು ೧೯೩೫ರಲ್ಲಿ ತೈಲವರ್ಣದ ಮಾಧ್ಯಮದಲ್ಲಿ ರಚಿಸಿದ್ದಾರೆ. ಇಲ್ಲಿ ಗಾಢವಾದ ವರ್ಣಗಳನ್ನು ಬಳಸಿ ಕೃತಿಗೆ ಹೆಚ್ಚು ಮೆರಗು ತಂದಿದ್ದಾರೆ. ಮುಖದ ಗಂಭೀರತೆ ಸೀರೆಯ ನೀರಿಗೆಯ ವಿನ್ಯಾಸಗಳು, ಕುಪ್ಪಸದಲ್ಲಿ ವರ್ಣಾಲಂಕಾರ ತುಂಬಾ ನೈಜವಾಗಿ ಮೂಡಿ ಬಂದಿದೆ. ಮುಖ ಮತ್ತು ದೇಹ ಭಾಗ, ಸೀರೆಯಲ್ಲಿ ಗಾಢವಾದ ನೆರಳು–ಬೆಳಕನ್ನು ತೋರಿಸಿದ್ದಾರೆ. ಕಣ್ಣಿನ ನೇರ ದೃಷ್ಟಿ, ಹಣೆಯ ಮೇಲಿನ ಕುಂಕುಮ, ಕೊರಳಲ್ಲಿಯ ಸರ ತುಂಬಾ ಆಕರ್ಷಕವಾಗಿ ಮೂಡಿ ಬಂದಿವೆ. ಹಿನ್ನೆಲೆಯಲ್ಲಿ ತೆಳು ವರ್ಣದ ಹಳದಿ ಬಣ್ಣದ ಲೇಪನವಿದೆ.

**೪. ಮಹಿಳೆಯ ಪೂರ್ಣ ಶಿರಭಾವಚಿತ್ರ** : ಹಾಲಭಾವಿಯವರ ಈ ಕಲಾಕೃತಿಯನ್ನು ೧೯೩೪ರಲ್ಲಿ ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಇಲ್ಲಿ ದೇಹದ ಅರ್ಧಪೂರ್ಣವನ್ನು ಚಿತ್ರಿಸಿದ್ದಾರೆ. ಮುಖದ ಪಾಶ್ಚನೋಟ, ಕೆಂಪು ವರ್ಣದ ಸೀರೆ, ನೆರಳು–ಬೆಳಕಿನ ಸ್ಪಷ್ಟತೆ, ಹಾಗೂ ಅಂಗರಚನಾ ಶಾಸ್ತ್ರದ ಪ್ರಭುದ್ಧತೆ ಇಲ್ಲಿ ಸ್ಪಷ್ಟವಾಗಿದೆ. ಸೀರೆಯಲ್ಲಿಯ ನೆರಳು–ಬೆಳಕಿನ ಸ್ಪಷ್ಟತೆ ವಿಸ್ತಾರವಾಗಿ ಮೂಡಿ ಬಂದಿದೆ. ಹಿನ್ನೆಲೆಯಲ್ಲಿ ತೆಳು ನೀಲಿ ವರ್ಣದ ಲೇಪನವಿದೆ. ಕೆಳಗಡೆ ಕುಳಿತಿರುವ ಪೆಟ್ಟಿಗೆ ಮೇಲೆ ನೀಲಿ ವರ್ಣದ ಲೇಪನವಿದೆ.

**೫. ಅರೆನಗ್ನ ಪೂರ್ಣ ಶಿರಭಾವಚಿತ್ರಗಳು** : ಹಾಲಭಾವಿಯವರು ಜೆ. ಜೆ. ಸ್ಕೂಲ್ ಆಫ್ ಆರ್ಟ್‌ನಲ್ಲಿ ವ್ಯಾಸಂಗ ಮಾಡುತ್ತಿರುವಾಗ ಕಲಾ ಶಾಲೆಯಲ್ಲಿ ೧೯೩೬ರಲ್ಲಿ ನಗ್ನ ಅರೆನಗ್ನ ರೂಪದರ್ಶಿಗಳನ್ನು ಎದುರಿಗೆ ಕೂಡಿಸಿ, ಪೂರ್ಣ ಪ್ರಮಾಣದ ಚಿತ್ರಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಕೆಲವು ಕಲಾಕೃತಿಗಳನ್ನು ಇಲ್ಲಿ ವಿವರಿಸಲಾಗಿದೆ. ಒಬ್ಬ ಪುರುಷ ರೂಪದರ್ಶಿಯನ್ನು ಎಡಭಾಗಕ್ಕೆ ಕೂಡ್ರಿಸಿ, ಕೈಯ ಗದ್ದಕ್ಕೆ ಹಿಡಿದುಕೊಂಡು ಕುಳಿತಿರುವ ದೃಶ್ಯವಿದೆ. ಕಪ್ಪು ಬಣ್ಣದ ಹೆಣ್ಣನ್ನು ಸ್ಪಷ್ಟವಾಗಿ ತೈಲವರ್ಣ ಮಾಧ್ಯಮದಲ್ಲಿ ಲೇಪನ ಮಾಡಿದ್ದಾರೆ. ಈ ಕಲಾಕೃತಿಯಲ್ಲಿ ಅಂಗರಚನಾ ಶಾಸ್ತ್ರದ ಪ್ರಭುದ್ಧತೆಯನ್ನು ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ರೂಪದರ್ಶಿಯು ಕೆಳಗಡೆ ನೋಡುತ್ತಿರುವ ದೃಶ್ಯ ರೂಪದರ್ಶಿಯಲ್ಲಿಯ ನೆರಳು ಬೆಳಕನ್ನು ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಹಿನ್ನೆಲೆಯಲ್ಲಿ ಹಳದಿ ಬಣ್ಣದ ಲೇಪನವಿದ್ದು ಕೆಳಗಡೆ ವರ್ಣಗಳ ಲೇಪನವಿದೆ.

**೬. ನಗ್ನ ಮಹಿಳೆ ಪೂರ್ಣ ಶಿರಭಾವಚಿತ್ರ** : ಹಾಲಭಾವಿಯವರು ೧೯೩೬ರಲ್ಲಿ ಮಹಿಳೆಯ ನಗ್ನ ಪೂರ್ಣ ಭಾವಚಿತ್ರವನ್ನು ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಮುಖದಲ್ಲಿಯ ಗಾಂಭಿರ್ಯತೆ, ಅಂಗಾಂಗಗಳಲ್ಲಿಯ ಗಾಢವಾದ ಬೆರಳು–ಬೆಳಕಿನ ವಿನ್ಯಾಸ, ಅಂಗರಚನಾ ಶಾಸ್ತ್ರದ ಪೂರ್ಣ ಪ್ರಮಾಣದ ಪರಿಕಲ್ಪನೆ ಈ ಕಲಾಕೃತಿಯಲ್ಲಿದೆ. ಹಿನ್ನಲೆ ಹಸಿರು ಬಣ್ಣದ ಲೇಪನವಿದೆ.

**೭. ವೀರಭದ್ರಪ್ಪ ಹಾಲಭಾವಿ ಪೂರ್ಣ ಶಿರಭಾವಚಿತ್ರ** : ಹಾಲಭಾವಿಯವರು ತಮ್ಮ ತಂದೆಯವರಾದ ಶ್ರೀ ವೀರಭದ್ರಪ್ಪ ಹಾಲಭಾವಿಯವರ ಪೂರ್ಣ ಭಾವಚಿತ್ರವನ್ನು ೧೯೩೪ ರಲ್ಲಿ ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ತಲೆಯ ಮೇಲೆ ಮೈಸೂರ ಪೇಟಾ, ಕೋಟು, ಧೋತರ, ಇವೆಲ್ಲವುಗಳ ವಿನ್ಯಾಸ ಇಲ್ಲಿ ನೈಜವಾಗಿ ಮೂಡಿ ಬಂದಿದೆ. ಮುಖದಲ್ಲಿಯ ಮಂದಹಾಸದ ನಗು, ಸ್ಪಷ್ಟವಾದ ನಗು ಬೆಳಕಿನ ಗಾಢತೆ, ಕುಳಿತಿರುವ ಕುರ್ಚಿಯ ವಿನ್ಯಾಸ ಹಿನ್ನೆಲೆಯಲ್ಲಿ ಪುಸ್ತಕಗಳ ಸಲುವಾಗಿ ವಿನ್ಯಾಸ ಇಲ್ಲಿ ನೈಜವಾಗಿ ಮೂಡಿ ಬಂದಿದೆ.

**೮. ಯುವಕನ ಪೂರ್ಣ ಶಿರಭಾವಚಿತ್ರ** : ಹಾಲಭಾವಿಯವರು ೧೯೩೬ರಲ್ಲಿ ಮೆಟ್ಟಿಲುಗಳ ಮೇಲೆ ನಿಂತಿರುವ ಯುವಕನ ಪೂರ್ಣಭಾವಚಿತ್ರ ಚಿತ್ರವನ್ನು ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಕೈಯಲ್ಲಿ ವಸ್ತುವನ್ನು ಹಿಡಿದಿಕೊಂಡಿರುವ, ಹಾಗೂ ಮೆಟ್ಟಿಲುಗಳ ಮೇಲೆ ಒಂದು ಕಾಲನ್ನು ಕೈಯನ್ನು ಹಿಂದುಗಡೆ ಇಟ್ಟುಕೊಂಡಿರುವ ದೃಶ್ಯ ಇಲ್ಲಿ ಹಾಫ್ ಪ್ಯಾಂಟ್ ಹಾಗೂ ಬುಷ್ ಶರ್ಟನಲ್ಲಿ ನೆರಳು–ಬೆಳಕು ಸ್ಪಷ್ಟವಾಗಿ ಮೂಡಿ ಬಂದಿದೆ. ಮುಖದಲ್ಲಿ ಗಾಂಭಿರ್ಯತೆ, ಕೈಕಾಲುಗಳಲ್ಲಿ ವರ್ಣಗಳ ವಿನ್ಯಾಸ ಸ್ಪಷ್ಟವಾಗಿ ಮೂಡಿ ಬಂದಿದೆ. ಮೆಟ್ಟಿಲುಗಳ ವಿನ್ಯಾಸ ಇಲ್ಲಿ ನೈಜವಾಗಿ ಮೂಡಿ ಬಂದಿದೆ.

**೯. ಮಹಿಳೆಯ ಪೂರ್ಣ ಶಿರಭಾವಚಿತ್ರ** : ಹಾಲಭಾವಿಯವರು ೧೯೩೬ರಲ್ಲಿ ಮಹಿಳೆಯ ಪೂರ್ಣ ಪ್ರಮಾಣದ ಕಲಾಕೃತಿಯನ್ನು ತೈಲವರ್ಣದಲ್ಲಿ ರಚಿಸಿದ್ದಾರೆ. ಕೈಗಳನ್ನು ಹಿಂದೆ ಕಪಾಟಿಗೆ ಹಿಡಿದುಕೊಂಡು ಆಸರೆಯಾಗಿ ನಿಂತಿರುವ ದೃಶ್ಯವಿದೆ. ಕಲಾಕೃತಿಯಲ್ಲಿಯ ಮುಖದ ವಿನ್ಯಾಸ ಹಾವ, ಭಾವ, ಸಾರಿ ಮತ್ತು ಕುಪ್ಪಸದಲ್ಲಿಯ ನೀರಿಗೆಗಳು ಸ್ಪಷ್ಟವಾದ ವಿನ್ಯಾಸ, ಗಾಢವಾದ ನೆರಳು ಬೆಳಕಿನ ವಿನ್ಯಾಸ ಸ್ಪಷ್ಟವಾಗಿ ಮೂಡಿ ಬಂದಿದೆ. ಹಿನ್ನೆಲೆಯಲ್ಲಿ ಕಪಾಟಿನ ಮೇಲೆ ಕಂದಿಲಿನ ವಿನ್ಯಾಸ, ಮತ್ತು ಕಿಟಕಿಯ ಸ್ಪಷ್ಟವಾದ ವಿನ್ಯಾಸ ಮೂಡಿ ಬಂದಿದೆ. ಈ ಕಲಾಕೃತಿ ಇಂದಿಗೂ ಸ್ಪಷ್ಟವಾಗಿ ಕಾಣುವಂತೆ ಶ್ರೀಮಂತ ವರ್ಣಗಳನ್ನು ಹಾಲಭಾವಿಯವರು ಬಳಸಿಕೊಂಡಿದ್ದು ಇಲ್ಲಿ ವಿಶೇಷ ಎನ್ನಬಹುದು.

**ಜಲವರ್ಣ**

**೧೦. ಶ್ರೀಮತಿ ಸರ್ವಮಂಗಳಾ ಹಾಲಭಾವಿ ಅವರ ಪೂರ್ಣ ಶಿರಭಾವಚಿತ್ರ** : ಹಾಲಭಾವಿಯವರು ತಮ್ಮ ಪತ್ನಿಯ ಪೂರ್ಣಭಾವ ಚಿತ್ರವನ್ನು ೧೯೮೩ರಲ್ಲಿ ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಕೆಳಗಡೆ ಕುಳಿತಿರುವ ಕುರ್ಚಿಯ ವಿನ್ಯಾಸ ಮತ್ತು ಪುಸ್ತಕದ ಸ್ಪಷ್ಟತೆ, ಹಿನ್ನೆಲೆಯಲ್ಲಿ ರೇಡಿಯೋ ವಿನ್ಯಾಸ ನೈಜವಾಗಿ ಮೂಡಿ ಬಂದಿದೆ. ಮುಖದಲ್ಲಿಯ ಹಾವ–ಭಾವ ನೆರಳು ಬೆಳಕಿನ ಸ್ಪಷ್ಟತೆ, ಕೈಗಳಲ್ಲಿಯ ವರ್ಣಗಳ ವಿನ್ಯಾಸ ಬಹಳ ಸ್ಪಷ್ಟವಾಗಿ ಮೂಡಿ ಬಂದಿದೆ. ಕಲಾಕೃತಿಯು ತೈಲವರ್ಣಗಳ ಶ್ರೀಮಂತಿಕೆಯನ್ನು ಎದ್ದು ಕಾಣುವಂತೆ ಮಾಡಿದ್ದಾರೆ. ಹಿನ್ನೆಲೆಯಲ್ಲಿ ನೀಲಿ ಲೇಪನವಿದೆ.

**೧೧. ತಾರಾ ಪವಾರ ಅವರ ಪೂರ್ಣ ಶಿರಭಾವಚಿತ್ರ** : ಹಾಲಭಾವಿಯವರು ೧೯೬೫ ರಲ್ಲಿ ತಾರಾ ಪವಾರ ಅವರ ಪೂರ್ಣ ಭಾವಚಿತ್ರವನ್ನು ಜಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ತಾರಾ ಪವಾರ ಅವರು ಕೈಯಲ್ಲಿ ಗ್ಲಾಸನ್ನು ಹಿಡಿದುಕೊಂಡು ಕುಳಿತಿರುವ ಕಲಾಕೃತಿ ನೈಜವಾಗಿ ಮೂಡಿ ಬಂದಿದೆ. ಮುಖದಲ್ಲಿ ಮಂದಹಾಸದ ನಗು, ದೇಹದ ಅಂಗರಚನಾ ಶಾಸ್ತ್ರ, ಮತ್ತು ತೆಳು ವರ್ಣದಲ್ಲಿ ಗಾಡವಾದ ನೆರಳು ಬೆಳಕಿನ ಸ್ಪಷ್ಟತೆ ಎದ್ದು ಕಾಣುವಂತಿದೆ. ಹಿನ್ನೆಲೆಯಲ್ಲಿ ಹಳದಿ ಬಣ್ಣದ ಲೇಪನವಿದೆ.

**೧೨. ಮಹಿಳೆಯ ಪೂರ್ಣ ಶಿರ ಭಾವಚಿತ್ರ** : ಹಾಲಭಾವಿಯವರು ೧೯೬೦ರಲ್ಲಿ ಮಹಿಳೆಯ ಪೂರ್ಣಭಾವ ಚಿತ್ರವನ್ನು ಜಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ, ಈ ಕಲಾಕೃತಿಯು ಮುಖದಲ್ಲಿಯ ಮಂದಹಾಸ, ಕಣ್ಣುಗಳಲ್ಲಿಯ ನೀಳ ನೋಟ, ಸೀರೆಯಲ್ಲಿಯ ತೆಳವಾದ ವರ್ಣಗಳು, ಕಲಾಕೃತಿಯಲ್ಲಿ ಅಲ್ಪ ಪ್ರಮಾಣದ ನೆರಳು ಬೆಳಕನ್ನು ತೋರಿಸಿ ಮೆರಗು ನೀಡುವದು. ಕಲಾಕೃತಿಯಲ್ಲಿ ಅಂಗರಚನಾ ಶಾಸ್ತ್ರದ ಸ್ಪಷ್ಟತೆಯನ್ನು ನೀಡಿದ್ದಾರೆ. ಹಿನ್ನೆಲೆಯಲ್ಲಿ ಹಳದಿ ಮಿಶ್ರಿತ ನೀಲಿ ವರ್ಣದ ಛಾಯೆ ಕಂಡುಬರುವುದು.

**ತೈಲವರ್ಣ**

**೧೩. ಒಂಟಮುರಿ ರಾಜಾ ಲಕಮನಗೌಡರ ದೇಸಾಯಿ ಪೂರ್ಣ ಶಿರಭಾವಚಿತ್ರ** : ಹಾಲಭಾವಿಯವರು ೧೯೬೮ರಲ್ಲಿ ಒಂಟಮುರಿ ರಾಜಾ ಲಕಮನಗೌಡರ ದೇಸಾಯಿಯವರ ಪೂರ್ಣ ಪ್ರಮಾಣದ ಭಾವಚಿತ್ರವನ್ನು ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಬಲಗೈಯಲ್ಲಿ ಬಡಿಗೆಯನ್ನು ಹಿಡಿದಿರುವ ದೃಶ್ಯ, ತಲೆಗೆ ಜರದಾರ

ರೇಶ್ಮೆ ಪೇಟಾ, ಕೊರಳಿಲ್ಲಿ ಸ್ವರ್ಣಪದಕ, ಉದ್ದನೆಯ ಕರಿಕೋಟನ್ನು ಶುಭ್ರವಾದ ಬಿಳಿ ಪ್ಯಾಂಟನ್ನು ಧರಿಸಿರುವ ದೇಸಾಯಿಯವರು ಹಾಲಭಾವಿಯವರ ಕುಂಚದಲ್ಲಿ ನೈಜವಾಗಿ ಮೂಡಿ ಬಂದಿದ್ದಾರೆ. ಸಮಪ್ರಮಾಣದ ನೆರಳು-ಬೆಳಕು, ಹಿನ್ನೆಲೆಯಲ್ಲಿ ಪ್ರಕೃತಿಯ ದೃಶ್ಯ ಮತ್ತು ಕೆಂಪು ಬಟ್ಟೆಯ ಸ್ಕರ್ಟನ್ ನೈಜವಾಗಿ ಮೂಡಿ ಬಂದಿದೆ.

**೧೪. ಮಹಾತ್ಮ ಗಾಂಧೀಜಿ ಪೂರ್ಣ ಶಿರಭಾವಚಿತ್ರ** : ಹಾಲಭಾವಿಯವರು ಮಹಾತ್ಮಗಾಂಧೀಜಿಯ ಪೂರ್ಣಭಾವಚಿತ್ರವನ್ನು ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಆದರೆ ಕಲಾ ಕೃತಿಯ ಛಾಯಾ ಚಿತ್ರವು ಮಾತ್ರ ಕಪ್ಪು-ಬಿಳುಪು ಇದೆ. ವರ್ಣಗಳ ವಿನ್ಯಾಸ, ಗಾಢವಾದ ನೆರಳು-ಬೆಳಕು, ಕೊರಳಿಗೆ ಹಾಕಿಕೊಂಡಿರುವ ಶಾಲು, ಮತ್ತು ಪಂಜೆಯಲ್ಲಿ ನೀರಿಗೆಯ ವಿನ್ಯಾಸಗಳು ಸ್ಪಷ್ಟವಾಗಿ ಮೂಡಿ ಬಂದಿದೆ. ಹಿನ್ನೆಲೆಯಲ್ಲಿ ಪ್ರಕೃತಿಚಿತ್ರ, ಕೈಯಲ್ಲಿ ಪತ್ರಿಕೆಯನ್ನು ಹಿಡಿದುಕೊಂಡಿರುವ ನೈಜತೆ, ಕಾಲುಗಳ ಚಲನೆಯನ್ನು ಗಮನಸಿದಾಗ ಗಾಂಧೀಜಿ ಚಲನೆಯಲ್ಲಿರುವುದು ಕಂಡು ಬರುತ್ತದೆ.

**ಪ್ರಕೃತಿ ಚಿತ್ರಗಳು (ಜಲವರ್ಣ)**

ಹಾಲಭಾವಿಯವರು ಭಾವಚಿತ್ರಗಳು, ಪೂರ್ಣಭಾವಚಿತ್ರಗಳ ರಚಿಸುವುದರ ಜೊತೆಗೆ ಅನೇಕ ಪ್ರಕೃತಿ ಚಿತ್ರಗಳನ್ನು ಜಲವರ್ಣ ಮಾಧ್ಯಮದಲ್ಲಿ ಧಾರವಾಡದ ಸುತ್ತ ಮುತ್ತಲಿನ ಪರಿಸರ, ಮತ್ತು ಹಂಪೆಯ ನಿಸರ್ಗ ಚಿತ್ರಗಳನ್ನು ರಚಿಸಿದ್ದಾರೆ.

**೧. ಹೊನ್ನಾವರದ ಸ್ತೂಪ (ಬೆಟ್ಟ)** : ಹಾಲಭಾವಿಯವರು ೧೯೮೩ರಲ್ಲಿ ಹೊನ್ನಾವರದ ಸ್ತೂಪದ ಚಿತ್ರವನ್ನು ಜಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಮುಂದೆ ಸ್ತೂಪದ (ಕಂಬದ) ಚಿತ್ರವಿದ್ದು, ಅದರಲ್ಲಿ ಯಥಾದರ್ಶನದ ಪರಿಕಲ್ಪನೆ ಸ್ಪಷ್ಟವಾಗಿ ಚಿತ್ರಿಸಿದ್ದು, ಹಿನ್ನೆಲೆಯಲ್ಲಿ ವಿಮಾನ ಹೋಗುವುದನ್ನು ಚಿತ್ರಿಸಿದ್ದಾರೆ ಮತ್ತು ಬಲಭಾಗಕ್ಕೆ ಹಕ್ಕಿಗಳ ಚಿತ್ರಗಳನ್ನು ಚಿತ್ರಿಸಿದ್ದು, ಇವುಗಳನ್ನೆಲ್ಲ ಗಮನಿಸಿದಾಗ ಹಾಲಭಾವಿಯವರ ಕೃತಿ ರಚನೆ ಎಷ್ಟೊಂದು ತೀವ್ರವಾಗಿತ್ತೆಂದು ತಿಳಿಯಲು ಇದೆ ನಿದರ್ಶನವಾಗಿದೆ. ಬಣ್ಣದ ಬಳಕೆ ಮೂಡಿ ಕಲಾಕೃತಿಗೆ ಮೆರಗು ನೀಡಿದ್ದಾರೆ.

**೨. ಹಂಪಿ** : ಹಾಲಭಾವಿಯವರು ೧೯೨೭ರಲ್ಲಿ ದ್ವಾರಬಾಗಿಲವನ್ನು ಜಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಈ ಕಲಾಕೃತಿಯಲ್ಲಿ ಯಥಾದರ್ಶನ ಸ್ಪಷ್ಟವಾಗಿ ಮೂಡಿ ಬಂದಿದ್ದು, ವರ್ಣಗಳ ವಿನ್ಯಾಸ ಇಲ್ಲಿ ಸ್ಪಷ್ಟವಾಗಿ ಮೂಡಿ ಬಂದಿದೆ. ಬಾಗಿಲಲ್ಲಿ ಓರ್ವ ವ್ಯಕ್ತಿ ನಿಂತಿದ್ದು, ಮುಂದೆ ನಿಸರ್ಗವನ್ನು ತೋರಿಸಿದ್ದಾರೆ. ಈ ಕಲಾಕೃತಿಯಲ್ಲಿ ಗಾಢವಾದ ನೆರಳು-ಬೆಳಕು ಇದ್ದು, ಹಿನ್ನೆಲೆಯಲ್ಲಿ ಬೆಳಕಿನ ಸಾಂದ್ರತೆಯನ್ನು ತೋರಿಸಿದ್ದಾರೆ. ಈ ಕಲಾಕೃತಿಯನ್ನು ಗಮನಿಸಿದಾಗ ಹಾಲಭಾವಿಯವರ ದೃಷ್ಟಿಕೋನ ಹೇಗೆ ವಿಭಿನ್ನವಾಗಿತ್ತು ಎಂದು ತಿಳಿದು ಬರುತ್ತದೆ.

**೩. ಹಂಪಿ** : ಹಾಲಭಾವಿಯವರು ೧೯೨೭ ರಲ್ಲಿ ಹಂಪಿಯ ಕಲ್ಲುಬಂಡಿಗಳ ಮಧ್ಯದಲ್ಲಿನ ನದಿಯ ಕಲಾಕೃತಿಯನ್ನು ಜಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಈ ಕೃತಿಯಲ್ಲಿ ಗಾಢವಾದ ಛಾಯೆಯನ್ನು ಬಿಂಬಿಸಿ ಕೃತಿಗೆ ಮೆರಗು ನೀಡಿದ್ದಾರೆ. ಹಿನ್ನೆಲೆಯಲ್ಲಿ ನದಿಗಳು ಸ್ಪಷ್ಟತೆಯಿಲ್ಲದಿದ್ದರೂ ಕಲ್ಲು ಬಂಡಿಗಳು, ನೀರು ಇಲ್ಲಿ ಸ್ಪಷ್ಟವಾಗಿ ಮೂಡಿ ಬಂದಿವೆ. ದೋಣಿಯಲ್ಲಿ ಹೋಗುತ್ತಿರುವ ಇಬ್ಬರು ದಂಪತಿಗಳ ಆಕೃತಿಗಳು ಸ್ಪಷ್ಟವಾಗಿಲ್ಲದಿದ್ದರೂ, ವರ್ಣಗಳ ವಿನ್ಯಾಸದಿಂದ ಸ್ಪಷ್ಟತೆಯಿಂದ ಕೂಡಿದೆ ಎನ್ನಿಸುತ್ತದೆ.

**೪. ರೇಲ್ವೆ ಸೇತುವೆ (ಧಾರವಾಡ)** : ಹಾಲಭಾವಿಯವರು ೧೯೮೨ರಲ್ಲಿ ಧಾರವಾಡದ ರೇಲ್ವೆ ಸೇತುವೆಯನ್ನು ಜಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಈ ಕಲಾಕೃತಿಯಲ್ಲಿ ಯಥಾದರ್ಶನ ಪರಿಕಲ್ಪನೆ, ವರ್ಣಗಳ ವಿನ್ಯಾಸ, ವಸ್ತುಗಳ ಹೊಂದಾಣಿಕೆ, ನೈಜವಾಗಿ ಈ ಕೃತಿಯಲ್ಲಿ ಮೂಡಿ ಬಂದಿದೆ. ತೆಳುವಾದ ವರ್ಣಗಳನ್ನು ಈ ಕೃತಿಯಲ್ಲಿ ಲೇಪಿಸಿ ಕೃತಿಗೆ ಮೆರಗು ತಂದಿದ್ದಾರೆ.

**೫. ಹಾಲಭಾವಿಯವರ ಮನೆಯ ಪರಿಸರ** : ಹಾಲಭಾವಿಯವರು ೧೯೮೫ರಲ್ಲಿ ತಮ್ಮ ಮನೆಯ ಮುಂದಿನ ಭಾಗದಲ್ಲಿಯ ಹೂದೋಟ ಮತ್ತು ತೆಂಗಿನ ಮರಗಳು, ಹಂಚಿನ ಮನೆಗಳ ದೃಶ್ಯವನ್ನು ಜಲವರ್ಣ ಮಾಧ್ಯಮದಲ್ಲಿ

ಚಿತ್ರಿಸಿದ್ದಾರೆ. ಈ ಕಲಾಕೃತಿಯನ್ನು ಗಮನಿಸಿದಾಗ ಮನೆಯ ಮೇಲೆ ಮಹಿಳೆಯು ನಿಂತಿರುವ ದೃಶ್ಯ, ಮತ್ತು ಕೆಳಗಡೆ ಪುಟ್ಟಬಾಲಿಕೆ ನಿಂತಿರುವ ದರಶ್ಯವನ್ನು ನೋಡಿದಾಗ ಹಾಲಭಾವಿಯವರಿಗೆ ಯಥಾದರ್ಶನ ಪರಿಕಲ್ಪನೆ ಗಾಡವಾಗಿ ಅಭ್ಯಸಿಸಿರಬೇಕೆಂದು ಅನಿಸುತ್ತದೆ, ಗಿಡಗಳಿಗೆ ಗಾಡವಾದ ಹಸಿರು ಬಣ್ಣದ ಲೇಪನ ಮತ್ತು ನೆರಳು–ಬೆಳಕಿನ ವಿನ್ಯಾಸ ಸ್ಪಷ್ಟವಾಗಿ ಮೂಡಿ ಬಂದಿದೆ.

**೬. ಶ್ರೀರಾಮ ಮಂದಿರ, ದಾಂಡೇಲಿ :** ಹಾಲಭಾವಿಯವರು ೧೯೮೩ರಲ್ಲಿ ದಾಂಡೇಲಿಯ ಶ್ರೀರಾಮ ಮಂದಿರದ ದೃಶ್ಯವನ್ನು ಜಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ದೇವಸ್ಥಾನದಲ್ಲಿಯ ಯಥಾದರ್ಶನ ಸ್ಪಷ್ಟವಾಗಿದ್ದು, ಹಿನ್ನೆಲೆಯಲ್ಲಿ ಮರಗಳ ವಿನ್ಯಾಸ ಅವುಗಳಲ್ಲಿಯ ವರ್ಣಗಳ ವಿನ್ಯಾಸ, ದೇವಸ್ಥಾನದ ಬಾಗಿಲುಗಳಲ್ಲಿ ನಿಂತಿರುವ ಮಹಿಳೆಯರು, ಅಸ್ಪಷ್ಟತೆ ಇದ್ದರೂ ಕೃತಿಗಳು ಸ್ಪಷ್ಟವಾಗಿ ಕಾಣುತ್ತವೆ. ಕಲಾಕೃತಿಯಲ್ಲಿ ಗಾಢವಾದ ವರ್ಣಗಳನ್ನು ಬಳಸಿ ನೆರಳು–ಬೆಳಕಿನ ಸ್ಪಷ್ಟತೆಯನ್ನು ತೋರಿಸಿದ್ದಾರೆ.

**೭. ಬದಾಮಿ ಗುಹಾಲಯ :** ಹಾಲಭಾವಿಯವರು ೧೯೭೨ರಲ್ಲಿ ಐತಿಹಾಸಿಕ ಸ್ಥಳವಾದ ಬದಾಮಿಯ ಗುಹಾಲಯ ಕಲಾಕೃತಿಯನ್ನು ಜಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಕಲಾ ಶಾಲೆಯ ವಿದ್ಯಾರ್ಥಿಗಳನ್ನು ಅಭ್ಯಸಕ್ಕಾಗಿ ಪ್ರವಾಸಕ್ಕೆ ಕರೆದುಕೊಂಡು ಹೋದಾಗ ಹಾಲಭಾವಿಯವರು ಅಲ್ಲಿ ಅನೇಕ ನಿಸರ್ಗ ಚಿತ್ರಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಬದಾಮಿ ಗುಹಾಲಯವು ಒಂದು. ವಿದ್ಯಾರ್ಥಿಯು ಹದಿನೆಂಟು ಕೈಗಳ ನಟರಾಜ ಚಿತ್ರವನ್ನು ಬಿಡಿಸುತ್ತಿರುವ ದೃಶ್ಯ, ಮುಂದೆ ನಾಲ್ಕು ಕಂಬಗಳನ್ನೊಳಗೊಂಡ ಈ ಗುಹೆ ಗಾಢವಾದ ವರ್ಣಗಳ ಬಳಸಿ ನೆರಳು–ಬೆಳಕಿನ ವಿನ್ಯಾಸ ನೀಡಿದ್ದಾರೆ. ಇಲ್ಲಿ ಯಥಾದರ್ಶನದ ಪರಿಕಲ್ಪನೆ ಯಥೇಚ್ಛವಾಗಿ ಮೂಡಿ ಬಂದಿವೆ.

**೮. ಧಾರವಾಡ ರೈಲು ನಿಲ್ದಾಣ :** ಹಾಲಭಾವಿಯವರು ೧೯೮೩ರಲ್ಲಿ ಧಾರವಾಡದ ರೈಲು ನಿಲ್ದಾಣದ ಕಲಾಕೃತಿಯನ್ನು ಜಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಇಲ್ಲಿಯ ಸಹ ಯಥಾದರ್ಶನದ ಪರಿಕಲ್ಪನೆಯನ್ನು ಯಥೇಚ್ಛವಾಗಿ ಚಿತ್ರಿಸಿದ್ದಾರೆ. ರೈಲು ಮತ್ತು ಗಿಡಗಳು, ಹಳ್ಳಗಳು, ನೈಜವಾಗಿ ಈ ಕಲಾಕೃತಿಯಲ್ಲಿ ಮೂಡಿ ಬಂದಿವೆ. ಗಾಢವಾದ ನೆರಳು ಬೆಳಕಿನ ವಿನ್ಯಾಸ ಮೂಡಿ ಬಂದಿದೆ.

**೯. ಪ್ರಕೃತಿ ಚಿತ್ರಣ (ಗುಡಿಸಲು) :** ಹಾಲಭಾವಿಯವರು ೧೯೮೩ರಲ್ಲಿ ಗುಡಿಸಲದ ಮನೆಗಳನ್ನು ಸುತ್ತಲು ಪರಿಸರವನ್ನು ಗಾಢವಾದ ವರ್ಣಗಳೊಂದಿಗೆ ಕಲಾಕೃತಿಗೆ ಹೆಚ್ಚು ಮೆರಗು ನೀಡಿದ್ದಾರೆ. ಮುಂದೆ ಬೃಹದಾಕಾರದ ಮರದ ವಿನ್ಯಾಸವಿದ್ದು ಅಲ್ಲಿ ಗಾಢವಾದ ಹಸಿರು ಮತ್ತು ನೀಲಿ ವರ್ಣದ ಬಳಕೆ ಇದೆ. ಹಿನ್ನೆಲೆಯಲ್ಲಿ ತೆಳುವಾದ ವರ್ಣಗಳನ್ನು ಬಳಸಿದ್ದಾರೆ. ಸುತ್ತಲೂ ಬೇಲಿಯನ್ನು ಹಾಕಿರುವುದು ಒಳಗಡೆ ಗುಡಿಸಲವಿರುವುದು, ಮೇಲ್ಗಡೆ ವಿದ್ಯುತ್ ತಂತಿಯು ಹಾದು ಹೋಗಿರುವುದು, ಅವುಗಳ ಮೇಲೆ ಗಿಳಿಗಳು ಕುಳಿತಿರುವುದು ಕಂಡುಬರುತ್ತದೆ.

**೧೦. ಪ್ರಕೃತಿ (ಜಲಪಾತ) :** ಹಾಲಭಾವಿಯವರು ೧೯೮೩ರಲ್ಲಿ ಜಲಪಾತ ಕಲಾಕೃತಿಯನ್ನು ಜಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಎಡಭಾಗದಲ್ಲಿ ಬೃಹದಾಕಾರದ ಟೊಂಗೆಗಳನ್ನು ಚಿತ್ರಿಸಿದ್ದು, ಹಿನ್ನೆಲೆಯಲ್ಲಿ ಗುಡ್ಡದ ಮಧ್ಯದಲ್ಲಿ ನೀರು ಬೀಳುತ್ತಿರುವುದನ್ನು ಚಿತ್ರಿಸಿದ್ದಾರೆ. ಗಾಢವಾದ ವರ್ಣಗಳನ್ನು ಬಳಸಿ ಕೃತಿಗೆ ಹೆಚ್ಚು ಮೆರಗು ತಂದಿದ್ದಾರೆ. ನೆರಳು ಬೆಳಕನ್ನು ಯಥೇಚ್ಛವಾಗಿ ತೋರಿಸಿದ್ದಾರೆ. ಗಿಡದ ಕೊಂಬೆಗಳಿಗೆ ಸ್ವಲ್ಪ ಪ್ರಮಾಣದಲ್ಲಿಯೇ ವರ್ಣಗಳನ್ನು ಬಳಸಿ ಸ್ಪಷ್ಟತೆ ನೀಡಿದ್ದಾರೆ.

**೧೧. ಹುಲಕೋಟಿ ಬಿಲ್ಡಿಂಗ್, ಹೂಲಿ :** ಹಾಲಭಾವಿಯವರು ೧೯೮೫ರಲ್ಲಿ ಹೂಲಿ ಊರಿನ ಹುಲಕೋಟಿಯವರ ಮನೆಯ ಹೊರ ದೃಶ್ಯವನ್ನು ಜಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಹೊರಗಡೆ ದೃಶ್ಯದಲ್ಲಿ ಮಹಿಳೆಯರು ಆಟ ಆಡುತ್ತಿರುವವರು, ಅದನ್ನು ನೋಡುತ್ತ ನಿಂತಿರುವ ಬಾಲಕಿಯರು, ಮತ್ತು ಪುರುಷನೊಬ್ಬ ಸೈಕಲ್ ಹತ್ತಿಕೊಂಡು ಹೊರಟಿರುವ ದೃಶ್ಯ.

೧೨. **ಹೊರನಾಡು** : ಹಾಲಭಾವಿಯವರು ೧೯೮೨ರಲ್ಲಿ ಹೊರನಾಡಿನ ಪ್ರಕೃತಿ ಸೌಂದರ್ಯವನ್ನು ಸುಂದರವಾಗಿ ಚಿತ್ರಿಸಿದ್ದಾರೆ. ಈ ಪ್ರಕೃತಿ ಚಿತ್ರದಲ್ಲಿ ಮುಂದೆ ಕಾರುಗಳು ನಿಂತಿದ್ದು, ಅಕ್ಕ ಪಕ್ಕದಲ್ಲಿ ಮಹಿಳೆಯರು, ಪುರುಷರು ಕುಳಿತಿರುವ ಹಾಗೂ ಹೊರಟಿರುವ ದೃಶ್ಯವಿದೆ. ಆಕೃತಿಗಳು ಇಲ್ಲಿ ಸ್ಪಷ್ಟವಿಲ್ಲದಿರುವ ಹಿನ್ನೆಲೆಯಲ್ಲಿ ಬೆಟ್ಟ ಮತ್ತು ಗಿಡ ಮರಗಳ ದೃಶ್ಯವನ್ನು ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಗಾಢವಾದ ವರ್ಣಗಳನ್ನು ಬಳಸಿ ನೆರಳು–ಬೆಳಕನ್ನು ತೋರಿಸಿದ್ದಾರೆ. ಬೆಟ್ಟಗಳ ಮಧ್ಯ ತಿರುವುಗಳನ್ನು ತೋರಿಸಿ ಅಲ್ಲಿ ವಾಹನಗಳನ್ನು ಬರುವುದನ್ನು ಚಿತ್ರಿಸಿದ್ದಾರೆ. ಇದನ್ನು ಗಮನಿಸಿದಾಗ ಯಥಾದರ್ಶನ ಪರಿಕಲ್ಪನೆ ಸ್ಪಷ್ಟವಾಗಿರುವುದನ್ನು ಕಾಣಬಹುದಾಗಿದೆ.

೧೩. **ರಾತ್ರಿಯಲ್ಲಿ ಮುಂಬೈ** : ಹಾಲಭಾವಿಯವರು ಮುಂಜಾನೆ ಸಮಯ ಮತ್ತು ಸಾಯಂಕಾಲ ಸಮಯದಲ್ಲಿ ಸಾಕಷ್ಟು ಕಲಾಕೃತಿಗಳನ್ನು ಚಿತ್ರಿಸಿದ್ದಾರೆ. ರಾತ್ರಿ ಸಮಯದಲ್ಲಿಯೂ ಕೂಡ ಸಾಕಷ್ಟು ಕಲಾಕೃತಿಗಳನ್ನು ಚಿತ್ರಿಸಿದ್ದಾರೆ. ಅವುಗಳಲ್ಲಿ ಒಂದಾದ ಮುಂಬೈನಲ್ಲಿ ಚಿತ್ರಿಸಿದ ಕಲಾಕೃತಿ ರಾತ್ರಿಯಲ್ಲಿ ಮುಂಬೈ. ಬೃಹದಾಕಾರದ ಕಟ್ಟಡಗಳನ್ನು ತೋರಿಸಿ, ಒಳಗಡೆ ವಿದ್ಯುತ್ ಅಲಂಕಾರವನ್ನು ಸಹ ತೋರಿಸಿದ್ದು, ಹಿನ್ನೆಲೆಯಲ್ಲಿ ನೀಲಿ ವರ್ಣದಲ್ಲಿ ಆಕಾಶವನ್ನು ತೋರಿಸಿ, ಮಧ್ಯದಲ್ಲಿ ಚಂದ್ರನನ್ನು ತೋರಿಸಿದ್ದಾರೆ. ಯಥದರ್ಶನ ಸ್ಪಷ್ಟವಾಗಿದ್ದು, ಕಲಾಕೃತಿಯನ್ನು ಗಮನಿಸಿದಾಗ ರಾತ್ರಿಯಾಗಿರುವದು ಕಂಡು ಬರುತ್ತದೆ

೧೪. **ಹಗಲಿನಲ್ಲಿ ಮುಂಬೈ** : ಹಾಲಭಾವಿಯವರು ೧೯೩೬ರಲ್ಲಿ ಮುಂಬೈಯಲ್ಲಿ ಹಗಲಿನಲ್ಲಿ ಸಾಕಷ್ಟು ಕಲಾಕೃತಿಗಳನ್ನು ಚಿತ್ರಿಸಿದ್ದಾರೆ. ಅವುಗಳಲ್ಲಿ ನಾವು ಒಂದನ್ನು ಹಗಲಿನಲ್ಲಿ ಮುಂಬೈ ಎಂದು ಶೀರ್ಷಿಕೆ ನೀಡಿದ್ದು, ಬೃಹದಾಕಾರದ ಕಟ್ಟಡವನ್ನು ಚಿತ್ರಿಸಿದ್ದು, ಹಿನ್ನೆಲೆಯಲ್ಲಿ ಸಮುದ್ರವನ್ನು ಚಿತ್ರಿಸಿದ್ದಾರೆ. ಅಕ್ಕ ಪಕ್ಕದಲ್ಲಿ ಚಿಕ್ಕದಾದ ಕಟ್ಟಡಗಳನ್ನು ಚಿತ್ರಿಸಿದ್ದಾರೆ. ಕಟ್ಟಡಗಳ ಕೆಳಗಡೆ ಅನೇಕ ಗುಡಿಸಲುಗಳನ್ನು ಚಿತ್ರಿಸಿದ್ದಾರೆ.

೧೫. **ದಾಂಡೇಲಿ ಪರಿಸರ** : ಹಾಲಭಾವಿಯವರು ೧೯೭೨ ರಲ್ಲಿ ದಾಂಡೇಲಿಯ ಪ್ರಕೃತಿಯನ್ನು ಜಲವರ್ಣ ಮಾಧ್ಯಮದಲ್ಲಿ ಚಿತ್ರಿಸಿದ್ದಾರೆ. ಬಲಭಾಗದಲ್ಲಿ ಮನೆಗಳನ್ನು ಚಿತ್ರಿಸಿದ್ದು, ಎಡಭಾಗಕ್ಕೆ ಗಿಡ ಮರಗಳನ್ನು, ವಿದ್ಯುತ್ ಕಂಬಗಳನ್ನು ಚಿತ್ರಿಸಿದ್ದಾರೆ.

೧೬. **ಮನೆಯ ಒಳಾಂಗಣ** : ಹಾಲಭಾವಿಯವರು ೧೯೮೩ ರಲ್ಲಿ ಪ್ರಕೃತಿಯ ಹೊರಗೆ ಅನೇಕ ನಿಸರ್ಗ ಕಲಾಕೃತಿಗಳನ್ನು ರಚಿಸಿದ್ದಾರೆ. ಮನೆಯ ಒಳಗಡೆ ಅನೇಕ ಕೃತಿಗಳನ್ನು ಚಿತ್ರಿಸಿದ್ದಾರೆ. ಅದರಲ್ಲಿ ಮನೆಯ ಒಳಾಂಗಣದ ದೃಶ್ಯವು ಒಂದು.ಮುಂದಿನ ಭಾಗದಲ್ಲಿ ಭಾವಣೆಯ ಭಾಗವಾಗಿದ್ದು ಹಿನ್ನಲೆಯಲ್ಲಿ ಬಾಗಿಲವಿದೆ. ಅದರ ಹಿಂದೆ ಹಿತ್ತಲ ಬಾಗಿಲವನ್ನು ತೋರಿಸಿದ್ದನ್ನು ಗಮನಿಸಿದರೆ ಯಥಾದರ್ಶನದ ಸ್ಪಷ್ಟತೆ ಎಷ್ಟು ಎಂಬುದು ಅರ್ಥವಾಗಿತ್ತದೆ. ಗಾಢವಾದ ವರ್ಣಗಳನ್ನು ಬಳಸಿ ನೆರಳು ಬೆಳಕನ್ನು ತೋರಿಸಿದ್ದಾರೆ. ಬಾಗಿಲ ಮುಂದೆ ವಸ್ತುಗಳನ್ನು ತೋರಿಸಿದ್ದು, ಸ್ಪಷ್ಟತೆ ಕಂಡು ಬರುವುದಿಲ್ಲವಾದರೂ, ಮನೆಯ ಗೋಡೆಗಳು, ಬಾಗಲುಗಳು, ಕಂಬಗಳು ಸ್ಪಷ್ಟವಾಗಿ ಚಿತ್ರಿಸಿದ್ದಾರೆ.

೧೭. **ಹಂಪಿ** : ಹಾಲಭಾವಿಯವರು ೧೯೨೭ ರಲ್ಲಿ ಹಂಪಿಯ ನಿಸರ್ಗಚಿತ್ರವನ್ನು ಜಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಹಳದಿ ವರ್ಣಗಳನ್ನು ಇಲ್ಲಿ ಹೆಚ್ಚಾಗಿ ಬಳಸಿಕೊಂಡಿದ್ದು, ಯಥಾದರ್ಶನದ ಸ್ಪಷ್ಟತೆಯನ್ನು ಸ್ಪಷ್ಟವಾಗಿ ಕಂಡು ಬರುತ್ತದೆ. ದೇವಸ್ಥಾನ, ಕಲ್ಲುಬಂಡೆಗಳು, ಸ್ಪಷ್ಟವಾಗಿ ಚಿತ್ರಿಸಿದ್ದಾರೆ.

೧೮. **ಹಾಲಭಾವಿಯವರ ಮನೆ** : ಹಾಲಭಾವಿಯವರು ೧೯೮೫ ರಲ್ಲಿ ತಮ್ಮ ಮನೆಯ ಚಿತ್ರವನ್ನು ಜಲವರ್ಣದ ಮಾಧ್ಯಮದಲ್ಲಿ ರಚಿಸಿದ್ದಾರೆ, ಹಂಚಿನ ಮನೆ, ಮುಂದೆ ಗಿಡಮರಗಳು, ಕಂಪೌಂಡ, ಇಲ್ಲಿ ಸೈಜವಾಗಿ ಮೂಡಿ ಬಂದಿದೆ. ಮನೆ ಮತ್ತು ಗಿಡಗಳಲ್ಲಿ ವರ್ಣಗಳ ವಿನ್ಯಾಸ ಅದ್ಭುತವಾಗಿ ಮೂಡಿ ಬಂದಿದೆ. ಯಥಾದರ್ಶನ ಇಲ್ಲಿ ಸ್ಪಷ್ಟವಾಗಿ ಮೂಡಿ ಬಂದಿದೆ.

**೧೯. ಕಾಶ್ಮೀರ ಕಣಿವೆ :** ಹಾಲಭಾವಿಯವರು ಕಾಶ್ಮೀರ ಪ್ರವಾಸಕ್ಕೆ ಹೋದಾಗ ಅಲ್ಲಿ ಸಾಕಷ್ಟು ಕಲಾಕೃತಿಗಳನ್ನು ಜಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಅವುಗಳಲ್ಲಿ ಕಾಶ್ಮೀರ ಕಣಿವೆ ಕಲಾಕೃತಿಯೂ ಒಂದು. ಈ ಕಲಾಕೃತಿಯಲ್ಲಿ ವಿಶಾಲವಾದ ಬೆಟ್ಟಗಳು, ಕೆಳಗಡೆ ಕಣಿವೆಗಳನ್ನು ಗಮನಿಸಿಬಹುದಾಗಿದೆ. ಬೆಟ್ಟಗಳು ಹಸಿರು ವರ್ಣಗಳಿಂದ ಕೂಡಿದ್ದು, ಕೆಳಗಡೆ ನೀರು ಸ್ವಚ್ಛ ಹಸಿರು ಬಣ್ಣದಿಂದ ಕೂಡಿದ್ದನ್ನು ಚಿತ್ರಿಸಿದ್ದಾರೆ. ಅಕ್ಕ ಪಕ್ಕದಲ್ಲಿ ಉದ್ದನೆಯ ಗಿಡಗಳನ್ನು ಚಿತ್ರಿಸಿ ಕಂದು ಬಣ್ಣದ ಲೇಪನವನ್ನು ಲೇಪಮಾಡಿ ನೆರಳು ಬೆಳಕನ್ನು ತೋರಿಸಿದ್ದಾರೆ. ಈ ಕಲಾಕೃತಿಯಲ್ಲಿ ಯಥಾದರ್ಶನ ಸ್ಪಷ್ಟವಾಗಿದ್ದು ಕಂಡು ಬರುತ್ತದೆ.

**೨೦. ಪ್ರಕೃತಿ :** ಹಾಲಭಾವಿಯವರು ೧೯೪೦ ರಲ್ಲಿ ಜಲವರ್ಣ ಮಾಧ್ಯಮದಲ್ಲಿ ಈ ಕಲಾಕೃತಿಯನ್ನು ರಚಿಸಿದ್ದಾರೆ. ಈ ಕಲಾಕೃತಿಯಲ್ಲಿ ಸ್ವಲ್ಪ ಪ್ರಮಾಣದಲ್ಲಿ ಶ್ರೀಮಂತ ವರ್ಣಗಳನ್ನು ಬಳಸಿ ಕೃತಿಗೆ ಮೆರಗು ನೀಡಿದ್ದಾರೆ. ಗಿಡಗಳಿಗೆ, ಕೆಂಪು, ಮತ್ತು ನೀಲಿ ವರ್ಣಗಳನ್ನು ಲೇಪಿಸಿದೆ. ಹಿನ್ನೆಲೆಯಲ್ಲಿ ಕುಟೀರ ಒಂದಕ್ಕೆ ಹಳದಿ ಬಣ್ಣದ ಲೇಪನವಿದೆ.

## III. ಹಾಲಭಾವಿಯವರ ಛಾಯಾಚಿತ್ರಗಳು

ಹಾಲಭಾವಿಯವರು ಚಿತ್ರಕಲೆಯ ಜೊತೆಗೆ ಛಾಯಾಚಿತ್ರಗಳನ್ನು ತೆಗೆಯುತ್ತಿದ್ದರು. ಅವುಗಳಲ್ಲಿ

೧. ಶಿರಭಾವ ಛಾಯಾಚಿತ್ರಗಳು ೨. ಪೂರ್ಣ ಶಿರ ಭಾವಚಿತ್ರಗಳು ಮತ್ತು ೩. ಪ್ರಕೃತಿ ಛಾಯಾಚಿತ್ರಗಳು

ಹೀಗೆ ಅನೇಕ ಛಾಯಾ ಚಿತ್ರಗಳನ್ನು ತಮ್ಮ ಬದುಕಿನುದ್ದಕ್ಕೂ ತೆಗೆಯುತ್ತಾ ಬಂದಿದ್ದಾರೆ. ಅವುಗಳಲ್ಲಿ ಕೆಲವುಗಳನ್ನು ಇಲ್ಲಿ ಹೆಸರಿಸಲಾಗಿದೆ.

**೧. ಶಿರಭಾವ ಚಿತ್ರ :** ಹಾಲಭಾವಿಯವರು ಕಪ್ಪು-ಬಿಳುಪಿನಲ್ಲಿ ಅನೇಕ ಶಿರಭಾವ ಚಿತ್ರಗಳನ್ನು ತೆಗೆದಿದ್ದು, ನೇರವಾಗಿ ಕುಳಿತಿರುವ ಭಾವಚಿತ್ರಗಳಲ್ಲಿ ನೆರಳು ಬೆಳಕನ್ನು ಸ್ಪಷ್ಟವಾಗಿ ಸೆರೆಹಿಡಿದಿದ್ದಾರೆ. ಅದರಲ್ಲಿಯೇ ಮೂರುನಾಲ್ಕಾಂಶ ಭಾಗದ ಶಿರಭಾವಚಿತ್ರಗಳಲ್ಲಿ ಗಾಢವಾದ ನೆರಳು ಬೆಳಕನ್ನು ಸೆರೆಹಿಡಿದಿದ್ದಾರೆ.

**೨. ಪೂರ್ಣ ಶಿರಭಾವ ಚಿತ್ರಗಳು :** ಹಾಲಭಾವಿಯರ ಪೂರ್ಣ ಭಾವಚಿತ್ರಗಳಲ್ಲಿ ಮಹಿಳೆಯರನ್ನು ಕೂಡ್ರಿಸಿ ಅವರಿಗೆ ಆಭರಣಗಳನ್ನು ಹಾಕಿ ಛಾಯಾಗ್ರಹಣವನ್ನು ಮಾಡಿದ್ದಾರೆ. ವ್ಯಕ್ತಿಗಳನ್ನು ಕೂಡ್ರಿಸಿ ಸಮತಟ್ಟಾದ ಬಟ್ಟೆಯ ವಿನ್ಯಾಸ ಮಹಿಳೆಯಲ್ಲಿ, ಗಾಢವಾದ ನೆರಳು ಬೆಳಕಿನ ವಿನ್ಯಾಸವನ್ನು ಸ್ಪಷ್ಟವಾಗಿ ಸೆರೆಹಿಡಿದಿದ್ದಾರೆ.

**೩. ಪ್ರಕೃತಿ ಚಿತ್ರಗಳು :** ಹಾಲಭಾವಿರವರು ಅನೇಕ ಭೂದೃಶ್ಯಗಳನ್ನು ತಮ್ಮ ಕ್ಯಾಮರಾದಲ್ಲಿ ಸೆರೆ ಹಿಡಿದಿದ್ದಾರೆ. ಅವುಗಳಲ್ಲಿ ಹಂಪೆಯ ಭೂದೃಶ್ಯಗಳು, ಬಿಜಾಪುರ ಭೂ ದೃಶ್ಯಗಳು. ಹಂಪಿಯ ಭೂ ದೃಶ್ಯದಲ್ಲಿ ತುಲಾ ಭಾರದ ಸ್ತಂಭಗಳನ್ನು ಅದ್ಬುತವಾಗಿ ಸೆರೆಹಿಡಿದಿದ್ದಾರೆ. ತುಲಾಭಾರ ಸ್ತಂಭದ ಮುಂದೆ ಹುಡುಗ ನಿಂತಿರುವದು. ನೆರಳು ಬೆಳಕಿನ ವಿನ್ಯಾಸವನ್ನು ಸ್ಪಷ್ಟವಾಗಿ ಸೆರೆಹಿಡಿದಿದ್ದಾರೆ. ಹಂಪೆಯ ವಿಜಯ ವಿಠಲ ಮಂದಿರದ ದೃಶ್ಯವನ್ನು ಯಥಾದರ್ಶನದ ಕಲ್ಪನೆಯಂತೆ ಸ್ಪಷ್ಟವಾಗಿ ಸೆರೆಹಿಡಿದಿದ್ದಾರೆ. ಮುಂದೆ ಹಸಿರು ಹುಲ್ಲಿನ ವಿನ್ಯಾಸವಿದ್ದು, ಆವರಣದಲ್ಲಿ ಇಬ್ಬರು ಬಾಲೆಯರು ನಿಂತಿರುವುದು ಕಂಡು ಬರುವದು. ನೆರಳು ಬೆಳಕಿನ ವಿನ್ಯಾಸವನ್ನು ಸ್ಪಷ್ಟವಾಗಿ ಸೆರೆಹಿಡಿದಿದ್ದಾರೆ. ಬಿಜಾಪೂರ ಗೋಳಗುಮ್ಮಟವನ್ನು ಕ್ಯಾಮರಾದಲ್ಲಿ ಸೆರೆಹಿಡಿದಿದ್ದಾರೆ. ನೆರಳು ಬೆಳಕು ಸ್ಪಷ್ಟವಾಗಿದ್ದು ಪಕ್ಕದಲ್ಲಿ ಮರವನ್ನು ಸೆರೆಹಿಡಿದಿದ್ದಾರೆ.

**ಹಾಲಭಾವಿಯವರ ವ್ಯಕ್ತಿ ವೈವಿಧ್ಯ :** ಹಾಲಭಾವಿಯವರು ಕಲಾಕೃತಿ ರಚನೆಯಲ್ಲಿ ಸತತವಾಗಿ ನಿರತರಾಗಿರುತ್ತಿದ್ದು, ಪ್ರಕೃತಿ ಚಿತ್ರಗಳನ್ನು ಕುಂಚದಿಂದ ಚಿತ್ರಿಸುವಾಗ ಮುಂದೆ ಈಜಲ್ ಹಾಕಿಕೊಂಡು ಅದರ ಮೇಲೆ ಬೋರ್ಡನ್ನು ಇಟ್ಟುಕೊಂಡು ಕಲಾಕೃತಿ ರಚಿಸುತ್ತಿದ್ದರು. ಹಾಲಭಾವಿಯವರು ಛಾಯಾಗ್ರಾಹಕರಾಗಿ ಕುಂಚದಿಂದ ಸ್ವಲ್ಪ ವಿಶ್ರಾಂತಿ ಪಡೆದ ತಕ್ಷಣ ಕ್ಯಾಮರಾದೊಂದಿಗೆ ಬೆರೆತು ಛಾಯಾಚಿತ್ರದಲ್ಲಿ ಮಗ್ನರಾಗುತ್ತಿದ್ದರು.

ಹಾಲಭಾವಿಯವರು ಕಲಾವಿದರಾಗಿ ಛಾಯಾಗ್ರಾಹಕರಾಗಿ, ಅಷ್ಟೇ ಅಲ್ಲದೆ ಅವರು ಕಲಾಸಾಹಿತಿಯಾಗಿ ಅನೇಕ ಕಲಾವಿದರ ಪರಿಚಯ ಮತ್ತು ಅವರ ಕಲಾಕೃತಿಗಳನ್ನು ಪರಿಚಯಿಸಿದ್ದಾರೆ. ಅಷ್ಟೇ ಅಲ್ಲದೆ ಕಲಾವಿದರ ಕಲಾಕೃತಿಗಳ ವಿಮರ್ಶೆಯನ್ನು ಮಾಡಿದ ಕರ್ನಾಟಕದ ಮೊದಲ ಚಿತ್ರಕಲಾವಿದರು ಎನ್ನಬಹುದು.

ಹಾಲಭಾವಿಯವರು ಕಲಾವಿದರಾಗಿ, ಛಾಯಾಗ್ರಾಹಕರಾಗಿ, ಕಲಾಸಾಹಿತಿಯಾಗಿ, ಮುಂದೆ ಕಲಾ ಶಿಕ್ಷಕರಾಗಿ ಸಾವಿರಾರು ಕಲಾ ವಿದ್ಯಾರ್ಥಿಗಳಿಗೆ ಕಲಾ ದೀಕ್ಷೆಯನ್ನು ನೀಡಿದ್ದಾರೆ. ಅಲ್ಲದೆ ಹಾಲಭಾವಿಯವರು ವಿದ್ಯಾರ್ಥಿಗಳಿಗೆ ಸ್ವತಃ ತಾವೇ ರೂಪದರ್ಶಿಯಾಗಿ ಕುಳಿತುಕೊಳ್ಳುತ್ತಿದ್ದರು. ಹೀಗೆ ಹಾಲಭಾವಿಯವರು ಕಲಾಕ್ಷೇತ್ರದ ವಿವಿಧ ಮಾಧ್ಯಮದಲ್ಲಿ ತಮ್ಮನ್ನು ತೊಡಗಿಸಿಕೊಂಡು ಸಾಕಷ್ಟು ಸಾಧನೆಯನ್ನು ಮಾಡಿದ ಮಹಾನ ಕಲಾವಿದರು ಡಿ. ವಿ. ಹಾಲಭಾವಿಯವರು.

......................................



ಭಾರತೀಯ ಚಿತ್ರಕಲೆಗೆ ಪ್ರಪಂಚದಲ್ಲಿ ಅತ್ಯುನ್ನತ ಸ್ಥಾನವಿದೆ. ಸಾವಿರಾರು ವರ್ಷಗಳ ವೈವಿಧ್ಯಮಯ ಸಂಸ್ಕೃತಿ, ನಾಗರಿಕತೆ ಮತ್ತು ಪರಂಪರೆ ಹೊಂದಿದೆ. ಕಲೆಯ ಬೀಡು ಭಾರತ. ಹೀಗಾಗಿ ಇಲ್ಲಿಯ ಚಿತ್ರಕಲೆಗೆ ಹತ್ತು ಹಲವು ಮುಖಗಳು ಉನ್ನತ ಕಲಾವಂತಿಕೆ ಭಾರತೀಯ ಕಲೆಯ ಮೂಲಗುಣ. ವಿಭಿನ್ನ ಧರ್ಮ, ನಡವಳಿಕೆ, ಆಚರಣೆ ನಮ್ಮ ಕಲೆಯನ್ನು ಶ್ರೀಮಂತಗೊಳಿಸಿವೆ. ಬಹುಶಃ ಇಲ್ಲಿರುವಷ್ಟು ಸಂಕೀರ್ಣವಾದ ವೈವಿಧ್ಯಮಯ ಬದುಕು ಜಗತ್ತಿನಲ್ಲಿ ಇನ್ನೆಲ್ಲಿಯೂ ಸಿಗದು.

ಅದಕ್ಕೆ ಇಲ್ಲಿಯ ಪ್ರಾಚೀನ ಕಲೆಯು ಇಂದಿನ ಆಧುನಿಕ ಕಲೆಯವರೆಗೆ ಹಲವು ಶೈಲಿ, ಸಿದ್ಧಾಂತಗಳನ್ನು ಒಳಗೊಂಡು ಬೆಳೆಯುತ್ತ ಸಮೃದ್ಧಿಗೊಂಡಿದೆ. ಇಂತಹ ಸಮೃದ್ಧಿಯಾದ ಚಿತ್ರಕಲಾ ಪ್ರಪಂಚದಲ್ಲಿ ಚಿತ್ರಕಲಾವಿದ ಡಿ.ವಿ.ಹಾಲಭಾವಿಯವರು ತಮ್ಮ ಸ್ಪಷ್ಟವಾದ ರೇಖಾ ವಿನ್ಯಾಸ, ವರ್ಣಗಾರಿಕೆ, ತಂತ್ರ ಮತ್ತು ಶೈಲಿಯ ವಿಶಿಷ್ಟವಾದ ಕೊಡುಗೆಯನ್ನು ನೀಡಿದ್ದಾರೆ. ಅವರದೇ ಆದ ಶೈಲಿ, ಅಭಿವ್ಯಕ್ತಿ ನಿರೂಪಣೆ ಹಾಗೂ ವಿಭಿನ್ನ ವೈಶಿಷ್ಟ್ಯತೆಗಳನ್ನು ನಾವು ಅವರ ಈ ಎಲ್ಲಾ ಕಲಾಕೃತಿಗಳ ಒಟ್ಟು ಅಧ್ಯಯನದಿಂದ ತಿಳಿದುಕೊಳ್ಳಲು ಸಾಧ್ಯವಾಗಿದೆ.

ಇತಿಹಾಸ ಪೂರ್ವಕಾಲದ ಚಿತ್ರಗಳ ಸೃಷ್ಟಿಯ ಹಿಂದಿನ ಹಾಗೂ ಅನಂತರದ ಹಾಗೂ ಇಂದಿನ ಸಮಕಾಲೀನ ಕಲಾಸೃಷ್ಟಿಯ ಆಶಯಗಳು ಒಂದೇ ಆಗಿಲ್ಲ. ಹಾಗಾಗುವುದು ಸಾಧ್ಯವೇ ಇಲ್ಲ. ವಿವಿಧ ಸಂದರ್ಭಗಳು, ವೈವಿಧ್ಯಮಯವಾದ ಕಲಾವಿದರು, ಅವರ ಬದುಕು, ವೈವಿಧ್ಯಮಯವಾದ ಚಿತ್ರಗಳು, ಶಿಲ್ಪ, ಗ್ರಾಫಿಕ್ಸ್, ಇತ್ಯಾದಿಗಳನ್ನು ನೋಡುವುದು ಅನುಭವಿಸುವುದು ಸಾಧ್ಯವಾಗಿದೆ. ಅಂತೆಯೇ ಹಾಲಭಾವಿಯವರ ಆಶಯಗಳು, ಸಂದರ್ಭಗಳು, ಉದ್ದೇಶಗಳು ಆ ಕಾಲದ ಮೌಲ್ಯವನ್ನು ತಮ್ಮ ಕಲಾಕೃತಿಗಳಲ್ಲಿ ಎತ್ತಿಹಿಡಿದಿರುವುದನ್ನು ಇಲ್ಲಿ ಕಾಣಬಹುದಾಗಿದೆ.

ಹಾಲಭಾವಿಯವರು ಪಾಶ್ಚಿಮಾತ್ಯ ಪದ್ಧತಿಯಲ್ಲಿ ಕಲಾಭ್ಯಾಸ ಮಾಡಿದರೂ ತಮ್ಮ ಕಲಾಕೃತಿಗಳನ್ನು ಭಾರತೀಯತೆಯ ಸೊಗಡನ್ನು ಅಭಿವ್ಯಕ್ತಿಸಿದ ರೀತಿ ಅನುಪಮವಾಗಿದೆ.[೧೧] ಸಂವೇದನೆಯ ನೆಲೆಗಳು ಬದುಕಿನ ವೈವಿಧ್ಯಮಯ ಮಜಲುಗಳ ಪ್ರಭಾವದಿಂದ ಬದಲಾಗುವ ಕಲಾವಿದ ತನ್ನ ಬದುಕಿನ ವಿವಿಧ ಘಟ್ಟಗಳಲ್ಲಿ ವಿಭಿನ್ನ ಸಂವೇದನೆಗಳಿಗೆ ಒಳಗಾಗಿ ವೈವಿಧ್ಯಮಯವಾಗಿ ಸೃಷ್ಟಿಸುವಂತೆ ಹಾಲಭಾವಿಯವರು ಕಲಾಕೃತಿಗಳಲ್ಲಿ ಸ್ಪಷ್ಟವಾಗಿ ಈ ವೈವಿಧ್ಯತೆಯನ್ನು ಕಾಣುತ್ತೇವೆ. ತೊಂಬತ್ತು ವರ್ಷಗಳ ಜೀವಿತಾವಧಿಯಲ್ಲಿ ಕಲಾಕೃತಿಗಳ ರಚನೆಗೆ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡು ಸಾವಿರಾರು ಕಲಾಕೃತಿಗಳನ್ನು ರಚಿಸಿದ್ದಾರೆ.[೧೨]

---

೧೧. ಡಾ. ಲಕ್ಷ್ಮೀದೇವಿ ಗವಾಯಿ, ಕಲಾವಿದ ಎಂ.ಎ.ಚೆಟ್ಟಿಯವರ ಜೀವನ ಕಲಾಕೃತಿಗಳು, ಪುಟ ೩೧೭
೧೨. ಡಾ. ಲಕ್ಷ್ಮೀದೇವಿ ಗವಾಯಿ, ಕಲಾವಿದ ಎಂ.ಎ. ಚಟ್ಟಿಯವರ ಜೀವನ ಕಲಾಕೃತಿಗಳು, ಪುಟ ೩೧೮



೩. ೧೯೩೫



೪. ೧೯೩೪

ತೈಲವರ್ಣ



೫. ರೇಲ್ವೆ ಸೇತುವೆ. ೧೯೮೨



೬. ಹಾಲಭಾವಿಯವರ ಮನೆಯ ಪರಿಸರ. ೧೯೮೬




೭. ಶ್ರೀರಾಮ ಮಂದಿರ, ಬಾಂಬೋಲಿ, ೧೯೮೩



೯. ಪ್ರಕೃತಿ. ೧೯೮೩



೧೦. ಪ್ರಕೃತಿ. ೧೯೮೩.



೧೩. ರಾತ್ರಿಯಲ್ಲಿ ಮುಂಬೈ, ೧೯೬೬



೧೪. ಹಗಲಿನಲ್ಲಿ ಮುಂಬೈ. ೧೯೬೬




೧೫. ದಾಂಡೇಲಿ ಪರಿಸರ, ೧೯೭೨



೧೩. ಮನೆಯ ಒಳಾಂಗಣ. ೧೯೮೩



೧೨. ಹಂಪಿ. ೧೯೭೨



೧೮. ಹಾಲಭಾವಿಯವರ ಮನೆ. ೧೯೮೫



೧೯. ಕಾಶ್ಮೀರ ಕಣಿವೆ. ೧೯೭೦



೩೦. ಪ್ರಕೃತಿ. ೧೯೪೦


೧


೨


೩


೪


೫


೬


೭


೮

೧. ಕಲಾಕೃತಿ ರಚನೆಯಲ್ಲಿ ಹಾಲಭಾವಿಯವರು
೨. ಛಾಯಾಗ್ರಾಹಕರಾಗಿ ಹಾಲಭಾವಿಯವರು
೩. ಕಲಾ ಸಾಹಿತಿಯಾಗಿ ಹಾಲಭಾವಿಯವರು
೪. ಕಲಾ ಶಿಕ್ಷಕರಾಗಿ ಹಾಲಭಾವಿಯವರು
೫. ಹಾಲಭಾವಿ ಸ್ಕೂಲ ಆಫ್ ಆರ್ಟ್
೬. ರೂಪದರ್ಶಿಯಾಗಿ ಹಾಲಭಾವಿಯವರು
೭. ಪ್ರಶಸ್ತಿ-ಪುರಸ್ಕಾರಗಳೊಂದಿಗೆ ಹಾಲಭಾವಿಯವರು
೮. ದ.ರಾ.ಬೇಂದ್ರೆಯವರಿಂದ ವಿದ್ಯಾರ್ಥಿಗಳಿಗೆ ಹಿತೋಪದೇಶ

## ರೇಖಾ ವಿನ್ಯಾಸ

ಹಾಲಭಾವಿಯವರು ರೇಖಾವಿನ್ಯಾಸ ಅವರದೇ ಆದ ವಿಶಿಷ್ಟತೆಯಿಂದ ಕೂಡಿದೆ. ಭಾವಚಿತ್ರಗಳಲ್ಲಿಯೇ ಆಗಲಿ, ನಿಸರ್ಗಚಿತ್ರಗಳಲ್ಲಿಯೇ ಆಗಲಿ, ಸಂಯೋಜನಾ ಚಿತ್ರಗಳಲ್ಲಿಯೇ ಆಗಲಿ. ರೇಖೆಗಳು ಭಾವಸಂಚಾರ ಸೌಂದರ್ಯಾನುಭೂತಿಯಿಂದ ಕೂಡಿದ ಶಕ್ತಿಯನ್ನು ಪಡೆದುಕೊಂಡಂತಿವೆ. ಈ ರೇಖಾ ಶೈಲಿಯು ರಸಾನುಭವದ ಭಾವಸೂಚಕವಾದ ವಿನ್ಯಾಸವನ್ನು ರೂಪಿಸಿಕೊಂಡಿವೆ.

ಹಾಲಭಾವಿಯವರ ಚಿತ್ರಗಳಲ್ಲಿ ರೇಖೆಗಳನ್ನು ಭಾರತೀಯ ಸೂಗಡಿನ ವಿವಿಧ ಭಂಗಿಗಳಲ್ಲಿ, ವಿವಿಧ ಹಾವ ಭಾವಗಳ ಸೊಗಡಿನಲ್ಲಿ ಆನಂದಿಸಬಹುದಾಗಿದೆಯಲ್ಲದೆ ರೇಖೆಯನ್ನು ಕಥನ ಕಲೆಗೆ ಹೊಂದಿಕೆಯಾಗುವಂತೆ ಚಿತ್ರಿಸಿದ್ದಾರೆ. ಇಂತಹ ಚಿತ್ರಗಳನ್ನು ಪ್ರಭುಲಿಂಗ ಲೀಲೆ, ಗೊರವಪ್ಪ ಚಿತ್ರಗಳಲ್ಲಿ ರೇಖೆಗಳನ್ನು ಮೂಡಿಸಿ ಕಾವ್ಯದ ಸೊಬಗನ್ನು ನೀಡಿರುವುದು ಗಮನಾರ್ಹವಾಗಿದೆ.

ಪೂರ್ವಸಿದ್ಧತೆಯ ರೇಖಾ ಚಿತ್ರ ರಚಿಸಲು ಕಲಾವಿದನಾದವನಿಗೆ ದೀರ್ಘಕಾಲದ ಪರಿಶ್ರಮ ಬೇಕಾಗುತ್ತದೆ. ಆಕೃತಿಗಳ ಗುಣಲಕ್ಷಣಗಳನ್ನು ಕಂಡು ಹಿಡಿಯುವ ಕಣ್ಣು ಬೇಕು. ಬಣ್ಣ ಬೆಳಕುಗಳ ಸ್ಪಷ್ಟವಾದ ಕಲ್ಪನೆ ಇರಬೇಕು. ಪಳಗಿದ ಚಿತ್ರಕಾರ ಈ ವಿಚಾರದಲ್ಲಿ ಕಣ್ಣಿನ ಸೂಕ್ಷ್ಮತೆ ಬೆಳೆಸಿಕೊಂಡಂತೆ ನೋಡಿದೊಡನೆ ರೇಖಿಸಬಲ್ಲ ಚುರುಕುತನಗಳಿಸುತ್ತಾನೆ.[೩]

### ಭಾವಚಿತ್ರಗಳಲ್ಲಿ ರೇಖಾವಿನ್ಯಾಸ

೧. ಹಾಲಭಾವಿಯವರು ೧೯೪೪ ರಲ್ಲಿ ರಚಿಸಿದ ಯುವಕನ ಭಾವಚಿತ್ರಗಳಲ್ಲಿ ನೇರವಾದ ರೇಖೆಗಳು ಸ್ಪಷ್ಟವಾಗಿ ಮೂಡಿಬಂದಿವೆ. ಕಣ್ಣುಗಳು, ಕಿವಿಗಳು ಮತ್ತು ಮೂಗು ಬಾಯಿಯ ಒಂದೇ ಒಂದು ರೇಖಾ ವಿನ್ಯಾಸದೊಂದಿಗೆ ಕೃತಿಗೆ ಹೆಚ್ಚು ಮೆರಗು ಬರುವಂತೆ ಮಾಡಿದ್ದಾರೆ.

೨. ಹಾಲಭಾವಿಯವರು ೧೯೪೪ ರಲ್ಲಿ ಮಹಿಳೆಯ ಭಾವಚಿತ್ರದಲ್ಲಿ ಮಹಿಳೆಯು ಮೇಲ್ಗಡೆ ಮುಖ ಮಾಡಿರುವುದು ರೇಖೆಗಳನ್ನು ಮೇಲ್ಗಡೆ ಮತ್ತು ಕೆಳಗಡೆ ಪೆನ್ನಿನಿಂದ ಸ್ಪಷ್ಟವಾಗಿ ಎಳೆದಿದ್ದಾರೆ.

೩. ಹಾಲಭಾವಿಯವರು ೧೯೪೫ ರಲ್ಲಿ ಮುದುಕನ ಭಾವಚಿತ್ರವನ್ನು ಪೆನ್ಸಿಲ್ ಮಾಧ್ಯಮದಲ್ಲಿ ಚಿತ್ರಿಸಿದ್ದು ಒಂದು ಕಡೆ ಸ್ಪಷ್ಟವಾದ ರೇಖೆಗಳನ್ನು ಹಾಕಿದ್ದು ಇನ್ನೊಂದು ಕಡೆಗೆ ಅಸ್ಪಷ್ಟವಾಗಿ ರೇಖೆಗಳನ್ನು ಹಾಕಿದ್ದಾರೆ.

೪. ಹಾಲಭಾವಿಯವರು ೧೯೩೮ ರಲ್ಲಿ ಪೆನ್ಸಿಲ್ ಮಾಧ್ಯಮದಲ್ಲಿ ರಚಿಸಿದ ಮಹಿಳೆಯ ಭಾವಚಿತ್ರದಲ್ಲಿ ರೇಖೆಗಳನ್ನು ಸರಳವಾಗಿ, ಸ್ಪಷ್ಟವಾಗಿ, ತೋರಿಸಿದ್ದಾರೆ. ರೇಖೆಗಳ ಜೋರಾದ ಎಳೆತವನ್ನು ಇಲ್ಲಿ ಗಮನಿಸಬಹುದಾಗಿದೆ.

೫. ಹಾಲಭಾವಿಯವರು ೧೯೩೮ ರಲ್ಲಿ ಮುದುಕನ ಭಾವಚಿತ್ರವನ್ನು ಪೆನ್ಸಿಲ್‌ನಲ್ಲಿ ರಚಿಸಿದ್ದು ಮುಖದಲ್ಲಿ ಜೋರಾದ ರೇಖೆಗಳನ್ನು ಚಿತ್ರಿಸಿದ್ದು ಪೇಟಾದಲ್ಲಿ ಸರಳವಾದ ರೇಖೆಗಳನ್ನು ಮಾತ್ರ ಚಿತ್ರಿಸಿದ್ದು ನೆರಳು ಬೆಳಕನ್ನು ಇಲ್ಲಿ ತೋರಿಸಿರುವುದಿಲ್ಲ.

೬. ಹಾಲಭಾವಿಯವರು ೧೯೩೦ ರಲ್ಲಿ ವೃದ್ಧನ ಭಾವಚಿತ್ರವನ್ನು ಕಪ್ಪು ಚಾರ್ಕೋಲನಲ್ಲಿ ಚಿತ್ರಿಸಿದ್ದು ಇಲ್ಲಿ ರೇಖೆಗಳನ್ನು ಸ್ಪಷ್ಟವಾಗಿ ನೇರವಾಗಿ ಚಿತ್ರಿಸಿದ್ದಾರೆ. ಟೋಪಿಯಲ್ಲಿ ಗಾಡವಾದ ರೇಖೆಗಳು ಮುಖದ ಮೇಲೆ ನಾಜುಕಾದ ರೇಖೆಗಳನ್ನು ಸ್ಪಷ್ಟವಾಗಿ ಚಿತ್ರಿಸಿದ್ದಾರೆ.

ಹಾಲಭಾವಿಯವರು ತಮ್ಮ ರೇಖಾಶೈಲಿ ಪೂರ್ಣಪ್ರಮಾಣ ಚಿತ್ರದಲ್ಲಿ ಮತ್ತು ಸಂಯೋಜನಾ ಕಲಾಕೃತಿಗಳಲ್ಲಿ, ಭಾವಚಿತ್ರಗಳಲ್ಲಿ ಹಾಗೂ ನಿಸರ್ಗ ಚಿತ್ರಗಳಲ್ಲಿ ತಮ್ಮ ರೇಖಾಶೈಲಿ, ಮತ್ತು ವರ್ಣಗಳ ಶೈಲಿಯನ್ನು ಸಮಾನಾಂತರವಾಗಿ ಕಾಯ್ದುಕೊಂಡು ಬಂದಿದ್ದಾರೆ.

೦೩. ಡಾ. ಲಕ್ಷ್ಮೀದೇವಿ ಗವಾಯಿ.,ಕಲಾವಿದ ಎಂ.ಎ.ಚೆಟ್ಟಿಯವರ ಜೀವನ ಕಲಾಕೃತಿಗಳು, ಪುಟ ೩೧೮

ಹಾಲಭಾವಿಯವರು ರೇಖಾ ಚಿತ್ರಗಳನ್ನು ಚಿತ್ರಿಸುವಾಗ ಎರಡು ರೀತಿಯಾಗಿ ಕಲಾಕೃತಿಗಳನ್ನು ರಚಿಸುತ್ತಿದ್ದರು.

೧. ಗೆರೆಗಳನ್ನು ಎಳೆದು ಚಿತ್ರಗಳನ್ನು ಚಿತ್ರಿಸುತ್ತಿದ್ದರು.

೨. ಗೆರೆಗಳನ್ನು ಎಳೆದನಂತರ ಪೆನ್ಸಿಲ್‌ನಿಂದ ನೆರಳು ಬೆಳಕನ್ನು ಕಲಾಕೃತಿಯಲ್ಲಿ ತೋರಿಸಿದ್ದಾರೆ.

**ಶೈಲಿ**

ಚಿತ್ರ ರಚನೆಯ ಕಾಲದಲ್ಲಿ ಕಲಾವಿದನಿಗಿರುವ ಮಾನಸಿಕ ಭಾವನೆಗಳಂತೆ ಅವನ ಕಲಾ ಕೌಶಲ್ಯ ಕೂಡಾ ಬದಲಾಗುತ್ತದೆ. ಒಂದೊಂದು ಬಗೆಯ ವಿಚಾರಗಳನ್ನು ತಿಳಿಸಲು ಒಂದೊಂದು ಬಗೆಯ ಕೌಶಲ್ಯ ಹಾಗೂ ಶೈಲಿ ಬೇಕಾಗಬಹುದು. ಅದನ್ನು ಕಲಾವಿದ ತಾನಾಗಿಯೇ ತನ್ನ ಮನಸ್ಸಿನಿಂದ ಭಾವನೆಗಳಿಗೆ ರೂಪಕೊಡಲು ಯೋಗ್ಯವೆನಿಸುವ ಶೈಲಿಯನ್ನು ಪ್ರಯೋಗಿಸುತ್ತಾನೆ. ಮಾನಸಿಕ ಭಾವಗಳನ್ನು ಹೊರಗೆಡವಲು ಪ್ರತಿಯೊಬ್ಬ ಕಲಾವಿದ ತನ್ನದೇ ಆದ ಶೈಲಿಯನ್ನು ರೂಪಿಸಿ ಗುರುತಿಸಿಕೊಳ್ಳಬೇಕಾಗುತ್ತದೆ. ಈ ಅಭಿಪ್ರಾಯದಂತೆ ಹಾಲಭಾವಿಯವರ ಸಮಗ್ರ ಕಲಾಕೃತಿಗಳ ಅಧ್ಯಯನ ಮಾಡಿದಾಗ ಮೊದ ಮೊದಲು ಅಕಾಡಮಿಕ್ ಕಲಿಕೆಯಲ್ಲಿ ಪಾಶ್ಚಿಮಾತ್ಯ ಕಲೆಯ, ಕಲಾವಿದರ, ಹಾಗೂ ಭಾರತೀಯ ಬೇರೆ ಬೇರೆ ಕಲಾಶೈಲಿಯ ಪ್ರಭಾವಕ್ಕೆ ಒಳಗಾಗಿದ್ದರೂ ಸಹ ತದನಂತರದಲ್ಲಿ ಪಾಶ್ಚಿಮಾತ್ಯ ಮಾಧ್ಯಮ ಶೈಲಿ, ರೂಪ, ತಂತ್ರ ಇತ್ಯಾದಿಗಳನ್ನು ನಮ್ಮ ನೆಲದ ಸೊಗಡಿಗೆ ಹೊಂದಿಸುವ ಪ್ರಯತ್ನವನ್ನು ಹಾಲಭಾವಿಯವರು ಮಾಡಿದ್ದಾರೆ. ಅಂತೆಯೇ ಅಲ್ಲಿ ನಮ್ಮ ಭಾವನೆಗಳಿಗೆ, ವಸ್ತು ವಿಷಯಗಳಿಗನುಸಾರವಾಗಿ ನೈಜ ಶೈಲಿಗೆ ಬದ್ಧರಾಗಿರುವುದು ಕಂಡು ಬರುತ್ತದೆ. ಅದರಲ್ಲಿಯೇ ಅವರ ಸೃಜನಶೀಲತೆಯನ್ನು ಕಾಣಬಹುದಾಗಿದೆ.[೪]

ಹಾಲಭಾವಿಯವರು ನೈಜ ಕಲಾಕೃತಿಗಳನ್ನು ಚಿತ್ರಿಸಲು ಕಾರಣ ಆಗಿನ ಸಮಕಾಲೀನ ಜನರು ಬಹುವಾಗಿ ಒಪ್ಪಿಕೊಳ್ಳುವ ಸಂದರ್ಭವದು. ಮತ್ತು ಇವರಿಗೆ ಸಹ ಅದರಲ್ಲಿ ತೃಪ್ತಿ ಇತ್ತು. ಅದಕ್ಕೆ ಕಲಾಕೃತಿಗಳು ಒಂದು ಯುಗದ ಆ ಶಕ್ತಿ ಮತ್ತು ಕುತೂಹಲಗಳ ಮೊತ್ತವಾಗಿರುತ್ತವೆ ಎಂಬ ಮಾತುಗಳು ಕಲಾ ಸೃಷ್ಟಿಯ ಮೂಲ ಮತ್ತು ಅದು ಮಾಡುವ ಪರಿಣಾಮಗಳ ಸಾಮಾಜಿಕ ಸ್ವರೂಪವನ್ನು ವ್ಯಕ್ತಪಡಿಸುತ್ತವೆ. ಇಂತಹ ನೈಜ ಶೈಲಿಯ ಪರಂಪರೆಯಲ್ಲಿ ಆಕೃತಿಗಳನ್ನು ರಚಿಸುವಲ್ಲಿ ಮಾನವನ ಅಂಗಾಂಗಳನ್ನು ಇರುವುದಕ್ಕಿಂತಹ ಹೆಚ್ಚು ನೀಳವಾಗಿ ತೋರಿಸುವ ಒಂದು ಲಕ್ಷಣ ಅವರ ವೈಯಕ್ತಿಕತೆಯನ್ನು ಬಿಂಬಿಸುತ್ತದೆ.

ಕಲೆಗೆ ಒಂದು ಚಾಲನೆ (Movement) ಇದೆ. ಹಾಲಭಾವಿಯವರ ಕಾಲದಲ್ಲಿ ಅವರು ಮಾಡುವಂತಹ ಚಿತ್ರಗಳಿಗೆ ತುಂಬಾ ಮೆಚ್ಚುಗೆ ಇತ್ತು ಮತ್ತು ಅಷ್ಟೇ ಬೆಲೆಯೂ ಇತ್ತು. ಆಗ ನೈಜ ರೀತಿಯಲ್ಲೆ ಚಿತ್ರಗಳನ್ನು ರಚಿಸಬೇಕಾಗುತ್ತಿತ್ತು. ಅದು ಅಲಂಕಾರಿಕವಾಗಿರಲಿ, ಮಾನವ ಆಕೃತಿಗಳನ್ನೇ ಹೊಂದಿರಲಿ, ಈಗಿನ ಸಮಕಾಲೀನದಲ್ಲಿಯ ವಿಚಾರದಲ್ಲಿ ಸಾಕಷ್ಟು ಬೆಳವಣಿಗೆಯಾಗಿದೆ. ಆದರೆ ಹಾಲಭಾವಿಯವರ ಕಾಲದಲ್ಲಿ ಅವರು ನೋಡಿದಂತಹ ದೃಷ್ಟಿಕೋನ ಆಗಿನ ವಿಕಾಸಗೊಳ್ಳುತ್ತಿರುವಂತಹ ಕಲೆಯ ಆಕೃತಿ(Art form) ಗಳನ್ನು ಹಿಡಿದುಕೊಂಡು ತಮಗೆ ಇಷ್ಟವಾದಂತಹ ವಿಷಯಗಳ ಮೇಲೆ ಚಿತ್ರರಚಿಸಿದ್ದಾರೆ. ಇದು ಅವರದೇ ಆದಂಥ ಶೈಲಿ ಎಂದು ಹೇಳಬಹುದು.

ಹಾಲಭಾವಿಯವರ ಚಿತ್ರಗಳಲ್ಲಿ ರೇಖೆಗೆ ಮತ್ತು ವರ್ಣಗಳ ಲೇಪನಕ್ಕೆ ಹೆಚ್ಚು ಪ್ರಾಧಾನ್ಯತೆ ಇದೆ. ಇದರ ಜೊತೆಗೆ ಸಂಯೋಜನೆಯಲ್ಲಿ ವೈವಿಧ್ಯತೆ ಇರುವ ಆಂಶಗಳನ್ನು ಕಾಣುತ್ತೇವೆ. ಆಗಿನ ಸಮಕಾಲೀನ ಚಿತ್ರಗಳಲ್ಲಿ ಇರುವ ಕೃತಿಗಳು ಅಷ್ಟೇ ಶಕ್ತಿಯುತವಾದ ಕಲಾ ಕೃತಿಗಳೆಂದು ಹೇಳಬಹುದು. ವಿಷಯಗಳ ಭಿನ್ನತೆಯ ಜೊತೆಗೆ ಇಡಿ ಬದುಕಿನ, ಸಂಸ್ಕೃತಿಯ ಅನೇಕ ಬೆಳವಣಿಗೆಯ ಹಂತವನ್ನು ಹಾಲಭಾವಿಯವರ ಕಲಾಕೃತಿಗಳಲ್ಲಿ ಕಾಣುತ್ತೇವೆ. ಇಂತಹ ಬದುಕನ್ನು ಪ್ರತಿಬಿಂಬಿಸುವಂತಹದು ಕಲೆ ಆಗಿದೆ. ಆದ್ದರಿಂದ ಆಗಿನ ಕಲಾಕೃತಿಗಳು ಆ ಕಾಲವನ್ನು

೧೪. ಡಾ. ಲಕ್ಷ್ಮೀದೇವಿ ಗವಾಯಿ.,ಕಲಾವಿದ ಎಂ.ಎ.ಚೆಟ್ಟಿಯವರ ಜೀವನ ಕಲಾಕೃತಿಗಳು, ಪುಟ ೩೫೪.೩೫೫

ಗುರುತಿಸುತ್ತ ಹೋದವು. ಇದರಿಂದಾಗಿ ಆ ಚಿತ್ರಗಳಲ್ಲಿ ಅದು ಹೊಸತಾಗಿಯೇ ಉಳಿಯಿತು. ಇಡಿ ನಮ್ಮ ಬದುಕಿನ ಹೊಸತನ, ಉಡುಗೆ ತೊಡುಗೆಯ ಹೊಸತನ ಹೀಗೆ ಅನೇಕ ವಿಷಯಗಳನ್ನು ನಾವು ಹಾಲಭಾವಿಯವರ ಕಲಾಕೃತಿಗಳಲ್ಲಿ ಕಾಣುತ್ತೇವೆ.[೫]

ಅಂತಹ ಅನೇಕ ವಿಷಯಗಳನ್ನು ಹಾಲಭಾವಿಯವರ ಕಲಾಕೃತಿಗಳಲ್ಲಿ ಕಾಣುತ್ತೇವೆ. ಈ ಅಂಶಗಳನ್ನು ಹಾಗೂ ಶೈಲಿ ವೈಶಿಷ್ಟತೆಯನ್ನು ಈ ಹಿಂದೆ ಅಧ್ಯಾಯ ನಾಲ್ಕರಲ್ಲಿ ವಿವರಿಸಲಾಗಿದೆ. ಹಾಲಭಾವಿಯವರು ಚಿತ್ರರೂಪದಲ್ಲಿ ಭಾವಪೂರ್ವಕವಾಗಿ ಚಿತ್ರಿಸಿವುದು. ಎರಡು ಮೂರು ಸನ್ನಿವೇಶಗಳ ಪರಿಣಾಮವನ್ನು ಒಂದೇ ಅವಕಾಶದ ಮೇಲೆ ಸಂಯೋಜನೆ ಮಾಡುವ ರೀತಿ, ಭಾವನೆಗಳನ್ನು ವ್ಯಕ್ತಪಡಿಸುವ ಭಾವನಾತ್ಮಕತೆ, ವೇಷಭೂಷಣಗಳು, ಮೀಸೆಯ ಪ್ರಭಾವ ಸನ್ನಿವೇಶದ ಕಲ್ಪನೆ, ಆಕೃತಿಗಳ ವಿವರಣೆ ಹಾಗೂ ಭಾವ ಚಿತ್ರಗಳ ಹಿನ್ನಲೆಯಲ್ಲಿ ನಿಸರ್ಗ ಚಿತ್ರ ರಚಿಸುವ ರೀತಿ ಪ್ರಾಣಿಗಳೇ ಇರಲಿ ಮನುಷ್ಯರೆ ಇರಲಿ ಅತ್ಯಂತ ಸೂಕ್ಷ್ಮವಾಗಿ ಅಭ್ಯಾಸ ಮಾಡಿರುವುದು ನಮಗೆ ಕಂಡು ಬರುತ್ತದೆ.

ಒಂದೇ ಅವಕಾಶದಲ್ಲಿ (Space) ಅನೇಕ ಜನರ ಆಕೃತಿಗಳನ್ನು ಸ್ಪಷ್ಟವಾಗಿ ಗುರುತಿಸುವ ರೀತಿಯಲ್ಲಿ ಚಿತ್ರಿಸುವುದಲ್ಲದೇ ಪ್ರತಿಯೊಂದು ಆಕೃತಿಯನ್ನು ಸ್ಪಷ್ಟವಾಗಿ ಗುರುತಿಸುವ ರೀತಿಯಲ್ಲಿ ಚಿತ್ರಿಸುವುದು ಇವರ ಇನ್ನೊಂದು ವೈಶಿಷ್ಟ್ಯವಾಗಿದೆ. ಇಂತಹ ಒಂದು ಸಂಯೋಜನಾ ತಂತ್ರ ಶೈಲಿ ಅವರ ಗುರುಗಳಿಂದಲೇ ಬಂದಂತಹವುಗಳು. ಒಂದೊಂದು ಆಕೃತಿಯ ಮೇಲೂ ಉಚಿತ ವರ್ಣವನ್ನು ಲೇಪಿಸಿದ್ದಾರೆ. ಅಷ್ಟೊಂದು ಆಕೃತಿಗಳಿದ್ದರೂ ಹಿನ್ನಲೆ, ಮುನ್ನೆಲೆ ಆಕೃತಿಗಳ ನಡುವೆ ಇರಬೇಕಾದ ಸ್ಥಳ ಅವಕಾಶದ ಕಲ್ಪನೆ ಅದ್ಬುತವಾದದ್ದು.

ವೇಷ ಭೂಷಣಗಳು ಅಷ್ಟೇ ಆಯಾಕಾಲದ ಹಾಗೂ ವ್ಯಕ್ತಿತ್ವಕ್ಕೆ ತಕ್ಕಂತಹ ವೇಷಗಳನ್ನು ಚಿತ್ರಿಸಿದ್ದಾರೆ. ಹೆಚ್ಚಾಗಿ ಕೆಲವು ಚಿತ್ರಗಳಲ್ಲಂತೂ ಉತ್ತರ ಕರ್ನಾಟಕದ ಸೀರೆ, ಕುಪ್ಪಸಗಳನ್ನೇ ಚಿತ್ರಿಸಿದ್ದು ಗಮನಾರ್ಹ ಗಂಡಸರಿಗೆ ತಲೆಯ ಮೇಲೆ ರೂಮಾಲು, ಹೆಂಗಸರ ತಲೆಯ ಮೇಲೆ ಆಗ ಯಾವಾಗಲೂ ತಲೆಯ ತುಂಬಾ ಸೆರಗನ್ನು ಹೊತ್ತುಕೊಂಡಿರುವಂತದ್ದು, ಮೈತುಂಬ ಬಂಗಾರದ ಆಭರಣಗಳು, ಹೀಗೆ ಆ ಕಾಲದ ಉಡುಗೆ ತೊಡುಗೆ ಜೊತೆಯಲ್ಲಿ ಸಂಸ್ಕೃತಿ ಸಂಪ್ರದಾಯಗಳ ಆಚರಣೆ, ಆಗಿನ ಕಾಲದಲ್ಲಿ ಉಪಯೋಗಿಸತಕ್ಕಂತಹ ದೈನಂದಿನ ವಸ್ತುಗಳು, ಜನ ಜೀವನದ ಮುಖವನ್ನು ತಮ್ಮ ಕಲಾಕೃತಿಗಳಲ್ಲಿ ಪ್ರತಿಬಿಂಬಿಸಿದ್ದಾರೆ. ಅತ್ಯಂತ ಮೃದು ವರ್ಣಗಳನ್ನು ಬಳಸುವುದರೊಂದಿಗೆ ಗಾಡವಾದ ನೆರಳು ಬೆಳಕನ್ನು ಅತ್ಯಂತ ಪ್ರಭಾವಶಾಲಿಯಾಗಿ ಯೋಜಿಸಿದ್ದಾರೆ. ಚಿತ್ರಗಳಲ್ಲಿ ಸೂಕ್ಷ್ಮತೆಯನ್ನು ಸ್ಪಷ್ಟತೆಯನ್ನು ತೋರಿಸಿದ್ದಾರೆ.[೬]

**ಪ್ರಭಾವ**

ಕಲಾ ಪ್ರಪಂಚದಲ್ಲಿ ಅನೇಕ ಕಲಾವಿದರು ತಮ್ಮದೇ ಆದ ಶೈಲಿ ವೈಶಿಷ್ಟತೆಯಿಂದ ತಮ್ಮ ಸಮಕಾಲೀನ ಕಲಾವಿದರಿಂದ ಬೇರೆಯೇ ಎನ್ನುವಂತೆ ತಮ್ಮ ಕಲಾಕೃತಿಗಳ ಮೂಲಕ ತಮ್ಮತನವನ್ನು ಅಭಿವ್ಯಕ್ತ ಪಡಿಸಿದ್ದಾರೆ. ಈ ಪ್ರಪಂಚದ ಎಲ್ಲಾ ಚಿತ್ರಕಲಾವಿದರು ಒಂದಿಲ್ಲಾ ಒಂದು ರೀತಿಯಲ್ಲಿ ಒಬ್ಬರು ಇನ್ನೊಬ್ಬರ ಮೇಲೆ ಪ್ರಾರಂಭದ ದೆಶೆಯಲ್ಲಿ ಪ್ರಭಾವ ಬೀರಿರುವುದನ್ನು ಕಾಣುತ್ತೇವೆ. ಕೊನೆಗೆ ತಮ್ಮದೆ ಆದ ಮಾರ್ಗದಲ್ಲಿ ಚಿತ್ರಗಳನ್ನು ಚಿತ್ರಿಸಿ ತಮ್ಮ ಪ್ರತಿಭೆಯನ್ನು ಮೆರೆದು ತಮಗೆ ತಾವೇ ಸಾಟಿಯಾಗಿರುವುದನ್ನು ನೋಡುತ್ತೇವೆ.

ಚಿತ್ರಕಲಾವಿದ ಡಿ. ವಿ. ಹಾಲಭಾವಿಯವರು ಇದರಿಂದ ಹೊರತಾಗಿಲ್ಲ. ಅವರು ಚಿತ್ರಕಲಾ ಅಭ್ಯಾಸ ಮಾಡುವ ಸಂದರ್ಭದಲ್ಲಿ ಅವರ ಗುರುಗಳ ಅಕಾಡೆಮಿಕ್ ಕಲಾ ವಾತಾವರಣದ ಪ್ರಭಾವ ಒಂದೆಡೆಯಾದರೆ ಅಜಂತಾ ಕಿರುರೂಪ ಚಿತ್ರಗಳು ಹಾಗೂ ಆಗಿನ ಕಾಲದ ನಾಟಕದ ಪ್ರಭಾವ, ಶಿಲ್ಪಗಳ ಪ್ರಭಾವ ಇವರ ಪ್ರಾರಂಭದ ದಿಶೆಯಲ್ಲಿ ಅನೇಕ ಕಲಾಕೃತಿಗಳಲ್ಲಿ ನೋಡಬಹುದಾಗಿದೆ.[೭]

---
೦೫. ಡಾ. ಲಕ್ಷ್ಮೀದೇವಿ ಗವಾಯಿ.,ಕಲಾವಿದ ಎಂ.ಎ.ಚೆಟ್ಟಿಯವರ ಜೀವನ ಕಲಾಕೃತಿಗಳು, ಪುಟ ೩೫೫
೦೬. ಡಾ. ಲಕ್ಷ್ಮೀದೇವಿ ಗವಾಯಿ.,ಕಲಾವಿದ ಎಂ.ಎ.ಚೆಟ್ಟಿಯವರ ಜೀವನ ಕಲಾಕೃತಿಗಳು, ಪುಟ ೩೫೬
೦೭. ಡಾ. ಲಕ್ಷ್ಮೀದೇವಿ ಗವಾಯಿ.,ಕಲಾವಿದ ಎಂ.ಎ.ಚೆಟ್ಟಿಯವರ ಜೀವನ ಕಲಾಕೃತಿಗಳು, ಪುಟ ೩೫೧

ಹಾಲಭಾವಿಯವರು ನಿಸರ್ಗ ಚಿತ್ರಗಳಲ್ಲಿ ಮಾತ್ರ ಧಾರವಾಡದ ಪರಿಸರ, ಹೊನ್ನಾವರ ಪರಿಸರ, ಹೀಗೆ ನಮ್ಮ ರಾಜ್ಯದ ಸುತ್ತಮುತ್ತಲಿನ ಪರಿಸರ ಹಾಲಭಾವಿಯವರ ಮೇಲೆ ಗಾಢವಾದ ಪ್ರಭಾವ ಬೀರಿದ್ದರಿಂದ ಪ್ರಕೃತಿ ಚಿತ್ರಗಳಲ್ಲಿ ಗಿಡಮರಗಳ ಅನೇಕ ಕಲಾಕೃತಿಗಳನ್ನು ನೋಡಬಹುದಾಗಿದೆ. ಅಷ್ಟೇ ಅಲ್ಲದೇ ಸಂಯೋಜನಾ ಚಿತ್ರಗಳಲ್ಲಿಯೂ ಹಾಲಭಾವಿಯವರು ಪರಿಸರಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಿದ್ದಾರೆ.

ಹಾಲಭಾವಿಯವರು ಮುಂಬೈ ಜೆ.ಜೆ. ಕಲಾ ಶಾಲೆಯಲ್ಲಿ ಅಭ್ಯಾಸಿಸುವಾಗ ಪಾಶ್ಚಿಮಾತ್ಯ ಪದ್ಧತಿಯ ಅಕಾಡೆಮಿಕ್ ಶೈಲಿಯ ತಂತ್ರವನ್ನೆ ಹೇಳಿಕೊಡುತ್ತಿದ್ದರು. ಇದರಿಂದಾಗಿ ಆಲದ ಮರದಂತೆ ಹಬ್ಬಿನಿಂತ ಈ ಕಲಾ ಶಾಲೆಯ ಅಭ್ಯಾಸ ಕ್ರಮದ ನೆರಳನ್ನು ಆಗಿನ ಕಾಲದ ಎಲ್ಲಾ ಕಲಾವಿದರ ಕಲಾಕೃತಿಗಳಲ್ಲೂ ಕಾಣುತ್ತೇವೆ, ಹೀಗಾಗಿ ಭಾರತೀಯ ಹಾಗೂ ಪಾಶ್ಚಿಮಾತ್ಯ ಮಿಶ್ರ ಕಲಾ ಸಂಪ್ರದಾಯದ ಚಿತ್ರಕಲಾವಿದರು ಬೆಳೆದು ಬಂದರು. ಅವರಲ್ಲಿ ಚಿತ್ರಕಲಾವಿದ ಡಿ.ವಿ. ಹಾಲಭಾವಿಯವರು ಒಬ್ಬರು.

ಕಲಾಕೃತಿಗಳಲ್ಲಿ ಭಾವನೆಗಳು ಭಾರತೀಯವಾದರೂ ಚಿತ್ರಿಸುವಂತ ಶೈಲಿ, ತಂತ್ರ ಪಾಶ್ಚಿಮಾತ್ಯ ಅಕಾಡೆಮಿಕ್ ಶೈಲಿಯ ಒಂದು ರೀತಿಯ ಅಭ್ಯಾಸ ಪೂರ್ಣವಾದ ಕಲಾಕೃತಿಗಳಾಗಿವೆ. ವರ್ಣಗಳನ್ನು ಬೆರೆಸುವ ರೀತಿ, ಆಕೃತಿಗಳ ನೆರಳು ಬೆಳಕನ್ನು ತ್ರಿಮಾನದ ಅನುಭವ, ದೂರ ಸಮೀಪಗಳ ಕಲ್ಪನೆ, ಜೀವಂತ ಹಾಗೂ ಜಡ ವಸ್ತುಗಳ ನೈಜವಾದ ಮೈ ವಳಿಕೆ, ತದ್ರೂಪತೆ, ಪ್ರತಿಯೊಂದು ವಸ್ತುವಿನ ವಿವರ, ಆಕೃತಿಗಳನ್ನು ಪ್ರಮಾಣ ಉದ್ದವಾಗಿ ರಚಿಸಿದ ರೀತಿ, ಬಟ್ಟೆಯಲ್ಲಿಯ ಸರಿಗೆಗಳು ಆಕೃತಿಗಳ ನಿಯೋಜನೆ ಎಲ್ಲದರಲ್ಲೂ ಮುಂಬೈಯ ಜೆ. ಜೆ. ಕಲಾಶಾಲೆಯ ಪ್ರಭಾವವನ್ನು ಕಾಣುತ್ತೇವೆ. ಮತ್ತು ಅವರ ಕಲಾಕೃತಿಗೆ ಪುರಾಣಗಳ, ಹಾಗೂ ಅಜಂತಾ ಭಿತ್ತಿ ಚಿತ್ರಗಳ ಹಾಗೂ ಸಿಲೋನ ಸಿಗಿರಿಯಾ ಭಿತ್ತಿ ಚಿತ್ರಗಳ ಪ್ರಭಾವವನ್ನು ಕಲಾಕೃತಿಗಳಲ್ಲಿ ಬಳಿಸಿಕೊಂಡಿದ್ದಾರೆ.

**ಪ್ರೇರಣೆ**

ಕಲಾಕಾರನಿಗೆ ಅನೇಕ ಪ್ರೇರಣೆ ದೊರಕುವುದುಂಟು. ಕೇಲವೊಮ್ಮೆ ಪ್ರತ್ಯಕ್ಷವಾಗಿ ಕೆಲವೊಮ್ಮೆ ಪರೋಕ್ಷವಾಗಿ ಆದರೆ ಕಲಾಕಾರನ ಮನಸ್ಸು ಬುದ್ಧಿ ಶಕ್ತಿ ಸರ್ವದಾ ಜಗೃತವಾಗಿದ್ದು, ಸಂವೇದನಾ ಶೀಲವಾಗಿರಬೇಕು. ಸಮಾಜದ ಕೋಟಲೆ, ಸಂಘರ್ಷ, ನಿರಾಶೆ, ಹಾಗೂ ಉಲ್ಲಾಸ ದ್ವಂದ್ವ ಇವೆಲ್ಲವೂ ಕಲಾವಿದನ ಸಂವೇದನಾಶೀಲ ಮನಸ್ಸನ್ನು ಉತ್ತೇಜಿಸಲು ಸಮರ್ಥವಾಗುತ್ತವೆ.

ಮಾನವನ ಜೀವನ ಮುಖ್ಯವಾಗಿ ತನು, ಮನ, ಆತ್ಮಗಳೆಂಬ ಮೂರು ಅಂಶಗಳನ್ನು ಹೊಂದಿದೆ. ಶಿಕ್ಷಣವು ಇವುಗಳನ್ನು ಸಂಸ್ಕರಿಸುವ ಕಾರ್ಯವನ್ನು ಸದಾಕಾಲವೂ ಮಾಡುತ್ತಿರುತ್ತದೆ. ತನುವಿನ ಬೇಕಾದ ಆವನ ವಸತಿ ಸಂಸ್ಕಾರಕ್ಕೆ ಬೇಕಾದ ಉಪಜೀವನದ ಮಾರ್ಗವನ್ನು ಮನಸ್ಸಿನ ವಿಕಾಸಕ್ಕಾಗಿ ಸಾಹಿತ್ಯ, ಕಲೆ, ನೈತಿಕ ಮೌಲ್ಯಗಳನ್ನು, ಆತ್ಮದ ಉದ್ಧಾರಕ್ಕಾಗಿ ಧರ್ಮ, ಆಧ್ಯಾತ್ಮದ ಪಾರಮಾರ್ಥಿಕ ಮೌಲ್ಯಗಳನ್ನು ಕೊಡಬಲ್ಲುದೆ ನಿಜವಾಗಿ ಶಿಕ್ಷಣ, ಈ ರೀತಿಯ ವಿದ್ಯಾಪ್ರಸಾರದಿಂದ ಕರ, ಉರ, ಶಿರ, ಸಂವರ್ಧನೆಯಾಗುವುದು. ಕರವು ಕಾರ್ಯವನ್ನು ಉರವು ಹೃದಯವನ್ನು ಶಿರವು ಅರಿವನ್ನು ಸೂಚಿಸುತ್ತದೆ. ಶಿಕ್ಷಣವು ದೇಹಕ್ಕೆ ಪುಷ್ಠಿಯನ್ನು ಮನಕ್ಕೆ ವೈಶಾಲ್ಯತೆಯನ್ನು ಆತ್ಮಕ್ಕೆ ಆನಂದವನ್ನು ಕೊಟ್ಟು ಅಂತಃಕರಣವನ್ನು ಅರಳಿಸಿ ಸದ್ಗುಣಗಳನ್ನು ಮೈಗೂಡಿಸಿಕೊಂಡು ಬೀರಲು ಪ್ರೇರಣೆಯನ್ನು ನೀಡುತ್ತದೆ, ಹೀಗಾಗಿ ಶಿಕ್ಷಣವು ಇಂದು ಮಾನವನ ಬದುಕಿಗೆ ಪ್ರಮುಖ ಆಧಾರವಾಗಿ ನಿಂತಿದೆ.

ಡಿ.ವಿ. ಹಾಲಭಾವಿಯವರು ಬಾಲ್ಯದಿಂದಲೇ ಚಿತ್ರಕಲೆಯ ಅಭಿರುಚಿಯನ್ನು ಹೊಂದಿದವರು. ಇವರು ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣವನ್ನು ಮಾಡಿದವರಲ್ಲ. ನೇರವಾಗಿ ಚಿತ್ರಕಲೆಯನ್ನು ಕೇಂದ್ರೀಕರಿಸಿ ನಿಸರ್ಗದೊಂದಿಗೆ ಬಣ್ಣ ಕುಂಚದಿಂದ ಬೆರೆತವರು.[೮]

೦೮. ಮಲ್ಲಿಕಾರ್ಜುನ ಸಿ.ಬಾಗೋಡಿ, ಚಿತ್ರಕಲಾವಿದ ಜೆ.ಎಸ್.ಖಂಡೇರಾವ್, ಪುಟ ೧೦೪

ಹಾಲಭಾವಿಯವರ ಮನೆತನ ಒಳ್ಳೆಯ ಧಾರ್ಮಿಕ ಮನೆತನದಿಂದ ಬಂದಿದ್ದು ಹಾಲಭಾವಿಯವರ ತಂದೆ ವೀರಭದ್ರಪ್ಪನವರು ಒಬ್ಬ ದೊಡ್ಡ ಸಾಹಿತಿಕಾರರಾಗಿದ್ದರು. ವೀರಭದ್ರಪ್ಪನವರು ಪುರಾಣ ಪುಣ್ಯಕತೆಗಳು, ವೀರ ಶೈವದ ಸಾಕಷ್ಟು ಕೃತಿಗಳು ಬರೆಯುತ್ತಿದ್ದರು.

ಡಿ.ವಿ. ಹಾಲಭಾವಿಯವರಿಗೂ ಪುರಾಣಗಳ ಕತೆಗಳನ್ನು ಓದುತ್ತಾ ಚಿತ್ರಗಳ ಕಲ್ಪನೆಗಳನ್ನು ಮಾಡುತ್ತಾ ಪುರಾಣಗಳಲ್ಲಿ ಬರುವ ಪಾತ್ರಗಳ ಸನ್ನಿವೇಶಗಳ ಚಿತ್ರ ರಚನೆ ಮಾಡಿರಬಹುದು.

ಮುನ್ಸೂಫರಾಗಿದ್ದ ತಂದೆ ವೀರಭದ್ರಪ್ಪನವರ ಹವ್ಯಾಸ ಅಂದರೆ ಧಾರ್ಮಿಕ ಸ್ಥಳಗಳಿಗೆ ಪ್ರವಾಸ ಮಾಡುವದು. ಡಿ.ವಿ. ಹಾಲಭಾವಿಯವರ ಮೇಲೆ ಅಗಾಧವಾದ ಪರಿಣಾಮ ಬೀರಿ ಚಿತ್ರಕಲೆಯ ಮಮತೆಯನ್ನು ಹೆಚ್ಚಿಸಿತು. ಈ ರೀತಿ ಅನೇಕ ಕಡೆ ಪ್ರವಾಸಕ್ಕೆ ಹೋದಾಗ ನಾಸಿಕದ ಬುದ್ಧ ಗವಿ, ಹೊಳಲ್ಕರೆಯ ಅರಮನೆ, ಓಂಕಾರೇಶ್ವರ ದೇವಸ್ಥಾನ, ನರ್ಮದಾ ನದಿಯ ತೀರದ ನಿಸರ್ಗ ಸೌಂದರ್ಯ ವಿಕ್ಷಿಸಿ ಚಿತ್ರಿಸುವದು ಹಾಲಭಾವಿಯವರ ಬಾಲ್ಯದ ಬಯಕೆ ಆಗಿತ್ತು.

ತಾಯಿ ಚನ್ನಬಸಮ್ಮ ಧಾರ್ಮಿಕ ಮನೋವೃತ್ತಿಯವರು. ಪ್ರತಿಯೊಂದು ಹಬ್ಬದ ಕಲೆ ಸನ್ನಿವೇಶಗಳನ್ನು ತಂದುಕೊಂಡು ಕಲಾರಾಧನೆ ಮಾಡುವದನ್ನು ನೋಡುವ ಭಾವ ಬಾಲಕನಾಗಿದ್ದಾಗ ದಾನಪ್ಪನವರಲ್ಲಿ ಚಿತ್ರ ರೂಪವಾಗಿ ಮೂಡುತ್ತಿತ್ತು.

ಡಿ.ವಿ. ಹಾಲಭಾವಿಯವರ ತಂದೆ ವೀರಭದ್ರಪ್ಪ ಹಾಲಭಾವಿಗೆ ೧೯೨೦ರಲ್ಲಿ ಹೊನ್ನಾವರಕ್ಕೆ ವರ್ಗವಾಯಿತು. ಆಗ ಬಾಲಕ ದಾನಪ್ಪನಿಗೆ ಖುಷಿಯೂ ಖುಷಿಯಾಗಿದ್ದು ಜುಳು ಜುಳು ನಿನಾದದೊಂದಿಗೆ ಹರಿವ ತೊರೆ, ನದಿಗಳು, ಗಗನ ಚುಂಬಿ ವೃಕ್ಷಗಳು ಕಣ್ಣಸೆಳೆಯುವ ಹಸಿರು ಪ್ರಕೃತಿ ಹಾಲಭಾವಿಯವರಿಗೆ ಹುಚ್ಚು ಹಿಡಿಸಿದವು ಹಗಲು ರಾತ್ರಿಯನ್ನದೆ ಕಾಡು ಸುತ್ತಿ ಕಲಾಕೃತಿ ರಚನೆ ಮಾಡುತ್ತದ್ದರು.ನಿಸರ್ಗದೊಂದಿಗೆ ನಲಿಯುವ ಸಂತಸ ನಾಲ್ಕು ಗೋಡೆ ನಡುವಿನ ಶಾಲೆಯಲ್ಲಿ ಎಲ್ಲಿ ಸಿಕ್ಕಿತು ಅಲ್ಲಿಯವರೆಗೆ ಬರೀ ಚಟವಾಗಿದ್ದ ನಿಸರ್ಗ ರಸಸ್ವಾದನೆಯನ್ನು ಕುಂಚ ಹಿಡಿದು ನೂರಾರು ಕನಸು ರೂಪಿಸುವ ಹೊಸ ಅರ್ಥ ಹುಡುಕುವ ಛಲದಿಂದ ಚಿತ್ರಕಲೆಯನ್ನು ಜೀವನದ ಗುರಿಯನ್ನಾಗಿಸಿಕೊಂಡರು ಡಿ.ವಿ.ಹಾಲಭಾವಿಯವರು.

ಹಾಲಭಾವಿಯವರ ತಂದೆಯವರ ಜೊತೆಗೆ ಹೊನ್ನಾವರದಲ್ಲಿ ಇದ್ದಾಗ ದಾನಪ್ಪನವರಿಗೆ ಪ್ರಥಮವಾಗಿ ಚಿತ್ರಕಲೆಯ ಬಗ್ಗೆ ಪ್ರರಣೆ ನೀಡಿ ಸಾಕಷ್ಟು ಪ್ರೋತ್ಸಾಹವನ್ನು ನೀಡಿದವರು ಡ್ರಾಯಿಂಗ್ ಮಾಸ್ಟರ ದಾಸ್ ಪೈಅವರು. ಇವರು ದಾನಪ್ಪನವರಲ್ಲಿರುವ ಕಲಾ ಪ್ರತಿಬೆಯನ್ನು ಗುರುತಿಸಿ ಪ್ರೇರಣೆ ನೀಡಿದಪ್ರಥಮ ಗುರುಗಳು ಎನ್ನಬಹುದು.

ಕಲೆ ಮೂಲತ: ಮಾನವನ ಸೃಷ್ಟಿ. ಅದು ಪ್ರತಿಭಾವಂತ ಮಾನವನ ಜೀವನಾನುಭವ ಅಭಿವ್ಯಕ್ತಿ ಕಲೆ ಮಾನವತೆಯ ವಿಶಿಷ್ಟ ಆನಂದಾಯಿನಿಯಾದ ಮಾತರ ಶಕ್ತಿ. ಭೌತಿಕ ಜಗತ್ತಿನ ಬಾಹ್ಯ ಸೃಷ್ಟಿಗಿಂತ ಹೆಚ್ಚಾಗಿ ಮಾನವನ ಅಂತರಿಕ ನಿತ್ಯ ಸತ್ಯದ, ಆನಂದಾನುಭವದ ಅಭಿವ್ಯಕ್ತಿ ಕಲಾವಿದನ ಈ ಕಲೆ ಭಾವ ಬಣ್ಣ, ರೇಖೆ ಮುಂತಾದ ವಿವಿಧ ಮಾಧ್ಯಮದಲ್ಲಿ ಹೊಮ್ಮಿ ಸಮಾಜದ ಹೃದಯವಂತಿಕೆಯನ್ನು ಆಗ ಮಾಡುತ್ತದೆ.[೧೯]

ಯಾವುದೇ ಒಂದು ನಾಡಿನ ಜನಾಂಗದ ಬದುಕಿನ ಬೆಳವಣಿಗೆಯನ್ನು ಅವರ ಪರಂಪರೆ ಹಾಗೂ ಸಂಪ್ರಧಯಗಳನ್ನು ತಿಳಿಯಬೇಕಾದರೆ ಅವರ ಪರಿಸರದಲ್ಲಿ ಜೀವ ಪಡೆದಿರುವ ಕತೆಗಳನ್ನು ಅಧ್ಯಯನ ಮಾಡಬೇಕಾಗುತ್ತದೆ. ಮಾನವನ ಸಾಂಸ್ಕೃತಿಕ ಲೋಕದ ಪ್ರತಿ ಹಂತದಲ್ಲೂ ಕಲೆ ಪ್ರೇರಣೆಯ ವಸ್ತು ಆಗಿರುತ್ತದೆ. ಕಲಾವಿದನಿಗೆ ಪ್ರಕೃತಿಯ ಪ್ರೇರಣೆಯನ್ನು ನೀಡುತ್ತದೆ. ಅಲ್ಲದೆ ಒಂದೊಂದು ಸವಾಲನ್ನು ಎದುರಿಸುವ ಸಂದರ್ಭವನ್ನು ಸೃಷ್ಟಿಸುತ್ತದೆ.[೨೦]

---

೧೯. ಡಾ.ಎಸ್.ಸಿ.ಪಾಟೀಲ, ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು, ಪುಟ ೧೦೭

೨೦. ಮಲ್ಲಿಕಾರ್ಜುನ ಸಿ.ಬಾಗೋಡಿ, ಚಿತ್ರಕಲಾವಿದ ಜೆ.ಎಸ್.ಖಂಡೇರಾವ್, ಪುಟ ೧೦೬

A greatest part of my early years was spent in observing the world of nature it gave me intense joy to watch things ಎಂದು ಪ್ರಕೃತಿಯನ್ನು ಕುರಿತು ಪತ್ರವೊಂದರಲ್ಲಿ ಮಿತ್ರರೊಬ್ಬರಿಗೆ ರವೀಂದ್ರನಾಥ ಠಾಕೂರರು ಹೇಳುತ್ತಾರೆ. ಆ ಪತ್ರದ ಅಂತಿಮ ಸಾಲುಗಳಲ್ಲಿ ಪ್ರಕೃತಿಯ ಸೌಂದರ್ಯವನ್ನು It is tue joy of every man face to face with beauty ಎಂದೂ ಹೇಳುತ್ತಾರೆ. ಬಹುಶ: ಚಿತ್ರಕಲಾ ಇತಿಹಾಸದಲ್ಲಿ ಸೇರಿ ಹೋಗುವ ಬಹುತೇಕ ಕಲಾವಿದರು ಪ್ರಕೃತಿಯಿಂದಲೆ ಮತ್ತು ಅದನ್ನು ನಕಲು ಮಾಡುವದರಿಂದಲೆ ಅಲ್ಲದೇ ಅದರ ಪ್ರೇರಣೆಯಿಂದಲೆ ಚಿತ್ರಕಲೆಯ ಮೂಲ ಪಾಠಗಳನ್ನು ಕಲಿತವರು. Beauty is one of the great mysteries of nature whose influence we all see and feel.[೧೧]ಎನ್ನುವ ಮಾತು ಸತ್ಯ.

ಹಾಲಭಾವಿಯವರು ಬಾಲ್ಯದಲ್ಲಿ ಪ್ರಕೃತಿ ಸೌಂದರ್ಯ, ತಂದೆ- ತಾಯಿಯ ಧಾರ್ಮಿಕ ಪುರಾಣ ಸಂಸ್ಕೃತಿಗಳ ಹಾಗೂ ಕಲಾಗುರುಗಳಾದ ದಾಸ ಪೈ ಅವರ ಪ್ರೇರಣೆಯಿಂದ ಕಲಾಕೃತಿ ನಿರ್ಮಿಸಿದರು. ನಂತರದಲ್ಲಿ ಹಾಲಭಾವಿಯವರು ಹೆಚ್ಚಿನ ವಿಧ್ಯಾಬ್ಯಾಸಕ್ಕೆ ಮುಂಬೈ ಹೋಗಿ ಅಲ್ಲಿನ ಸಾಂಸ್ಕೃತಿಕ ವಾತಾವರಣದಿಂದ ಮತ್ತಷ್ಟು ಪ್ರೇರೇಪಿತಗೊಂಡು ಸಾವಿರಾರು ಕಲಾಕೃತಿಗಳನ್ನು ಅಧ್ಯಾಪನ ಅವಧಿಯಲ್ಲಿ ರಚಿಸಿದ್ದಾರೆ.

ಇವರಿಗೆ ಹೆಚ್ಚಿನ ಪ್ರೇರಣೆಯನ್ನು ನೀಡಿದವರು ಮುಂಬೈ ಕಲಾ ಶಾಲೆಯ ಗುರುಗಳಾದ ಶ್ರೀ ಎಂ.ವಿ. ದುರಂಧರ ಶ್ರೀ ಎ.ಎಸ್. ತ್ರಿಂದಾಯ, ಶ್ರೀ ಈ.ಆರ್.ಫರ್ನಾಂಡಿಸ್, ಶ್ರೀ ಗ್ಲ್ಯಾಡ್ಸನ್ ಸೋಲೋಮನ್, ಶ್ರೀ ಕೆ.ಬಿ.ಚುಡೇಕರ, ಶ್ರೀ ಎಲ್. ಎನ್. ತಾಸ್ಕರ ಹಾಲಭಾವಿಯವರಿಗೆ ಸಾಕಷ್ಟು ಪ್ರೇರಣೆಯನ್ನು ನೀಡಿದರು ಅಲ್ಲದೇ ಅವರ ಪ್ರತಿಯೊಂದು ಕಲಾ ಪ್ರದರ್ಶನದಲ್ಲಿ, ಕಲಾಕೃತಿ ರಚನೆಯಲ್ಲಿ, ಕಲಾಚಟುವಟಿಕೆಯಲ್ಲಿ ಸಾಕಷ್ಟು ಸಲಹೆ ಸೂಚನೆಗಳನ್ನು ನೀಡಿದರು. ಇಂತಹ ಮಹಾನ್ ಕಲಾವಿದರ ಸಲಹೆ ಸೂಚನೆ ಮತ್ತು ಪ್ರೇರಣೆಯಿಂದ ಹಾಲಭಾವಿಯವರು ಚಿತ್ರಕಲೆಯಲ್ಲಿ ಅತ್ಯುನ್ನತ ಸ್ಥಾನಕ್ಕೆ ಏರಿದರು.

ಹಾಲಭಾವಿಯವರು ಕಲಾ ವ್ಯಾಸಂಗದಲ್ಲಿ ಅನೇಕ ಪ್ರವಾಸಗಳನ್ನು ಮಾಡಿದವರು. ಅಜಂತಾ ಎಲ್ಲೋರಕ್ಕೆ ಭೇಟಿ ನೀಡಿ ಅನೇಕ ಕಲಾಕೃತಿಗಳನ್ನು ರಚಿಸಿ. ಅಲ್ಲಿ ಕಲಾಕೃತಿಯ ಪ್ರೇರಣೆಯನ್ನು ಪಡೆದು ತಮ್ಮ ಕಲಾ ಕೃತಿಯಲ್ಲಿ ಅಳವಡಿಸಿಕೊಂಡಿದ್ದಾರೆ.

ಅಲ್ಲದೆ ಹಾಲಭಾವಿಯವರು ೧೯೬೮-೬೯ರಲ್ಲಿ ಸಿಲೋನಕ್ಕೆ ಸಂದರ್ಶನ ನೀಡಿದಾಗ ಸೀಗರಿಯಾ ಭಿತ್ತಿ ಚಿತ್ರ ಗಳನ್ನು ವಿಕ್ಷಿಸಿ ,ಚಿತ್ರಿಸಿ, ಆ ಚಿತ್ರಗಳ ಅಲ್ಲಿಯ ಕಲಾವಿದರ ಕಲಾಕೃತಿಗಳಿಂದ ಪ್ರೇರೆಪಿತರಾಗಿದ್ದು ಹಾಲಭಾವಿಯವರ ಕಲಾಕೃತಿಯನ್ನು ಗಮನಿಸಿದಾಗ ಕಂಡು ಬರುತ್ತದೆ.

ಪ್ರೇರಣೆಯು ಸಹಾಯ ಎನ್ನುವ ಪದಕ್ಕೆ ಸಮೀಪದಲ್ಲಿದೆ. ಸಹಾಯ-ಪ್ರೇರಣೆ ಎರಡೂ ಪದಗಳು ಬೇರೆ ಬೇರೆಯಾದರು ಅದರ ಅರ್ಥ ಕೆಲವು ಸಂದರ್ಭಗಳಲ್ಲಿ ಒಂದೇ ಆಗಿರುತ್ತದೆ. ಸಹಾಯವು ಬಾಹ್ಯ ಪ್ರಚೋದನೆಗೆ ಸಂಬಂಧಪಟ್ಟರೆ ಪ್ರೇರಣೆಯ ಆಂತರಿಕ ಪ್ರಚೋದನೆ ಸಂಬಂಧಪಟ್ಟಿರುತ್ತದೆ.

ಹೀಗೆ ಹಾಲಭಾವಿಯವರಿಗೆ ತಂದೆ- ತಾಯಿಯಿಂದ, ಕಲಾ ಗುರುಗಳಿಂದ, ತಮಗೆ ಸಾಕಷ್ಟು ಪ್ರೇರಣೆ ನೀಡಿದ ಕಲಾಸ್ನೇಹಿತರಿಂದ ಹಾಗೂ ಕಲಾ ಅಧ್ಯಯನ ಪ್ರವಾಸದ ಪರಿಣಾಮವಾಗಿ ಕರ್ನಾಟಕದಲ್ಲಿ ಮೊದಲ ಕಲಾ ಶಾಲೆಯನ್ನು ಪ್ರಾರಂಭಿಸಿ ದೇಶದಲ್ಲಿಯೇ ದೊಡ್ಡ ಚಿತ್ರಕಲಾವಿದರಾಗಿ ಗುರುತಿಸಿಕೊಂಡರು.

**ತಂತ್ರಗಾರಿಕೆ :**

ಕಲೆಯು ಯಾವಾಗಲೂ ಜನಗಳ ಮನಸ್ಸಿನ ಮೇಲೆ ಪ್ರಭಾವ ಬೀರುವ ಒಂದು ಮುಖ್ಯ ಸಾಧನೆಯಾಗಿದೆ. ಅದಕ್ಕಾಗಿ ಚಿತ್ರಕಲೆ ಮನೋವಿಜ್ಞಾನದ ಸಿದ್ಧಾಂತಗಳ ಮೇಲೆ ಆಧಾರವಾಗಿರುವದು. ಕಲೆಯಲ್ಲಿ ಕೇವಲ ತಾಂತ್ರಿಕ

೧೧. ಡಾ. ಎಸ್.ಸಿ.ಪಾಟೀಲ, ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು, ಪುಟ ೪೯

ನೈಪುಣ್ಯತೆ ಬಂದಿದ್ದರೆ ಸಾಲದು ತಾಂತ್ರಿಕ ನೈಪುಣ್ಯತೆಯೊಂದಿಗೆ ಮನೋವಿಜ್ಞಾನದ ತತ್ವಗಳನ್ನು ಅಳವಡಿಸಿಕೊಂಡರೆ ಚಿತ್ರಕಲಾಕೃತಿಯ ನೈಪುಣ್ಯತೆ ಇನ್ನೂ ಹೆಚ್ಚುತ್ತದೆ. ಯಾವುದೇ ಒಂದು ಕಲಾಕೃತಿಯ ಹಿಂದೆ ಕಲಾವಿದನ ಮನಸ್ಥಿತಿಯು ಮುಖ್ಯವಾಗಿ ಕಾರಣವಾಗಿರುತ್ತದೆ. ಹೀಗಾಗಿ ಚಿತ್ರಕಲೆ ಮನ: ಶಾಸ್ತ್ರಕ್ಕೆ ಬಿಡಲಾರದ ನಂಟುತನವಿದ್ದು , ಇವು ಒಂದಕ್ಕೊಂದು ಪೂರಕ ಮತ್ತು ಪ್ರೇರಕವಾದ ಸಂಬಂಧವನ್ನು ಹೊಂದಿವೆಯೆಂದು ಹೇಳಬಹುದು.[೧೨]

ಹಾಲಭಾವಿಯವರು ಕಲಾಕೃತಿಗಳನ್ನು ರಚಿಸುವಾಗ ಅವರು ಬಳಸಿದ ತಂತ್ರವಿಧಾನವನ್ನು ನಾವು ಗಮನಿಸಿದಾಗ ಅಧ್ಯಯನ ಕಾಲದ ಹಂತದಲ್ಲಿಯ ಕಲಾಕೃತಿಗಳಲ್ಲಿ ಬಳಸಿದ ತಂತ್ರಗಾರಿಕೆ, ವರ್ಣ ಪ್ರಭಾವ ಮತ್ತು ಅಧ್ಯಾಪಕ ವೃತ್ತಿಯಲ್ಲಿ ನಿರ್ಮಾಣಗೊಂಡಿರುವ ಕಲಾಕೃತಿಗಳ ತಂತ್ರ ವಿಧಾನವಲ್ಲದೆ ನಿವೃತ್ತಿಯ ಹಂತದಲ್ಲಿ ನಿರ್ಮಾಣಗೊಂಡಿರುವ ಕಲಾಕೃತಿಗಳನ್ನು ರಚಿಸಲು ಬಳಸಿದ ತಂತ್ರ ವಿಧಾನವನ್ನು ಗಮನಿಸಿದಾಗ ಇಲ್ಲಿಯ ಆಯಾ ಒಂದು ಅವಧಿಗೆ ಸಂಬಂಧಪಟ್ಟಂತೆ ತಂತ್ರ ವಿಧಾನವನ್ನು ಬಳಸಿಕೊಂಡು ಹಾಲಭಾವಿಯವರು ಕಲಾಕೃತಿಗಳನ್ನು ರಚಿಸಿದ್ದು ಕಂಡು ಬರುತ್ತದೆ.

ಹಾಲಭಾವಿಯವರ ಕಲಾಕೃತಿಗಳನ್ನು ನೋಡಿದೊಡನೆಯೇ ಅದರಲ್ಲಿ ಏನೋ ಒಂದು ರೀತಿಯ ಮನಸ್ಸನ್ನು ಸೆಳೆಯುವ ಆಕರ್ಷಣೆಯು ತನ್ನನ್ನು ತಾನೇ ಕರೆದೊಯ್ಯುತ್ತದೆ. ಇವರೇ ಹೇಳುವ ಹಾಗೆ ವ್ಯಕ್ತಿ ಚಿತ್ರಗಳನ್ನು ರಚಿಸುವದು ಸುಲಭವಲ್ಲ ಯಾಕೆಂದರೆ ಚಿತ್ರದಲ್ಲಿ ನಾವು ವ್ಯಕ್ತಿಯನ್ನು ತೋರಿಸಬಹುದು. ಆದರೆ ಆ ವ್ಯಕ್ತಿಯ ಹಾವ ಭಾವಗಳನ್ನು ತೋರಿಸಬೇಕು (Expression is very important in a portrait or life painting) ಒಂದು ವೇಳೆ ಅಲ್ಲಿ ಭಾವನೆ (Expression) ಇರಲಿಲ್ಲವೆಂದರೆ ಅದು ಕಲಾಕೃತಿಯೆನಿಸಲಿಕ್ಕೆ ಯೋಗ್ಯವಲ್ಲದಂತಾಗುತ್ತದೆ. ಅದಕ್ಕೆ ವ್ಯಕ್ತಿ ಚಿತ್ರಗಳಲ್ಲಿ ಭಾವವೇ ಪ್ರಧಾನವಾಗಿರುತ್ತದೆ ಎಂದು ಹಾಲಭಾವಿಯವರು ವ್ಯಕ್ತಿ ಚಿತ್ರಗಳ ಬಗ್ಗೆ ಹೇಳುತ್ತಾರೆ.

ಇದೇ ರೀತಿಯ ತಂತ್ರ ವಿಧಾನವನ್ನು ಬಳಸಿಕೊಂಡು ಇವರು ಕೆಲವು ನಿಸರ್ಗ ಚಿತ್ರಗಳನ್ನು ಮತ್ತು ಸ್ಥಿರಚಿತ್ರಗಳನ್ನು ಚಿತ್ರಿಸಿದ್ದಾರೆ, ಈ ತಂತ್ರ ವಿಧಾನಕ್ಕೆ ಇವರು ಬಳಸುವ ವರ್ಣಗಳು ಹೀಗಿವೆ. Burnt umber. Vyndake Brown, Cobalt blue, Sapgreen, Emarald green, Yellow ochre, Crimson lake, Flake White ಮುಂತಾದ ವರ್ಣಗಳನ್ನು ಬಳಸಿಕೊಂಡು ಕಲಾಕೃತಿಗಳನ್ನು ರಚಿಸಿದ್ದಾರೆ.[೧೩] ಇದು ಪ್ರಾತ್ಯೆಕ್ಷಿಕೆಗಳನ್ನು ಮಾಡುವ ಸಂದರ್ಭದಲ್ಲಾದ ತಂತ್ರವಿಧಾನವಾದರೆ ಇನ್ನು ಬೇರೆಯವರಿಂದ ಮಾಡಿಕೊಟ್ಟ ವ್ಯಕ್ತಿ ಚಿತ್ರಗಳಲ್ಲಿ ದಪ್ಪವಾಗಿ ಬಳಸದೇ ತುಂಬಾ ಮೃದುವಾಗಿ, ಒಂದೇ ತೆರನಾದ ವರ್ಣಸಂಯೋಜನೆಯನ್ನು ನಾವು ಕಾಣಬಹುದು. ಇವುಗಳಲ್ಲಿ ಹೆಚ್ಚಾಗಿ ಛಾಯಾಚಿತ್ರಗಳನ್ನು ಆಧರಿಸಿ ಚಿತ್ರಿಸಿದ ಕಲಾಕೃತಿಗಳಾಗಿವೆ. ಈ ಸಂದರ್ಭದಲ್ಲಿ ಛಾಯಾಚಿತ್ರವು ಚಿಕ್ಕದಾದರೆ ಅದನ್ನು ಒಂದು ಹಾಳೆಗೆ ಅಂಟಿಸಿ ಅದರ ಮೇಲೆ ಪೆನ್ಸಿಲ್‌ನಿಂದ ಗೆರೆಗಳನ್ನು ಹಾಕಿ ಒಮದು ಬದಿಯಿಂದ ಇನ್ನೊಂದು ಬದಿಯಿರುವ ಗೆರೆಗಳಂತೆಯೇ ಒಂದೇ ತೆರನಾದ ಸಂಖ್ಯೆಯನ್ನು ಕೊಡುತ್ತಾ ಹೋಗಿ ಛಾಯಾಚಿತ್ರದ ತುಂಬ ಎರಡೂ ರೀತಿಯಿಂದ ಗೆರೆಗಳನ್ನು ಎಳೆದು ಸಿದ್ದಪಡಿಸಿಕೊಳ್ಳುತ್ತಾರೆ. ನಂತರದಲ್ಲಿ ಅ ಛಾಯಾಚಿತ್ರದಲ್ಲಿರುವ ವ್ಯಕ್ತಿಯನ್ನು ಕ್ಯಾನವಾಸಿನ ಮೇಲೆ ಬಿಡಿಸುವಾಗ ಅದರ ಮೇಲೆ ಛಾಯಾಚಿತ್ರದ ಮೇಲೆ ಛಾಯಾಚಿತ್ರದ ಮೇಲೆ ಹಾಕಿರುವ ಬ್ಲಾಕ್‌ಗಳಂತೆ ಎರಡು ಅಥವಾ ಮೂರು ಪಟ್ಟುಗಳಂತೆ ಬ್ಲಾಕ್‌ಗಳನ್ನು ಹಾಕುತ್ತಾರೆ. ನಮಗೆ ಎಷ್ಟು ದೊಡ್ಡ ಗಾತ್ರದಲ್ಲಿಬೇಕು. ಅಷ್ಟು ಪಟ್ಟು ಬ್ಲಾಕ್‌ಗಳನ್ನು ಹೆಚ್ಚಿಸುತ್ತಾ ಹೋಗಬೇಕು. ಹೀಗೆ ಬ್ಲಾಕ್ ಗಳನ್ನು ಹಾಕಿ, ನಂತರ ಅದರ ಮೇಲೆ ಸಂಪೂರ್ಣವಾಗಿ ಪೆನ್ಸಿಲ್‌ನಿಂದ ವ್ಯಕ್ತಿಚಿತ್ರವನ್ನು ಬಿಡಿಸಬೇಕು. ಇದಾದ ಮೇಲೆ ಬಣ್ಣವನ್ನು ಬಳಸಿಕೊಂಡು ಕಲಾಕೃತಿಯನ್ನು ರಚಿಸುವುದು ಇದೂ ಕೂಡ ಒಂದು ರೀತಿಯ ತಂತ್ರವಿಧಾನ. ಇಲ್ಲಿ ಬಳಸುವ ವರ್ಣಗಾರಿಕೆಯ ಪ್ರಭಾವವೇ ಬೇರೆ ಇಲ್ಲಿ ವರ್ಣವನ್ನು ದಪ್ಪ ದಪ್ಪವಾದ ಲೇಪಿಸದೆ ಕಡಿಮೆ ಪ್ರಮಾಣದಲ್ಲಿ ವರ್ಣವನ್ನು ಬಳಸಿಕೊಂಡು ಅದರಲ್ಲಿಯೇ ನೈಜತೆಯೊಂದಿಗೆ ಭಾವಪ್ರಧಾನದಂಥ ಕಲಾಕೃತಿಗಳನ್ನು ರಚಿಸಿದ್ದಾರೆ.

---

೧೨. ಕೆ.ವಿ.ಸುಬ್ರಮಣ್ಯಂ, ಕಲಾ ಸಂವೇದನೆಯ ಒಳನೋಟಗಳು, ಪುಟ ೨೧

೧೩. ಬಿ.ವಿ.ಮಲ್ಲಾಪುರ, ಅಲ್ಲಮಪ್ರಭು ದೇವರ ವಚನ ಸಂಪುಟ, ಪುಟ ೧೩೦

ಈ ಹಂತದಲ್ಲಿ ಇರುವ ಹೆಚ್ಚಾಗಿ ಶರಣರ ಜೀವನಕ್ಕೆ ಸಂಬಂದಪಟ್ಟಂತೆ ಧಾರ್ಮಿಕ ವಿಷಯಗಳಿಗೆ ಸಂಬಂಧಪಟ್ಟಂತೆ ಮತ್ತು ಪೌರಾಣಿಕ ವಿಷಯಗಳಿಗೆ ಸಂಬಂಧಪಟ್ಟಂತೆ ಹಲವಾರು ಕಲಾಕೃತಿಗಳು ಇವರಿಂದ ರಚಿಸಲ್ಪಟ್ಟಿವೆ. ಇವೆಲ್ಲವೂ ನೈಜ ಸಂಯೋಜನ ಕಲಾಕೃತಿಗಳಾಗಿವೆ. ಇವು ತೈಲವರ್ಣದಲ್ಲಿ ಮೂಡಿಬಂದ ಕಲಾಕೃತಿಗಳಾದರೂ ಪಾರದರ್ಶಕತೆಯಂತೆ ವರ್ಣವನ್ನು ತುಂಬ ತೆಳುವಾಗಿ ಮತ್ತು ಮೃದುವಾಗಿ ಬಳಸಿಕೊಂಡು ಚಿತ್ರಿಸಿದ್ದಾರೆ. ಯಾವುದೇ ಕಲಾಕೃತಿಯನ್ನು ರಚಿಸುವುದಕ್ಕಿಂತ ಪೂರ್ವದಲ್ಲಿ ಅಂಕನೆ (Sketch) ಗಳನ್ನು ಮಾಡಿ ನಂತರದಲ್ಲಿ ಅದೇ ದೊಡ್ಡ ಅಳತೆಯಲ್ಲಿ ಚಿತ್ರಿಸುವುದು ಇವರು ರೂಢಿಯಾಗಿಸಿಕೊಂಡಿದ್ದರು. ಇದು ಹಾಲಭಾವಿಯವರ ಶಿಸ್ತಿನ ಕ್ರಮವೂ ಆಗಿತ್ತು. ಯಾಕೆಂದರೆ ಮುಂಬೈನ ಸರ್. ಜೆ. ಜೆ. ಕಲಾಶಾಲೆಯಲ್ಲಿ ಇವರು ವಿದ್ಯಾಭ್ಯಾಸವನ್ನು ಮಾಡುವಾಗ ಅಲ್ಲಿ ಒಂದು ಕಲಾಕೃತಿಗಳನ್ನು ರಚಿಸಿಬೇಕಾದರೆ ಅದನ್ನು ಬೇರೆ ಬೇರೆ ರೀತಿಯಿಂದ ಐದಾರು ಬಾರಿ ಪೆನ್ಸಿಲ್ ನಿಂದ ಚಿತ್ರಿಸಬೇಕಾಗಿತ್ತು. ಇದಾದ ಮೇಲೆ ಬಣ್ಣದಿಂದ ಕಲಾಕೃತಿಯನ್ನು ರಚಿಸಬೇಕು. ಇದು ಜೆ. ಜೆ. ಕಲಾಶಾಲೆಯಲ್ಲಿನ ಶಿಸ್ತಿನ ಕ್ರಮವಾಗಿತ್ತು. ಖಂಡೇರಾವರ ಕಲಾಕೃತಿಗಳಲ್ಲಿಯೂ ನಾವು ಈ ರೀತಿಯ ತಂತ್ರವಿಧಾನವನ್ನು ಕಾಣಬಹುದು. ಇವರು ಬಣ್ಣವನ್ನು ಬಳಸಿಕೊಳ್ಳುವ ಕ್ರಮವೂ ಅಷ್ಟೇ ವಿಶೇಷವಾದದ್ದು. ಇವರು ಪ್ಯಾಲೆಟ್ ನಲ್ಲಿ ಮೊದಲು ಬಣ್ಣವನ್ನು Dark ನಿಂದ ಪ್ರಾರಂಭಿಸಿ ಕೊನೆಯಲ್ಲಿ Light ನಂತೆಯೇ ಬಣ್ಣವನ್ನು ಹಚ್ಚಿಕೊಳ್ಳುತ್ತಾರೆ. ಇದು ಇವರು ಬಳಸಿಕೊಳ್ಳುವ ವರ್ಣಗಾರಿಕೆಯ ವೈಶಿಷ್ಟ್ಯವಾಗಿದೆ.

ಕೇವಲ ರೇಖೆಗಳ ಗತಿ ಬರೀ ಚಿತ್ರರಚನೆ ಪದ್ಧತಿ ಮತ್ತು ವರ್ಣ ಸಾಮರಸ್ಯದ ವಿಂಗಡನೆಗಳಿಂದಲೇ ಕಲಾಕೃತಿಗಳ ರೂಪ– ರೇಷೆಯನ್ನು ಗುರುತಿಸಲು ಅಸಾಧ್ಯವಾದದ್ದು. ಯಾವುದೇ ಕಲಾಕೃತಿಯಲ್ಲಿಯ ಆಕಾರ ವರ್ಣಗಳ ತಾಳ–ಮೇಳ ವಿಷಯಗಳ ಸ್ವಂತಿಕೆ ತಾಂತ್ರಿಕತೆ ಕಲೆಯ ಒಳ ಅರ್ಥಗಳನ್ನು ನಾವು ಸೂಕ್ಷ್ಮವಾಗಿ ಗುರುತಿಸಲೇಬೇಕು. ಕೇವಲ ಆಕಾರ ಪ್ರಮಾಣಬದ್ದವಾಗಿದ್ದರೆ ಮಾತ್ರ ಸಾಲದು. ಬಣ್ಣಗಳ ಹರವಿಕೆಯಲ್ಲಿಯ ತಾಳ–ಮೇಳದಲ್ಲಿ ಸಮತೋಲನವೂ ಅಷ್ಟೇ ಪ್ರಧಾನ ಪಾತ್ರವಹಿಸುತ್ತದೆ. ಇಲ್ಲಿ ದೊಡ್ಡ ಗಾತ್ರದ ಚಪ್ಪಟೆಯಾದ ಕುಂಚದಿಂದ ಬಣ್ಣವನ್ನು ತೆಳುವಾಗಿ ಒರೆಸುತ್ತಾ ಹೋಗಿದ್ದಾರೆ. ಅವು ನೋಡಿದರೆ ಅಡ್ಡದಾದ ಮತ್ತು ಉದ್ದವಾದ ಪಟ್ಟೆಗಳ ಆಕಾರಗಳಂತೆ ಕಂಡರೂ ಅವು ನೋಡುವುದಕ್ಕೆ ಕಣ್ಣಿಗೆ ಒಂದು ರೀತಿಯ ಮುದವನ್ನು ಕೊಡುತ್ತವೆ. ಇಲ್ಲಿ ಬಳಸಿದ ತಂತ್ರ ವಿಧಾನವನ್ನು ನಾವು ಗಮನಿಸಿದಾಗ ವಿಂಡೋಸರಣಿಯಲ್ಲಿ ಬಳಸಿದ ತಂತ್ರವನ್ನೇ ಇಲ್ಲಿಯೂ ಬಳಸಿಕೊಂಡಿದ್ದು ಕಂಡುಬರುತ್ತದೆ. ಹೀಗೆ ಹಾಲಭಾವಿಯವರ ಪ್ರತಿಯೊಂದು ಮಾಧ್ಯಮದಲ್ಲೂ ತಮ್ಮದೇ ಆದ ತಂತ್ರ ವಿಧಾನದೊಂದಿಗೆ ಕಲಾಕೃತಿಗಳನ್ನು ರಚಿಸುತ್ತಾ ಬಂದಿರುವುದನ್ನು ಗಮನಿಸಬಹುದಾಗಿದೆ.

**ಹಾಲಭಾವಿಯವರ ಒಟ್ಟಾರೆ ಕಲಾಕೃತಿಗಳ ಅಧ್ಯಯನದಿಂದ ಕಂಡು ಬರುವ ಪ್ರಮುಖ ಅಂಶಗಳು**

ಸಾಂಪ್ರದಾಯಿಕ ಕಲೆ, ಅಮೂರ್ತರೂಪದ 'ಕಲೆ' ಎಂಬ ವರ್ಗೀಕರಣ ಇಂದಿನ ಸಮಕಾಲೀನ ಕಲಾ ಸಂದರ್ಭದಲ್ಲಿ ಕೇಳಿ ಬರುತ್ತಿದೆಯಾದರೂ ಕಲಾವಿದರ ವೈಯಕ್ತಿಕ ಮನೋಧರ್ಮದ ಮೇಲೆ ಅವರವರ ಆಯ್ಕೆಯಾಗುತ್ತದೆ. ಹಾಲಭಾವಿಯವರ ನೈಜ ಕಲೆಯಲ್ಲಿ ವಿಶೇಷವಾಗಿ ತಮ್ಮನ್ನು ತೊಡಗಿಸಿಕೊಂಡು ಕಲಾಕೃತಿ ರಚನೆ ಮಾಡಿದ್ದಾರೆ. ಯಾವುದೇ ಪರಂಪರೆ ಇಲ್ಲದೆ ಯಾವ ಕಲೆಗಳು ಬೆಳೆಯುವುದಿಲ್ಲ. ಪರಂಪರೆ ಎನ್ನುವದನ್ನು ಕಟ್ಟಡಕ್ಕಿರುವ ಭದ್ರ ತಳಹದಿ ಇದ್ದಂತೆ ಇಂದು ನಿನ್ನೆಯದರ ಮುಂದುವರಿಕೆ ಎಂಬುದು ಗಮನಾರ್ಹ ಆಂಶವಾಗಿದೆ.

ಹಾಲಭಾವಿಯವರನ್ನು ಕನ್ನಡ ನಾಡಿನ ಮಹಾನ್ ಕಲಾವಿದ, ಕಲಾತಪಸ್ವಿ, ಕುಂಚಬ್ರಹ್ಮ ಎಂದು ಅನೇಕ ಸಾಹಿತಿಕಾರರು, ವಿದ್ವಾಂಸರು ಕರೆದರು ಅದಕ್ಕೆ ಕಾರಣ ಇವರು ಚಿತ್ರಗಳ ವಸ್ತು–ಶೈಲಿ. ಇಂತಹ ನೈಜ ಕಲೆಯ ಪರಂಪರೆಯಲ್ಲಿ ನಡೆದವರು ಎಸ್. ಎಂ. ಪಂಡಿತ, ಜಿ, ಎಸ್. ದಂಡಾವತಿಮಠ, ಅಮೀನಸಾಹೇಬ ಕಮಡೋಳ್ಳಿ, ಡಿ.ಜಿ. ಬಡಿಗೇರ, ಸಿ. ವಿ. ಕಾರಡಗಿ, ಎಂ. ವಿ. ಮಿಣಜಗಿ, ಆಲ್ಮೇಲಕರ, ವೈ. ಸುಬ್ರಹ್ಮಣ್ಯರಾಜು,

ಎನ್. ಹನುಮಯ್ಯ, ಎಂ. ಟಿ.ವಿ. ಆಚಾರ್ಯ, ಪಾವಂಜೆ, ನಂಜುಂಡಸ್ವಾಮಿ, ಎಸ್. ಎನ್. ಸ್ವಾಮಿ, ಪಿ. ಎರ್. ತಿಪ್ಪೇಸ್ವಾಮಿ ಇನ್ನೂ ಅನೇಕರು ಈ ಕಲಾಪರಂಪರೆಯ ಕಲಾವಿದರ ಕೊನೆಯ ಕೊಂಡಿಯಾಗಿ ಅನೇಕ ಕಲಾಕೃತಿ ರಚಿಸಿದವರು ಡಿ. ವಿ. ಹಾಲಭಾವಿಯವರು.[೧೪]

ಭಾರತೀಯ ಕಲೆಗೆ ಧರ್ಮವೇ ಸ್ಫೂರ್ತಿಯಾದ್ದರಿಂದ ಭಾರತೀಯರಿಗೆ ಕಲೆ ಕಲೆಗಾಗಿ ಎಂದರೆ ಅಷ್ಟು ಸಮರ್ಪಕವಲ್ಲ. ತತ್ವವನ್ನು ಸಚ್ಚಿದಾನಂದ ಸ್ವರೂಪವೆಂದೇ ಪರ ಬ್ರಹ್ಮತತ್ವದಲ್ಲಿ ಸತ್ ಚಿತ್ ಆನಂದ, ತತ್ವಗಳು ಲೀನವಾಗಿರುವುವೆಂದೇ ತಿಳಿದ ಭಾರತೀಯ ತಾತ್ವಿಕರಿಗೆ ಕಲೆ ಅಥವಾ ಸೌಂದರ್ಯಾನುಭವ ಒಂದು ಸಾಧನ ಮಾತ್ರ, ಐಕ್ಯೈಕ ಧ್ಯೇಯವಲ್ಲ. ಜೀವನದ ಅಂತಿಮ ಧ್ಯೇಯವಾದ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಸೌಂದರ್ಯಾನ್ವೇಷನೆ ಒಂದು ಸಾಧನೆ. ಸೌಂದರ್ಯಾನುಭವ ನೀಡುವ ಆನಂದ ಬ್ರಹ್ಮಾನಂದ ಒಂದು ಸ್ವರೂಪ ಆಗಿದೆ. ಇಂತಹ ಬ್ರಹ್ಮಾನಂದವನ್ನು ನೀಡುವ ಕಲೆ ಆತ್ಮದ ಶ್ರೇಯಸ್ಸನ್ನು ಸಾಧಿಸುವದು ಕ್ಷಣಕಾಲವಾದರೂ ರಾಜಸಿಕ, ತಾಮಾಸಿಕಾವರಣಗಳನ್ನು ಭಂಗಮಾಡಿ ಒಂದು ವಿಶೇಷವಾದ ಆನಂದಾನುಭವವನ್ನು ಸಹೃದಯದಲ್ಲಿ ಉಂಟು ಮಾಡುವದರಿಂದ ಕಲೆ ಪ್ರೇಕ್ಷಕನ ಮೇಲೆ ಅಥವಾ ಸಹೃದಯಿಯ ಮೇಲೆ ಮಾಡುವ ಸತ್ಪರಿಣಾಮದ ಫಲವೇ ಕಲೆಯಿಂದೊದಗುವ ಶ್ರೇಯಸ್ಸು. ಇಂತಹ ಶ್ರೇಯಸ್ಸನ್ನು ಡಿ.ವಿ.ಹಾಲಭಾವಿಯವರ ಕಲಾನಿಷ್ಟೆ ಹಾಗೂ ಪರಿಶ್ರಮಗಳಿಂದ ಕೂಡಿದ ಚಿತ್ರಮಯ ಬದುಕಿನಲ್ಲಿ ಕಾಣುತ್ತೇವೆ.

ಭಾರತೀಯ ಚಿತ್ರ ಕಲೆಯ ಸಂವೇದನೆ ಮೂಲತ: ರೊಮ್ಯಾಂಟಿಕ್ ಆದದ್ದು, ಅಂತೇಯೇ ಹಾಲಭಾವಿಯವರ ಪ್ರಭಾವ ವಿಸ್ತಾರವಾದದ್ದು. ಅಂದಿನ ಜನರ ಸ್ವಾತಂತ್ರ್ಯ ಪ್ರೀತಿ ಸ್ವದೇಶಿ ಚಳುವಳಿ, ಬ್ರಿಟೀಷರ ದಬ್ಬಾಳಿಕೆ, ಜನರ ಒಳಗುದಿ ಇತ್ಯಾದಿಗಳು ನಮ್ಮ ಕಲಾವಿದರ ಕೃತಿಗಳಲ್ಲಿ ಕಾಣಿಸಿಕೂಳ್ಳಲಿಲ್ಲ ಎನ್ನುವದು ಅವರ ಪುರಾಣಪ್ರಿಯತೆಯ ಕೃತಿಗಳಲ್ಲಿ ಪ್ರಭಾವಿಸುತ್ತವೆ. ಅಂದಿನ ಸಮಾಜದ ನಿರೀಕ್ಷೆಗಳು ಕಲೆಯ ಕುರಿತಂತೆಯೇ ಆಗಿದ್ದವು. ಹಾಲಭಾವಿಯವರ ಸಮಕಾಲೀನ ಕಲಾವಿದರೆಲ್ಲ ರಚಿಸುವಂಥ ಭಾವಚಿತ್ರವಾಗಲಿ, ನಿಸರ್ಗ ಚಿತ್ರಗಳಾಗಲಿ ಧಾರ್ಮಿಕ ಸಂಯೋಜನೆಗಳ ಕೃತಿಗಳನ್ನು ನಿಜವಾದ ಗಂಬೀರ ಕಲೆ ಎಂದೇ ಭಾವಿಸಿದ್ದರು ಯಾಕೆಂದ್ದರೆ "ಆ ಕಾಲದಲ್ಲಿ ಕಲಾವಿದರು ಕಲೆ ಎಂದರೆನೆಂದು ಭೋದಿಸುತ್ತಿದ್ದರೋ ಆ ಗುಣಲಕ್ಷಣಗಳಿಗೂ, ಅವರುಗಳ ಸೃಷ್ಟಿಸುತ್ತಿದ್ದ ಕಲೆಗೂ ಒಂದು ಅವಿನಾಭಾವ ಸಂಬಂಧವಿರುತ್ತಿತ್ತು. ಅಂದಿನಿಂದ ತೀವ್ರ ತರಹದ ಮೌಖಿಕ ಲಿಖಿತ ಹಾಗೂ ವಾಚ್ಯತಾತ್ವಿಕ ಜಿಜ್ಞಾಸೆಯು ಇಂದಿನವರೆಗೂ ನಮ್ಮಲ್ಲಿ ಕಾಣಿಯಾಗಿದೆ" ಅಲ್ಲದೆ ಆ ಕಾಲದಲ್ಲಿ ಕಲಾ ಕ್ಷೇತ್ರದಲ್ಲಿ ಬೀಸಿದ ಹೊಸಗಾಳಿಗೆ ಅನೇಕ ಕಲಾವಿದರು ಸ್ಪಂದಿಸದಂತಹ ಸಂದಿಗ್ಧ ಸ್ಥಿತಿಯಲ್ಲಿ ಇದ್ದರು. "ತಮಗೆ ಪರಿಣಿತಿ ಇದ್ದ ಹಿಂದಿನದರಲ್ಲಿ ಜೀವನಾಧಾರಕ್ಕೆ ದಾರಿ ಇತ್ತು. ಆದರೆ ತಮ್ಮ ಊಹೆಗೂ ನಿಲುಕದ ಈ ಹೂಸದರಲ್ಲಿ ಅನಿಶ್ಚಯ ಸ್ಥಿತಿ ಕಲೆಯ ಉದ್ದಿಶ್ಯ ಮತ್ತು ಆದರ್ಶಗಳೇನೇ ಇದ್ದರೂ ಕಲೆಗಾಗಿ ಕಲೆ ಎಂಬ ಸತ್ಯ ಅವರಿಗೆ ಹೊಸದು" ಹೀಗಾಗಿ ಹೊಸ ಕಲೆಯ ಬಗ್ಗೆ ಅಷ್ಟೊಂದು ಆಸಕ್ತಿಯನ್ನು ಅವರು ಹೊಂದಿರಲಿಲ್ಲ. ಅದು ಕಲಾವಿದನೊಬ್ಬನ ವೈಯಕ್ತಿಕ ಸ್ವಾತಂತ್ರ್ಯದ ವಿಚಾರವು ಆಗಿದೆ.

ಡಿ.ವಿ. ಹಾಲಭಾವಿಯವರು ಒಬ್ಬ ಕಲಾವಿದರಾಗಿ ತಮ್ಮ ಸಮಕಾಲೀನ ಕಲೆಯನ್ನು ಬದುಕಿಸಿಕೊಂಡು ಮುಂದುವರಿಸಿಕೊಂಡು ಬಂದಂಥರಲ್ಲಿ ಪ್ರಮುಖರು. ಕಲೆಗಳಲ್ಲಿ ಸಮಕಾಲೀನತೆಯ ಪ್ರಸ್ತುತತೆ ಅಗತ್ಯವಾಗಿ ಇರಲೇಬೇಕಾದಂಥ ಒಂದು ಮೌಲ್ಯ. "ಒಬ್ಬ ಕಲಾವಿದ ತನ್ನ ಕಾಲದ ವಿಶಿಷ್ಟ ಜೀವಧ್ವನಿಗೆ ಸವಾಲುಗಳಿಗೆ ತನ್ನನ್ನು ಸಮ್ಮುಖವಾಗಿಸಿಕೊಂಡು ಅಭಿವ್ಯಕ್ತಿಸುವ ಮೂಲಕ ಆ ಕಾಲ ಕುರಿತ ಅವನ ಧೋರಣೆ ಅಥವಾ ನಿಲುವು ದಾಖಲಿಸುವ ಸಾಧ್ಯತೆಗಳಿವೆ. ಇಂಥ ಕೃತಿಯ ಸಮಕಾಲೀನ ದಾಖಲೆಯಾಗಿ ಹೆಚ್ಚು ಮಹತ್ವ ಪಡೆಯುತ್ತದೆ"[೧೫] ಹಾಲಭಾವಿಯವರ ಕಲಾಕೃತಿ ರಚನೆಯ ಧೋರಣೆ ನಿಲುವುಗಳನ್ನು ಅವರ ಚಿತ್ರಗಳ ಮುಖಾಂತರ ತಿಳಿದುಕೊಳ್ಳಬಹುದು.

---
೧೪. ಎಂ.ಟಿ.ವಿ.ಆಚಾರ್ಯ, ಕಲೆ ಮತ್ತು ನಾನು, ಪುಟ ೧೧೩

೧೫. ಅ.ಲ.ನರಸಿಂಹನ್, ಕರ್ನಾಟಕ ಭಿತ್ತಿ ಚಿತ್ರ ಪರಂಪರೆ, ಪುಟ ૩૯

ಹಾಲಭಾವಿಯವರಿಗೆ ನೈಜಕಲಾ ಪರಂಪರೆಯ ಕಲಾವಿದರೆನ್ನುವ ಅಪವಾದವಿದೆ. ಆದರೆ ಪರಂಪರೆ ಇಲ್ಲದೆ ಯಾವುದನ್ನು ಅರಿತುಕೊಳ್ಳಲು ಸಾಧ್ಯವಿಲ್ಲ. ವಚನಕಾರರಾದ ಅಲ್ಲಮಪ್ರಭುಗಳು ಹೇಳುವಂತೆ "ಹಿಂದಿನ ಹೆಜ್ಜೆಯನರಿತಲ್ಲದೆ ನಿಂದ ಹೆಜ್ಜೆಯನರಿಬಾರದು"[೧೬] ಅಂದರೆ ವರ್ತಮಾನ ಚೆನ್ನಾಗಿ ಅರಿಯಬೇಕಾದರೆ ಪರಂಪರೆಯನ್ನು ಚೆನ್ನಾಗಿ ಅರಿತಿರಬೇಕಾಗುತ್ತದೆ ಎನ್ನುವ ಮಾತು ಎಲ್ಲಾ ಕ್ಷೇತ್ರಗಳಿಗೂ ಅನ್ವಯಿಸುತ್ತದೆ. "ಈ ನೈಜ ಕಲಾ ಸ್ವರೂಪಗಳ ಪ್ರಪಂಚದ ಇತಿಹಾಸವನ್ನು ಸಮರ್ಥವಾಗಿ ನಿರೂಪಿಸುವೆ. ಈ ಕಲಾಭಂಡರವಿಲ್ಲದೆ ಅಂದಿಗೂ ನವ್ಯ (ಅಮೂರ್ತ, ವಿರೂಪತೆಯ, ತಿರುಚಿದ ಅನ್ನುವ ಭಾವನೆಯಿಂದ ಕೂಡಿದ್ದು ) ಶೈಲಿಯೇ ಇದ್ದಿದ್ದರೆ ನಾವು ಇತಿಹಾಸದ ಸತ್ಯ ಚಿತ್ರವನ್ನು ಗುರುತಿಸಲು ಸಾಧ್ಯವಾಗುತ್ತಿತ್ತೇ"[೧೭] ಎನ್ನುವ ಎಂ.ಟಿ.ವಿ.ಆಚಾರ್ಯರ ಮಾತು ಸತ್ಯವಾಗಿದೆ.

ಯಾಕೆಂದರೆ ನೋಡುಗನು ಕಲಾಕೃತಿಯಲ್ಲಿ ತನ್ನ ಅನುಭವಕ್ಕೆ ಬಂದ ವಸ್ತುಗಳನ್ನು ಹುಡುಕುವುದು ಸಹಜ. ಅದಕ್ಕಾಗಿ ಕ್ರಿ.ಶ. ೭ನೇ ಶತಮಾನದವರೆಗೆ ರೂಪಿಸಲ್ಪಟ್ಟ ಅಜಂತೆಯ ಚಿತ್ರಕಲಾ ವೈಭವವನ್ನು ಕಂಡು ಹೆಚ್.ಕಸಿನ್ನರು ಈ ಬಗ್ಗೆ ಬರೆಯುತ್ತಾ "ಸಂಸ್ಕೃತಿಯ ಹಲವು ಉನ್ನತ ಮಟ್ಟದವರ ಸ್ವತ್ತಲ್ಲ. ಅದು ಅಪಾರ ಜನತೆಯ ಸ್ವತ್ತಾಗಬೇಕು. ಮಾನವನ ವಿನಾಶಕಾರಕ ದುರ್ಗುಣಗಳನ್ನು ನಿಯತ್ರಿಸಿ ಕ್ರಿಯಾತ್ಮಕತೆಯಿಂದ ಮಾನವರನ್ನು ಉನ್ನತಿಗೇರಿಸುವಂತಹ ಚೈತನ್ಯವೇ ಕಲೆ, ಸಂಸ್ಕೃತಿಗಳ ಹಿರಿಮೆ"[೧೮] ಎಂದಿರುವದು ಸರ್ವ ಕಾಲಕ್ಕೂ ಮನನೀಯವಾದುದೆಂದರೆ ತಪ್ಪಲ್ಲ. "ನೋಡುಗ ರಸಿಕ ಅಥವಾ ಸಹೃದಯ ಯಾರೇ ಆಗಲಿ ಆತನಲ್ಲಿ ರಸಾಯನಭೂತಿಯಾಗುತ್ತದೆ, ಆನಂದ ಉಂಟಾಗುತ್ತದೆ. ಹಾಗೆ ಕಲಾವಿದನನ್ನು ತಲುಪಲಾರದವರಿಗೆ ನಿರಾಶೆಯಾಗುತ್ತದೆ. ಈ ಮಾತು ಸಂಪ್ರದಾಯ ಹಾಗೂ ನವ್ಯ ಎರಡಕ್ಕೂ ಅನ್ವಯಿಸುತ್ತದೆ. ಸಂಪ್ರದಾಯದಲ್ಲಿ ಸಾದೃಶ್ಯದ ಅಂಶ ಹೆಚ್ಚಿರಬಹುದು"[೧೯] ಹೀಗಿರುವದರಿಂದಲೆ ಈ ಕಲೆಯ ಜನರ ರಸಾನಂದಕ್ಕೆ ಹತ್ತಿರವಾಗುತ್ತದೆ. ಅಂತೆಯೇ ಹಾಲಭಾವಿಯವರು ನೈಜ ಕಲಾ ಸಂಪ್ರದಾಯವನ್ನು ಬೆಳೆಸಿಕೊಂಡು ಬಂದರು. "ತಾನು ಬೆಳೆದ-ನಡೆದ, ಚಿಂತಿಸಿದ, ನೋವು ನಲಿವುಗಳನ್ನು ಅನುಭವಿಸಿದ ಕಲಾವಿದ ತನ್ನ ಕೈಯಲ್ಲಿ ಆ ಕಾಲದ ಸಂದರ್ಭಗಳು ಯಾವ ಸೃಷ್ಟಿಮಾಧ್ಯಮಗಳನ್ನು ಕೊಟ್ಟವೋ ಅವುಗಳನ್ನು ದುಡಿಸಿಕೊಂಡು, ಕಾಲ ಕಾಲಕ್ಕೆ ಹಲವು ಉದ್ದೇಶಗಳಿಗಾಗಿ ತನ್ನ ಅಭಿವ್ಯಕ್ತಿಯ ತೀವ್ರತೆಯನ್ನು ಬಳಸಿಕೊಂಡು" ಎನ್ನವಂತೆ ಡಿ.ವಿ.ಹಾಲಭಾವಿಯವರು ತಮ್ಮ ಕಾಲದಲ್ಲಿಯ ಸೃಷ್ಟಿ ಮಾಧ್ಯಮಗಳನ್ನೇ ದುಡಿಸಿಕೊಂಡು ಮುಂದೆ ಬಂದವರು. ಸಮಾಜದಲ್ಲಿ ಕಲೆ ಬೇಕು. ಕಲೆ ಒಂದು ಕಾಲದ, ಒಂದು ವ್ಯಕ್ತಿತ್ವದ ವಿಚಾರದ ಪ್ರವಾಹ ಅನ್ನುವಂತಹ ತಿಳಿವಳಿಕೆಯನ್ನು ಪ್ರಮುಖವಾಗಿ ಉಳಿಸಿಕೊಟ್ಟವರು ಡಿ.ವಿ.ಹಾಲಭಾವಿಯವರು ಎಂದು ಹೇಳುವಲ್ಲಿ ಸತ್ಯವಿದೆ.

ಕಲಾಕೃತಿಯು ಕಲಾವಿದನ ಸಮಗ್ರ ಪ್ರತಿಬಿಂಬ, ಒಂದು ಚಿತ್ರವೆಂದರೆ ಅತನ ಆತ್ಮ ದೃಷ್ಟಿಗೆ ಬೋಧನೆಯಾದ ಒಂದು ದೃಶ್ಯ ಹೇಗೆ ಕಲಾಕೃತಿಯು ಕಲಾವಿದನ ಸಮಗ್ರ ಜೀವನದ ಪ್ರತಿಬಿಂಬವೋ ಹಾಗೆಯೇ ದೃಶ್ಯ. ಹೀಗೆ ಕಲಾವಿದನು ಸಮಗ್ರ ಜನಾಂಗದ ಪ್ರತಿಬಿಂಬ. ಸಮಾಜದ ಅಂತಃಚಕ್ಷುವೇ ಕಲಾವಿದನೆಂದರೆ ತಪ್ಪಲ್ಲ"[೨೦] ಆದ್ದರಿಂದ ಆಗಿನ ಸಮಾಜ ಯಾವುದನ್ನು ಒಪ್ಪಿಕೊಳ್ಳುತ್ತಿತ್ತೋ ಅದನ್ನು ಕಲಾವಿದರು ಚಿತ್ರಿಸಿದರು. ಮತ್ತು ಅದರ ಬಗ್ಗೆ ಅವರಿಗೆ ಸಮಾಧಾನ, ತೃಪ್ತಿಯು ಇತ್ತು ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಸಂವೇದನಾಶೀಲ ಕಲಾವಿದನೊಬ್ಬನ ಯಾವುದೇ ಅನುಭವಕ್ಕೆ ಅವನದೇ ಆದ ಭಾವನಾತ್ಮಕ ಪ್ರತಿಕ್ರಿಯೆ, ಅಂತರಂಗದ ಸಾಮರ್ಥ್ಯ ಭಾವನಾತ್ಮಕ ಪ್ರಜ್ಞೆ ಹಾಗೆಯೇ ವೈಯಕ್ತಿಕ ಅಭಿರುಚಿಯ ಅಡಿಪಾಯದ ಮೇಲೆ ನಿಂತಿರುವಂಥದ್ದು.[೨೧] ಅಂತೆಯೇ ಹಾಲಭಾವಿಯವರು ತಮ್ಮ ಕಲಾಕೃತಿಗಳ ವಸ್ತು ವಿಷಯಗಳಿಗೆ ಅನುಸಾರವಾಗಿ

---

೧೬. ಬಿ.ಕೆ.ರಾಮಕೃಷ್ಣ ರಾವ್, ಸೌಂದರ್ಯ ಮತ್ತು ಕಲೆ, ಪುಟ ೧೧೭

೧೭. ಕೆ.ವಿ.ಸುಬ್ರಮಣ್ಯಂ, ಕಲಾ ಸಂವೇದನೆಯ ಒಳನೋಟಗಳು, ಪುಟ ೩೬

೧೮. ಆರ್.ಸಿ.ಹಿರೇಮಠ, ಬಸವಣ್ಣನವರ ವಚನಗಳು, ಪುಟ ೯೪

೧೯. ಎಂ.ಟಿ.ವಿ.ಆಚಾರ್ಯ, ಕಲೆ ಮತ್ತು ನಾನು, ಪುಟ ೧೧೭

೨೦. ಪಿ.ಆರ್.ತಿಪ್ಪೇಸ್ವಾಮಿ, ಕಲಾವಿದನ ನೆನಪುಗಳು, ಪುಟ೨೦

೨೧. ಎಂ.ಟಿ.ವಿ.ಆಚಾರ್ಯ, ಕಲೆ ಮತ್ತು ನಾನು, ಪುಟ೧೧೮

ನೈಜ ಶೈಲಿಯನ್ನು ಅಳವಡಿಸಿಕೊಂಡು ತಮ್ಮ ಸ್ವಂತಿಕೆಯ ಭಾವನಾ ವಿಶೇಷಗಳನ್ನು ನಿರೂಪಿಸಿದವರು. ಬಸವಣ್ಣನವರು ಹೇಳುವಂತೆ "ಆನು ಒಲಿದಂತೆ ಹಾಡುವೆ"[೨೨] ಎನ್ನುವಂತೆ ಹಾಲಭಾವಿಯವರು ತಮ್ಮದೇ ಆದ ಮಾರ್ಗವನ್ನು ಸೃಷ್ಟಿಸಿ ಚಿತ್ರ ಕಲಾ ಪ್ರಪಂಚದಲ್ಲಿ ನಡೆದುಬಂದವರು.

ನೈಜ ಶೈಲಿಯ ಬಗ್ಗೆ ಎಂ. ಟಿ. ವಿ. ಆಚಾರ್ಯ ಅವರು ಹೇಳುವಂತೆ "ನಮ್ಮಲ್ಲಿ ನೈಜ ಶೈಲಿಯ ಕಲೆಯು ಹಿಂದೆಯೂ ಇತ್ತು ಇಂದಿಗೂ ಮುಂದೆಯೂ ಇರುವ ಹಕ್ಕು ಅದಕ್ಕಿದೆ. ಇಂದು ಕೆಲವರು ಕಾರಸ್ಥಾನದಿಂದ ಜನಮನದಿಂದ ಅದನ್ನು ಎಂದೆಂದಿಗೂ ಅಳಿಸಲು ಸಾಧ್ಯವಿಲ್ಲ. ಯಾವುದೇ ಕಾಲದಲ್ಲಿ, ಯಾವುದೇ ದೇಶದಲ್ಲಿ ಶೈಲಿ ಪ್ರಭಾವಗಳನ್ನು ಅನುಸರಿಸಿ ಕಲಾವಿದನ ಸ್ವಂತಿಕೆ ಭಾವನಾ ವಿಶೇಷಗಳನ್ನು ನಿರೂಪಿಸಿದ ಕಲಾರೂಪ ಶೈಲಿಗಳೆಲ್ಲವೂ ಎಂದೆಂದಿಗೂ ಕಲೆಯಾಗಿಯೇ ಉಳಿದು ವಿಶ್ವದ ಸರ್ವಕಾಳಿಕ ಸಾಂಸ್ಕೃತಿಕ ನಿಧಿಯಾಗುತ್ತವೆ. ಎಂಬುದು ಸತ್ಯ"[೨೩] ಎನ್ನುತ್ತಾರೆ. ಇಂದಿಗೂ ಪಾಶ್ಚಿಮಾತ್ಯ ಕಲಾ ಸಂಗ್ರಹಾಲಯಗಳು ರೆಂಬ್ರಾಂಟ್, ಟಿಟನ್, ಮೈಕಲ್ ಎಂಜೆಲೋ ಮುಂತಾದವರ ಕಲಾಕೃತಿಗಳನ್ನು ಅಪೂರ್ವ ನಿಧಿಯಂತೆ ರಕ್ಷಿಸಿ ಅಸಂಖ್ಯಾತ ಜನಸಾಗರಕ್ಕೆ ಪ್ರದರ್ಶಿಸಿ ಮನತಣಿಯುವಂತೆ ಮಾಡಿದ್ದಾರೆ. ನಮ್ಮಲ್ಲಿಯೂ ಇಂತಹ ಸಂಪ್ರದಾಯ ಬೆಳೆಯದಿರುವುದು ದುರದೃಷ್ಟಕರವಾಗಿದೆ.

ಪ್ರಪಂಚದ ಅತ್ಯುನ್ನತ ಕಲಾವಿದರಲ್ಲೊಬ್ಬನಾದ ಪಿಕಾಸೋ ಇದನ್ನೇ ಹೇಳುತ್ತಾನೆ. ಲಂಡನ್ನಿನ ದಿ ಲಿವ್ವಿಂಗ್ ಮ್ಯೂಜಿಯಂ ಎಂಬ ಮಾಸಿಕದಲ್ಲಿ ಪ್ರಕಟವಾದ ಅವನ ಬಿಚ್ಚು ನುಡಿಗಳಿವು "ಜನರು ದುಃಖ ಪರಿಹಾರವನ್ನಾಗಲಿ, ಚೈತನ್ಯವನ್ನಾಗಲೀ ಈಚೀನ ಕಲೆಯಿಂದ ಹೊಂದಲಾರರು. ಆದರೆ ಇಂದಿನ ಸುಸಂಸ್ಕೃತ ಶ್ರೀಮಂತ ಹಾಗೂ ಸೋಮಾರಿ ಜನ ಅಸಾಧಾರಣವೂ ಸ್ವಯಂ ಕಲ್ಪಿತವೂ ಮಿತಿಮಿರಿದ ಅಭ್ಯಾಸದ ಹೊಸದಾದ ಕಲೆಯನ್ನು ಬಯಸುವವರು. ಲೀಲಾಜಾಲವಾಗಿ ಎಳೆದ ಆಕಾರದ ರೇಖೆಗಳು ಅರ್ಥವಿಲ್ಲದ ಸಮಸ್ಯಾತ್ಮಕ ಕಲಾಕೃತಿಗಳು ನನ್ನನ್ನು ನಾನೇ ವಿನೋದಗೊಳಿಸಲಿಕ್ಕೆ ಹೂಡಿದ ಆಟಗಳು ಅದರಿಂದಾಗಿ ನಾನು ಶೀಘ್ರವಾಗಿ ಪ್ರಸಿದ್ದನಾದೆ.

ಲಾಭ, ಹಣ ಅದೃಷ್ಟ ಎಲ್ಲವೂ ಕೂಡಿಕೊಂಡು ಕಲಾಜಗತ್ತಿನಲ್ಲಿ ಉನ್ನತ ಸ್ಥಾನಗಳಿಸಿದೆ"[೨೪] ಎಂದು ಹೇಳುತ್ತ ಆದರೆ ನಾನು ಏಕಾಂತದಲ್ಲಿದ್ದಾಗ ಮಾತ್ರ ಹಿಂದಿನ ಶ್ರೇಷ್ಠ ಕಲಾವಿದರಾದ ಗಿಯೇಟೋ, ಟಿಟಾನ್, ರೆಂಬ್ರಾಂಟ್, ಮುಂತಾದವರ ಸಾಧನೆ ನೆನಸಿದಲ್ಲಿ ಮತ್ತು ಅವರೋಡನೆ ಹೋಲಿಕೆಯ ದೃಷ್ಟಿಯಿಂದ ನಾನು ಕಲಾವಿದನೆಂದು ಭಾವಿಸಿಕೊಳ್ಳಲು ಧೈರ್ಯ ಮಾಡಲಾರೆ. ನಾನೊಬ್ಬ ಕೇವಲ ನನ್ನ ಕಾಲವರಿತು ನಡೆದು ರಂಜಿಸಿದ ವ್ಯಕ್ತಿ ಮಾತ್ರ ಎಂದು ಹೇಳಿ ನೈಜ ಕಲೆಯ ಸತ್ವವನ್ನು ವಿಶ್ಲೇಷಿಸಿದ್ದಾರೆ.

ಕಲಾ ಇತಿಹಾಸದ ಉದ್ದಕ್ಕೂ ಸೃಷ್ಟಿಯಾದ ಹಲವಾರು ಕಲಾಕೃತಿಗಳು ಮುಖ್ಯವಾಗಿ ತಮ್ಮ ಸಮಕಾಲೀನತೆಯ ದಟ್ಟ ಹೊಳಪನ್ನು ಹೊದ್ದಕಾರಣದಿಂದಲೇ ಇಂದಿಗೂ ನಮ್ಮನ್ನು ಗಾಢವಾಗಿ ಸ್ಪಂದಿಸುವ ಸಾಮರ್ಥ್ಯವನ್ನು ಹೊಂದಿವೆ. ಆಯಾ ಕಾಲದ ವಿವಿಧ ವಸ್ತು, ಆಶಯ ನಿರ್ವಹಣೆಗಳನ್ನು ಸಾಮಾಜಿಕ ಸ್ಥಿತಿಗತಿಗಳನ್ನು ನಿರ್ಧರಿಸುತ್ತವೆ. ಅಂಥ ಹೊಳಪನ್ನು ಹಾಲಭಾವಿಯವರು ಚಿತ್ರಗಳಲ್ಲಿ ಕಾಣುತ್ತೇವೆ. ಇದಕ್ಕೆ ಮೂಲ ಪ್ರೇರಣೆ ಹಾಲಭಾವಿಯವರು ಕಲಾಚೇತನಕ್ಕೆ ತಕ್ಕ ನೆಲ, ತಕ್ಕ ಪರಿಸರ ಮತ್ತು ವಾತಾವರಣ, ಉತ್ತಮ ಪರಂಪರೆಯ ಸಂಸ್ಕಾರ, ಕಲಾಗುರುಗಳ ಜ್ಞಾನದ ಬೆಳಕು ಇವುಗಳೆಲ್ಲ ದೊರಕಿದ್ದಕ್ಕೆ ಅವರ ಕಲಾ ಪ್ರತಿಭೆ ಫಲವತ್ತಾಗಿ ಬೆಳೆಯಲು ಕಾರಣವಾಯಿತು.

ಕಲಾವಿದನಾದವನು ಯಾವ ರೀತಿ ಇರಬೇಕು ಎಣಬ ಭಾವನೆ ನಮ್ಮ ಪ್ರಾಚೀನ ಪರಂಪರೆಯಲ್ಲಿ ಹೇಗೆ ಇತ್ತೋ ಅಂತಹ ಗುಣಗಳನ್ನು ನಾವು ಹಾಲಭಾವಿಯವರಲ್ಲಿ ಕಾಣುತ್ತೇವೆ. ಉದಾಹರಣೆಗೆ "ಚಿತ್ರಕಲಾವಿದ ಒಳ್ಳೆಯ ಮನುಷ್ಯನಾಗಿರಬೇಕು, ಸೋಮಾರಿಯಾಗಿರುಬಾರದು ಕೋಪಗೊಳ್ಳಬಾರದು ಶುದ್ಧ ಜೀವನ ನಡೆಸಲು

---

೨೨. ಕೆ.ವಿ.ಸುಬ್ರಮಣ್ಯಂ, ಕಲಾ ಸಂವೇದನೆಯ ಒಳನೋಟಗಳು, ಪುಟ ೨೬
೨೩. ಅನ್ನದಾನಿ ಹಿರೇಮಠ, ಎಂ.ಎ.ಚಟ್ಟಿ, ಪುಟ ೧೯
೨೪. ಅ.ಲ.ನರಸಿಂಹನ್, ಕರ್ನಾಟಕ ಭಿತ್ತಿ ಚಿತ್ರ ಪರಂಪರೆ, ಪುಟ ೧೭೧

ಅಧ್ಯಯನ ಶೀಲನಾದ ಆತ್ಮ ಸಂಯಮದ, ಭಕ್ತ ಮನೋಭಾವನ, ಉದಾರ ಹೃದಯದ, ದ್ವೇಷಾಸೂಯೆರಹಿತವಾದ ವ್ಯಕ್ತಿಯಾಗಿರಬೇಕು. ಎಂದು ಶ್ರೀ ಮಹಾ ವಜ್ರಭೈರವ ತಂತ್ರಕೃತಿ ಹೇಳುತ್ತದೆ. ಈ ಎಲ್ಲ ಗುಣಗಳನ್ನು ಹಾಲಭಾವಿಯವರಲ್ಲಿ ನಾವು ಸಹಜವಾಗಿ ಗುರುತಿಸಬಹುದಾಗಿದೆ. ತಮ್ಮನ್ನು ಚಿತ್ರಕಲೆಗೇ ಅರ್ಪಿಸಿಕೊಂಡ ವ್ಯಕ್ತಿ ಹಾಲಭಾವಿಯವರು. ಚಿತ್ರಕಲೆಯೇ ಆತ್ಮವಾಗಿರುವ ಹಾಲಭಾವಿಯವರು ಅತ್ಯಂತ ಸಾತ್ವಿಕರು ಸರಳ ಸಜ್ಜನಿಕೆ ನಿರಾಡಂಬರಗಳು ಸಜೀವ ಮೂರ್ತಿ, ನೈಜಕಲಾ ಪರಂಪರೆಯ ಮೌಲ್ಯವನ್ನು ಬದುಕಿಸಿ ಉಳಿಸಿಕೊಂಡು ಬಂದು ನಮ್ಮ ಚಿತ್ರಕಲಾ ಜಗತ್ತಿಗೆ ಹೊಂದಿಕೊಂಡು ಇರುವುದು ಅವರ ಜೀವನದ ವೈಶಿಷ್ಟವಾಗಿದೆ. ತಪಸ್ಸಿನೋಪಾದಿಯಲ್ಲಿ ಬೆಳೆದು ಬಂದ ಕಲಾ ಜೀವನ ತರುಣ ಕಲಾವಿದರಿಗೆ ಮರ್ಗದರ್ಶಿ ಮತ್ತು ಸ್ಪೂರ್ತಿದಾಯಕವಾಗಿದೆ.

**ಹಾಲಭಾವಿಯವರು ಕಲಾಕೃತಿ ರಚಿಸಲು ಬಳಸಿದ ಕಲಾಸಾಮಗ್ರಿಗಳು**

ಇಲ್ಲಿಯವರೆಗೆ ಅವರ ಜಲವರ್ಣ, ತೈಲವರ್ಣ ಪೆನ್ಸಿಲ್ ಮಾಧ್ಯಮದಲ್ಲಿ ಅವರದೇ ಆದ ಶೈಲಿ–ವಿಶಿಷ್ಟತೆ ವಿನ್ಯಾಸ, ವರ್ಣಗಳ ಬಳಕೆ, ಲಯಬದ್ಧತೆ, ಮುಂತಾದ ವಿಷಯಗಳನ್ನು ಆವರ ಕಲಾಕೃತಿಗಳ ಮೂಲಕ ತಿಳಿದುಕೊಳ್ಳಲಾಯಿತು. ಹಗೇಯೇ ಈಗ ಅವರು ಅಂತಹ ಪರಿಣಾಮ ಬೀರುವಂತ ಚಿತ್ರಗಳಿಗಾಗಿ ಬಳಸಿರುವ ಸಾಧನೆಗಳ ಬಗ್ಗೆಯೂ ತಿಳಿದುಕೊಳ್ಳುವುದು ಅವಶ್ಯವಾಗಿದೆ.

**ಜಲವರ್ಣಕ್ಕಾಗಿ ಬಳಸಿದ ಕಾಗದ ಹಾಗೂ ರಟ್ಟುಗಳು**

ಹಾಲಭಾವಿಯವರು ಪಾರದರ್ಶಕ ಟ್ಯೂಬ ಜಲವರ್ಣ ಹಾಗೂ ಅಪಾರದರ್ಶಿಕೆಯಾದ ಪೋಸ್ಟರ್ ಜಲವರ್ಣಗಳನ್ನು ಬಳಸಿ ಚಿತ್ರ ರಚಿಸಿದ್ದಾರೆ. ಇಂತಹ ವರ್ಣಗಳನ್ನು ಉಪಯೋಗಿಸುವಾಗ ಅದಕ್ಕೆ ತಕ್ಕಂತಹ ಕಾಗದಗಳನ್ನು ಬಳಸಿದ್ದಾರೆ. ಪಾರದರ್ಶಕ ಜಲವರ್ಣ ನಿಸರ್ಗಚಿತ್ರ ರಚಿಸುವಲ್ಲಿ ಅದಕ್ಕಾಗಿಯೇ ವಿಶೇಷವಾಗಿ ತಯಾರಿಸಿದ ಕೈ ಕಾಗದ (Hand made paper) ವನ್ನು ಈ ಕಾಗದವು ಸಾಕಷ್ಟು ದೃಢತೆಯನ್ನು ಹೊಂದಿರುವಷ್ಟೇ ಅಲ್ಲ ಕಾಗದಗಳಲ್ಲಿ ಅನೇಕ ಸಾರಿ ಜಲವರ್ಣವನ್ನು ಲೇಪಿಸಿದರೂ ಕೂಡಾ ಶಿಥಲಗೊಳ್ಳುವುದಿಲ್ಲ ಈ ಬಗೆಯ ಕಾಗದಗಳಲ್ಲಿ ಜಲದೊಂದಿಗೆ ವರ್ಣಗಳೂ ಆಳ ಪದರಗಳಿಗೆ ಇಳಿದು ಸ್ಥಿರವಾಗಿ ನಿಲ್ಲುತ್ತವೆ. ಅಂತೆಯೇ ಎಷ್ಟೋ ವರ್ಷಗಳಾದರೂ ಅವು ತಾಜಾತನವನ್ನು ಹೊಂದಿವೆ. ಇನ್ನೂ ಅಪಾರದರ್ಶಕಗಳಾದ ಪೋಸ್ಟರ ವರ್ಣಗಳನ್ನು ಬಳಸುವಾಗ ಕೆಲವು ಚಿತ್ರಗಳಿಗೆ ಬಿಳಿಯ ಡ್ರಾಯಿಂಗ ಕಾಗದವನ್ನು ಬಳಸಿದ್ದಾರೆ. ಇನ್ನೂ ಕೆಲವು ಚಿತ್ರಗಳಿಗೆ ಬಣ್ಣದ ಪೋಸ್ಟರ ಕಾಗದದ ಬಳಸಿ ಆ ಬಣ್ಣವನ್ನೇ ಒಂದು ಛಾಯೆಯಾಗಿ ಬಳಸಿಕೊಂಡಿದ್ದಾರೆ. ಇನ್ನು ಕೆಲವು ಚಿತ್ರಗಳಿಗೆ ರಟ್ಟುಗಳನ್ನು (ತೆಳ್ಳನೆಯ ಪ್ಲಾಯವುಡ್) ಬಳಸಿದ್ದಾರೆ. ಹೀಗೆ ಒಟ್ಟಾರೆಯಾಗಿ ತಾವು ಚಿತ್ರಿಸಿದ ಚಿತ್ರದ ಪರಿಣಾಮ (Effect) ಅದರಲ್ಲಿ ಮೂಡಿ ಬಂದಿದೆ.

**ತೈಲವರ್ಣ ಚಿತ್ರಗಳಿಗಾಗಿ ಉಪಯೋಗಿಸಿದ ಕಾಗದ ಹಾಗೂ ರಟ್ಟರಿವೆ (Canvas)ಗಳು**

ತೈಲವರ್ಣ ಚಿತ್ರಗಳಿಗಾಗಿಯೇ ಕಾಗದವನ್ನು ತಯಾರಿಸುತ್ತಾರೆ. (Oil paper) ಈ ಕಾಗದಗಳು ಒಂದು ರೀತಿಯ ಒರಟು ಮೇಲ್ಮೈನ್ನು ಹೊಂದಿದ್ದು ವರ್ಣಗಳು ಆಳಕ್ಕೆ ಇಳಿದು ಬಿಗಿಯಾಗಿ ಕಾಗದವನ್ನು ಹಿಡಿದುಕೊಳ್ಳುತ್ತವೆ ಅಲ್ಲದೇ ಈ ಕಾಗದಗಳು ತೈಲವನ್ನು ಹಿರಿಕೊಳ್ಳದೆ ಆ ಹೊಳಪನ್ನ ಹಾಗೆ ಇರಲು ಸಹಾಯ ಮಾಡುತ್ತದೆ. ಕೆಲವು ಚಿತ್ರಗಳಿಗೆ ಇಂತಹ ಕಾಗದ ಉಪಯೋಗಿಸಿದ್ದಾರೆ. ಹೆಚ್ಚಾಗಿ ತೈಲಚಿತ್ರಗಳನ್ನು ಕ್ಯಾನ್ ವಾಸ್ ಮೇಲೆಯೇ ಚಿತ್ರಿಸಿದ್ದಾರೆ. ಈ ಕ್ಯಾನವಾಸಗಳು ವಿವಿಧ ಅಳತೆಗಳಲ್ಲಿ ಸಿದ್ದವಾಗಿಯೇ ಸಿಗುತ್ತವೆ. ಕೆಲವು ಸಾರೆ ಕಲಾವಿದರೇ ಅದನ್ನು ತಯಾರಿಸಿಕೊಳ್ಳಬಹುದು. ಇನ್ನೂ ಕೆಲವು ಸಾರಿ ಹಾರ್ಡ ಬೋರ್ಡ ಮೇಲೆ ನೇರವಾಗಿ ಉಳಿದಂಥ ವರ್ಣಗಳನ್ನು ಲೇಪಿಸಿಯೂ ಚಿತ್ರಗಳನ್ನು ರಚಿಸಿದ್ದಾರೆ.

## ವರ್ಣ ಹಾಗೂ ಕುಂಚಗಳು

ಜಲವರ್ಣ, ತೈಲವರ್ಣ ಪೋಸ್ಟರ್, ಜಲವರ್ಣಗಳನ್ನು ದೇಸಿಯ ಉತ್ಪಾದನೆಗಳನ್ನು ಬಳಸಿದ್ದರೂ ಅದರಲ್ಲಿ ಹೆಚ್ಚಾಗಿ ಕಂಪನಿಯ ಆರ್ಟಿಸ್ಟ ವರ್ಣಗಳನ್ನೇ ಬಳಸಿರುವುದು ಅವರ ಸ್ಟುಡಿಯೋ ಗಮನಿಸಿದಾಗ ಕಂಡುಬಂದ ಅಂಶಗಳು ಅಲ್ಲದೇ ಅವರು ತಮ್ಮ ಮಿತ್ರರು ಯಾರೇ ವಿದೇಶಕ್ಕೆ ಹೋದರು. ಅಲ್ಲಲ್ಲಿ ವರ್ಣಗಳನ್ನು ಕುಂಚಗಳನ್ನು ತರಿಸಿ ಅವುಗಳನ್ನು ತಮ್ಮ ಚಿತ್ರಗಳಲ್ಲಿ ದುಡಿಸಿಕೊಂಡಿದ್ದಾರೆ. ನಾನಾ ರೀತಿಯ ಕುಂಚಗಳನ್ನು ಕೂಡಿಸಿಡುವ ಹವ್ಯಾಸ ಶ್ರೀ ಹಾಲಭಾವಿಯವರದಾಗಿತ್ತಲ್ಲದೆ ಅವುಗಳ ಬಳಕೆಯನ್ನು ಕೌಶಲ್ಯದಿಂದಾಗಿ ಈ ವರ್ಣಗಳಿಂದಾಗಿ ಹಾಗೂ ಅವುಗಳು ಹೊಚ್ಚ ಹೊಸದರಂತೆ ಇವೆ. ಅವರು ಬಣ್ಣದ ಚೂರಿ (color knife) ಯನ್ನು ಬಳಸಲೇ ಇಲ್ಲ ಏನಿದ್ದರೂ ಕುಂಚಗಳ ಮುಖಾಂತರವೆ, ಚಿತ್ರಗಳ ಒಟ್ಟಾರೆ ಪರಿಣಾಮವನ್ನು ಸೆರೆಹಿಡಿದಿದ್ದಾರೆ.

ರೇಖಾ ಚಿತ್ರಗಳನ್ನಂತೂ ಪೆನ್ಸಿಲ ಇಂಕ (ಮಸಿ) ಚಾರ್ಕೋಲನಿಂದ ಚಿತ್ರಿಸಿರುವುದನ್ನು ಕಾಣುತ್ತೇವೆ ಒಳ್ಳೆಯ ಪರಿಣಾಮಬೀರಲು ಪೆನ್ಸಿಲಗಳೇ ಒಳ್ಳೇ ಮಾಧ್ಯಮವೆಂದು ಅವರ ಅಭಿಪ್ರಾಯವಾಗಿತ್ತು. ಪೇಂಟಿಂಗ್‌ಗಿಂತ ಪೆನ್ಸಿಲ್ ಡ್ರಾಯಿಂಗ ಬಹಳ ಉತ್ತಮ, ಎಂದು ಅವರು ಹೇಳುತ್ತಿದ್ದರು ಕಾರಣ ಇದರಿಂದ ಸುಲಭವಾಗಿ ಛಾಯಾಂಕನವನ್ನು ರಚಿಸಿ ಚಿತ್ರದ ನೈಜ ಪರಿಣಾಮವನ್ನು ತತ್‌ಕ್ಷಣ ನೋಡಬಹುದೆಂದು ಅಲ್ಲದೇ ಇವು ವಹಳ ವರ್ಷಗಳವೆರೆಗೆ ಬಾಳಿಕೆ ಬರುವವು. ಚಾರ್ಕೋಲಿನಲ್ಲಿ ಈ ಪರಿಣಾಮ ಬಂದರು ಅವುಗಳನ್ನು ಕಾಯ್ದಿರಿಸುವುದು ಬಹಳ ಕಷ್ಟದ ಕೆಲಸ. ಅಂತೆಯೇ ಹಾಲಭಾವಿಯವರು ಅಂಕನೆ (sketch) ಗಳಿಗಾಗಿ ಪೆನ್ಸಿಲ್ಲನ್ನೇ ಹೆಚ್ಚು ಉಪಯೋಗಿಸಿದ್ದಾರೆ.

ಚಿತ್ರಗಳ ಮೇಲೆ ಮೊದ ಮೊದಲು ಡಿ. ವಿ. ಹಾಲಬಾವಿ ಎಂದು ಕನ್ನಡದಲ್ಲಿ ತಮ್ಮ ಹಸ್ತಾಕ್ಷರ ಬಳಸಿದರೆ ತದನಂತರದ ಚಿತ್ರಗಳಲ್ಲಿ ಇಂಗ್ಲೀಷನಲ್ಲಿ ಡಿ.ವಿ. ಹಾಲಭಾವಿ ಎಂದು ಹಸ್ತಾಕ್ಷರ ಬಳಸಿದ್ದಾರೆ. ಬಹುಶಃ ಹೊರ ರಾಜ್ಯಗಳಿಗೆ ಚಿತ್ರಗಳನ್ನು ಕಳಿಸಿಕೊಟ್ಟಾಗ ಅವರಿಗೆ ಕಲಾವಿದ ಯಾರು ಎಂಬ ಅಂಶ ತಿಳಿಯಬೇಕೆಂದು ಈ ರೀತಿ ಬರೆಯಲು ಪ್ರಾರಂಭಿಸಿರಬೇಕು ಇನ್ನೂ ಕೆಲವು ಚಿತ್ರಗಳಿಗೆ ರೇಖಾ ಅಂಕನೆ (sketch)ಗಳಿಗೆ ಹಸ್ತಾಕ್ಷರವನ್ನೇ ಹಾಕಿಲ್ಲ ಅವರ ವಿಶಿಷ್ಟವಾದ ಶೈಲಿಯ ಮೂಲಕವೇ ಅವನ್ನು ಗುರುತಿಸಬಹುದಾಗಿದೆ.

ಹಾಲಭಾವಿಯವರ ಕಲಾಕೃತಿಗಳು ನಮ್ಮ ನಾಡಿನ ಆಸ್ತಿ ಹೀಗಿರಲು ಅವುಗಳ ಸಂರಕ್ಷಣೆ ಬಹಳ ಮಹತ್ವವಾದದ್ದು. ಹಾಲಭಾವಿಯವರ ಕಲಾಕೃತಿಗಳು ಅವರ ಮನೆಯ ಮಂದಿಗಷ್ಟೇ ಸಂಬಂಧಿಸಿದ್ದವುಗಳಲ್ಲ ಅವು ಸಮಾಜಕ್ಕೂ ಸಂಬಂಧಿಸಿದವು. ಆದ್ದರಿಂದ ಅವುಗಳ ರಕ್ಷಣೆಯನ್ನು ಮಾಡುವಲ್ಲಿ ಸರ್ಕಾರ ಮುಂದೆ ಬರಬೇಕು. ಅಕಾಡೆಮಿಯಾಗಲಿ, ವಿಶ್ವವಿದ್ಯಾಲಯಗಳಾಗಲಿ, ಇನ್ನಿತರ ಸಂಘ, ಸಂಸ್ಥೆಗಳು, ಚಿತ್ರಕಲಾ ಶಾಲೆಗಳು ಮುಂದೆ ಬರಬೇಕು. ನನಗೆ ತಿಳಿದಂತೆ ಈಗಾಗಲೇ ಎಷ್ಟೋ ಚಿತ್ರಗಳು ಹುಳು ಹತ್ತಿ ಹಾಳಾಗಿ ಹೋಗಿವೆ. ಕೆಲವು ಧೂಳು ತಿಂದಿವೆ. ಮಳೆಯ ನೀರು ಮುಂತಾದವುಗಳಿಂದ ಮಾಸಿ ನಶಿಸಿ ಹೋಗುತ್ತಿವೆ. ಪಾಶ್ಚಾತ್ಯ ದೇಶಗಳಲ್ಲೂ ಸಹಿತ ಒಂದು ಕಾಲಕ್ಕೆ ಲಿಯೋನಾರ್ಡೋ–ಡಾ–ವಿಂಚಿ ರಚಿಸಿದ ಮೊನಾಲಿಸಾ ಕಲಾಕೃತಿ ತಿರಸ್ಕೃತವಾಗಿತ್ತು. ಆದರೆ ಈಗ ಅದನ್ನು ಕಾವಲು ಕಾಯಲು ಸೈನ್ಯವನ್ನೇ ಇಟ್ಟಿದ್ದಾರೆ. ಪಿಕೋಸೋನ ಅನೇಕ ಕೃತಿಗಳು ಇಂದು ಕೋಟಿ ರೂಪಾಯಿಗಳ ಮೌಲ್ಯವನ್ನು ಹೊಂದಿವೆ. ನಮ್ಮ ನಾಡಿನ ನಮ್ಮ ನೈಜಕಲಾ ಪರಂಪರೆಯ ಕಲೆಯನ್ನು ಉಳಿಸಿ ಬೆಳೆಸಿಕೊಂಡು ಬಂದ ನಮ್ಮ ಸಂದರ್ಭದ ಗಮನಾರ್ಹ ಕಲಾವಿದರಾದ ಹಾಲಭಾವಿಯವರ ಕಲಾಕೃತಿಗಳು ಅವರು ಇನ್ನೂ ಜೀವಂತ ಇರುವಾಗಲೇ ಹಾಳಾಗಿ ಹೋಗುತ್ತಿವೆ. ಇಂತಹ ಸ್ಥಿತಿ ಒದಗಿರುವುದು ವಿಷಾದನೀಯ ಸಂಗತಿಯಾಗಿದೆ. ಆದ್ದರಿಂದ ಈಗಲೇ ಅವುಗಳನ್ನು ಸಂರಕ್ಷಿಸುವಂತಹ ಕಾರ್ಯವನ್ನು ಕೈಗೊಳ್ಳಬೇಕು. ಇಲ್ಲವಾದರೇ ಇನ್ನು ಸ್ವಲ್ಪ ದಿನಗಳಲ್ಲಿ ಅವೂ ಕೂಡ ನಾಶವಾಗಿ ಹೋಗುವ ಸಂಭವವಿದೆ.

ಕರ್ನಾಟಕದ ಉತ್ತರ ಭಾಗಕ್ಕೆ ಕಲಾ ಪರಂಪರೆಯನ್ನು ಪರಿಚಯಿಸಿ, ಬೆಳೆಸಿದ ಕಲಾವಿದ ದಾನಪ್ಪ ವೀರಭದ್ರಪ್ಪ ಹಾಲಭಾವಿಯವರು ತಮ್ಮ ತಮ್ಮ ೯೦ನೇಯ ವಯಸ್ಸಿನಲ್ಲಿ ಎಲ್ಲ ಜೀವ ಸಂಕುಲಗಳಂತೆ ಪಂಚಭೂತಗಳಲ್ಲಿ ಒಂದಾದರು.

# ಡಿ.ವಿ.ಹಾಲಭಾವಿಯವರ ಕಲಾಸಾಹಿತ್ಯದ ವರ್ಗೀಕರಣ

**ಕಲಾಸಾಹಿತ್ಯ**

## I. ಹಾಲಭಾವಿಯವರು ರಚಿಸಿದ ಕಲಾಸಾಹಿತ್ಯ

೧. ಗ್ರಂಥಗಳು

ಅ. ಮೈ ಕಂಟೆಂಪರರಿ ಆರ್ಟಿಸ್ಟ್

ಬ. ನನ್ನ ಸಿಲೋನ್ ಪ್ರವಾಸ

ಕ. ಜಮ್ಮು ಕಾಶ್ಮೀರ ಪ್ರವಾಸ (ಅಪ್ರಕಟಿತ)

೨. ಕಲಾಪತ್ರಿಕೆಗಳು

ಅ. ಆರ್ಟ್ ಗಿಲ್ಡ್

ಬ. ಕಲಾಮಾರ್ಗ

೩. ಬಿಡಿಲೇಖನಗಳು

## II. ಹಾಲಭಾವಿಯವರ ಕುರಿತು ಬಂದ ಸಾಹಿತ್ಯ

೧. ಗ್ರಂಥಗಳು

ಅ. ಡಿ.ವಿ.ಹಾಲಭಾವಿ

ಬ. ವೀರಭದ್ರಪ್ಪ ಹಾಲಭಾವಿ

ಕ. ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು

೨. ಸ್ಮರಣ ಸಂಚಿಕೆಗಳು

ಅ. ಅರವತ್ತರ ಒಸಗೆ

ಬ. ಸುವರ್ಣ ಮಹೋತ್ಸವ ಸಂಚಿಕೆ

ಕ. ವಜ್ರಮಹೋತ್ಸವ ಸಂಚಿಕೆ, 'ಚಿತ್ರಾಕ್ಷಿ'

೩. ಬಿಡಿಲೇಖನಗಳು



## I. ಹಾಲಭಾವಿಯವರು ರಚಿಸಿದ ಕಲಾ ಸಾಹಿತ್ಯ

ಕಲೆ ಮತ್ತು ಸಾಹಿತ್ಯಗಳು ಮಾನವನ ಬದುಕಿನ ಸಾಧನೆಯ ಎರಡು ಉನ್ನತ ಶಿಖರಗಳು, ಕಲೆಯು ಜೀವ ವಿಕಾಸದಲ್ಲಿ ಮಾನವನೊಂದಿಗೆ ಇದ್ದು, ಅವನೊಂದಿಗೇ ಬೆಳೆದು ಬಂದ ಪ್ರಕೃತಿ ಮೂಲವಾದುದಾದರೆ. ಕಾಲಘಟ್ಟದಲ್ಲಿ ಅಂತರದಲ್ಲಿ ಬರುವ ಸಾಹಿತ್ಯವು ವಿಕಸಿತ ಮಾನವನ ಬುದ್ಧಿ ಜನ್ಯವಾದುದಾದರೆ. ಕಲೆ ಮತ್ತು ಸಾಹಿತ್ಯಗಳು ಮೂಲದಲ್ಲಿ ವಿಭಿನ್ನ ಕ್ಷೇತ್ರಗಳಾಗಿ ಕಂಡರೂ ಆಂತರ್ಯದಲ್ಲಿ ಅವು ವಿಭಿನ್ನವಾಗಿ ಭಾವಾಭಿವ್ಯಕ್ತಿಯ ಮಾಧ್ಯಮದ ನೆಲೆಗಳಾಗಿವೆ.

ಇತಿಹಾಸದಂತೆಯೆ ಆದಿಮಾನವನ ಬದುಕು, ಹೋರಾಟ, ಉಳಿಯುವಿಕೆಯ ಸಂಕಲ್ಪಗಳ ಅಭಿವ್ಯಕ್ತಿಗೊಂದು ಮಾಧ್ಯಮವಾಗಿ ಬೆಳೆದು ಬಂದದ್ದು ಚಿತ್ರಕಲೆಯಾದರೆ ಇತಿಹಾಸದೊಳಗಡೆಯಿಂದ ಕಾಲಘಟ್ಟದಲ್ಲಿ ದೇಶಿಯ ಬದುಕಿನಲ್ಲಿ ಟಂಕಿಸಿದ ರಿದಗಳ ಗಡಿಯಲ್ಲಿ ಬೆಳೆದಿರಿವುದು. ಸಾಹಿತ್ಯವಾಗುತ್ತದೆ. ಈ ಕಾಲಘಟ್ಟಗಳ ಅಂತರವನ್ನು ಮೀರಿ ಒಂದೆಡೆಯಲ್ಲಿ ಸಂಗಮಿಸಿರುವ ಚಿತ್ರಕಲೆ–ಸಾಹಿತ್ಯದ ಜೊತೆ ಜೊತೆಯಲ್ಲಿ ಸಹಜವಾಗಿ ಬೆಳೆದುಕೊಂಡು ಬಂದಿದೆ.

ಇಂದಿನ ಆಧುನಿಕ ಮಾನವನ ನಾಗರಿಕ ಮತ್ತು ಸಾಂಸ್ಕೃತಿಕ ಜೀವನದಲ್ಲೂ ಕಲೆ ಮತ್ತು ಸಾಹಿತ್ಯಗಳು ಎರಡಿಲ್ಲದಂತೆ, ಒಂದರೊಳಗೆ ಮತ್ತೊಂದು ಬೆಳೆದು ಹೆಣೆದುಕೊಂಡಿರುವಂತೆ ಒಂದನ್ನು ಮತ್ತೊಂದು ಅಭಿವ್ಯಕ್ತಿಗಾಗಿ ಆಶ್ರಯಿಸಿಕೊಂಡಿವೆ. ಸ್ವರ ಮತ್ತು ಲಿಪಿ ಮಾಧ್ಯಮಗಳ ಮುಖಾಂತರ, ಕಲ್ಪಿತ ಪದಗಳ ಮಿತಿಯಲ್ಲಿ ಸಾಹಿತ್ಯವು ಆಯಾ ದೇಶಿಯ ನೆಲೆಗಳಲ್ಲಿ ತನ್ನ ಆಶಯಗಳನ್ನು ಭಾವಗಳನ್ನು ಬಿತ್ತರಿಸುತ್ತಿದ್ದರೆ, ಚಿತ್ರಕಲೆಯು ದೇಶಿಯ ನೆಲೆಗಳಲ್ಲಿ ತನ್ನ ಆಶಯಗಳನ್ನು ಭಾವಗಳನ್ನು ಬಿತ್ತರಿಸುತ್ತಿದ್ದರೆ, ಚಿತ್ರಕಲೆಯು ದೇಶಿಯ ಮತ್ತು ಅನ್ಯ ದೇಶಿಯ ಸೀಮಿತ ಶಬ್ದಕೊಶಗಳ ಗಡಿಯನ್ನು ಇತಿಹಾಸದ ಕಾಲಮಾನವನ್ನು ದಾಟಿಕೊಂಡು ತನ್ನ ಆಶಯಗಳನ್ನು ಜನಸಮುದಾಯಕ್ಕೆ ಬಿತ್ತರಿಸಬಲ್ಲದು.

ಜಗತ್ತಿನ ಯಾವುದೇ ಒಂದು ಸಾಹಿತ್ಯದ ಕೃತಿಯೊಂದನ್ನು ಆಯಾ ದೇಶಿಯ ಭಾಷಿಕ ಪದಕೋಶಗಳ ಮುಖಾಂತರ ಅಧ್ಯಯನ ಮಾಡಬಹುದು, ಆದರೆ ಅದರಂತೆ ಪಾರಿಭಾಷಿಕ ಶಬ್ದಕೋಶಗಳ ಮಿತಿಯಲ್ಲಿ ನಾವು ಆ ದೇಶಿಯ ಕಲಾಕೃತಿಗಳನ್ನಾಗಲಿ ಅಥವಾ ಕಲಾಕೃತಿಗಳೊಳಗಿನ ರಸಾನುಭೂತಿಯನ್ನಾಗಲಿ, ಅಂತರಿಕ ತುಡಿತನವನ್ನಾಗಲಿ ಪಡೆಯಲಾರೆವು.

ಈ ರೀತಿಯ ಚಿತ್ರಕಲೆಯು ಅಭಿವ್ಯಕ್ತಿಗೆ ಇರುವ ಹಲವು ಮಿತಿಗಳು ಸಾಹಿತ್ಯಕ ಅಭಿವ್ಯಕ್ತಿಗೂ ಇವೆ. ಹತ್ತು ಪ್ರವಚನಗಳ ಸಾಹಿತ್ಯಿಕ ವಿವರವನ್ನು ಒಂದು ಚಿತ್ರವು ವಿವರಿಸುವಂತೆ ಎರಡು ಸಾಲುಗಳ ಸಾಹಿತ್ಯಿಕ ಬೆಡಗನ್ನು ಒಂದು ಚಿತ್ರವು ವಿವರಿಸಲಾರದೆ ಉಳಿಯಲೂ ಬಲ್ಲದು. ಆದುದರಿಂದ ಮಾನವನ ಕಲಾತ್ಮಕ ಮತ್ತು ಸಾಹಿತ್ಯಿಕ ಸಂವಹನದ ಬೆಳವಣಿಗೆಯಲ್ಲಿ ಕಲೆ ಮತ್ತು ಸಾಹಿತ್ಯಗಳು ಪರಸ್ಪರ ಕೊಡುಕೊಳ್ಳುವಿಕೆಯಿಂದ ವಿನಿಮಯಗಳು ಬೆಳೆದಂತೆ ಕಲೆ ಮತ್ತು ಸಾಹಿತ್ಯಗಳಿಗಿರುವ ಮಿತಿಗಳು ಕೊನೆಗೊಳ್ಳುತ್ತಿವೆ ಮತ್ತು ಅವರೆಡರ ಅಂತರ ಶಿಸ್ತಿಯ ಅನಾವರಣವೊಂದು ನೆಲೆಗೊಳ್ಳುತ್ತದೆ.

ಇಂತಹ ಕಲಾ ಸಾಹಿತ್ಯದ ಸೇತು ಬಂಧನದ ಕಾರ್ಯವನ್ನು ಚಿತ್ರಕಲಾವಿದ ಡಿ.ವಿ. ಹಾಲಭಾವಿಯವರು ಮೊದಲಿನಿಂದಲೂ ಅಂದರೆ ೧೯೬೦ ರಿಂದಲೆ ಕಲಾ ಸಾಹಿತ್ಯದ ಬಗ್ಗೆ ವಿಮರ್ಶಿಸಿ ವಿವರಿಸಿದ್ದಾರೆ.

ನಮ್ಮ ದೇಶದಲ್ಲೀಗ ಸಮಕಾಲಿನ ಕಲೆಗೆ ಹಾಗೂ ಕಲಾವಿದರಿಗೆ ಎಂದಿಲ್ಲದಂತಹ ತಾರಾಮೌಲ್ಯ ಬಂದಿದೆ. ಸುಶಿಕ್ಷಿತ ಜನರ ನಡುವೆಯಂತೂ ಕಲಾವಿದರಿಗೆ ತುಂಬಾ ಗೌರವ ಸ್ಥಾನ ಬಂದಿದೆ. ಹೀಗೆ ಇಂದು ಕಲಾ ಚಟುವಟಿಕೆಗಳಿಗೆ, ಕಲಾಕೃತಿಗಳಿಗೆ ಸಾಕಷ್ಟು ಆದ್ಯತೆಯಿದೆಯಾದರೂ ಅದೇಕೊ ಕಲಾ ಸಾಹಿತ್ಯ ನಿರೀಕ್ಷಿತ ಮಟ್ಟದಲ್ಲಿ ಇಂದು ಬೆಳೆಯುತ್ತಿಲ್ಲ. ಕಲಾವಿದರ ಹಾಗೂ ಸಹೃದಯದ ನಡುವಿನ ಸೇತುವೆಯಾಗಬೇಕಾದರೆ. ಕಲಾಸಾಹಿತ್ಯದ ಹಿನ್ನಡೆ ನಿಜಕ್ಕೂ ಆಂತರಿಕಾರಿಯೇ ಏಕೆಂದರೆ ನಾಲ್ಕಾರು ವರ್ಷಗಳ ಹಿಂದಿನ ಸ್ಥಿತಿಗೆ ಹೋಲಿಸಿದರೆ ದೇಶದಲ್ಲೀಗ ಕಲಾ ಸಾಹಿತ್ಯವು ಬಹುತೇಕ ನಿಂತ ನೀರಂತಾಗಿದೆ.

ಆದರೆ ಕರ್ನಾಟಕದ ಮಟ್ಟಿಗೆ ಇನ್ನೂ ಆ ಬಗೆಯ ಕಲಾ ಸಾಹಿತ್ಯದ ಹಿನ್ನಡೆ ಉಂಟಾಗಿಲ್ಲ. ಎನ್ನುವುದು ಆಶಾದಾಯಕ ಸಂಗತಿ ದೇಶದಲ್ಲಿಯೇ ಆಕಾಡಮಿಗಳಿಗೆ ಹೋಲಿಸಿದರೆ ರಾಜ್ಯದ ಕರ್ನಾಟಕ ಲಲಿತಕಲಾ ಆಕಾಡಮಿ ಇತ್ತಿಚೀನ ವರ್ಷಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಕಲಾಸಾಹಿತ್ಯದ ಬಗ್ಗೆ ಮಸ್ತಕಗಳನ್ನು ಪ್ರಕಟಿಸಿದೆ. ಕಲಾಸಾಹಿತ್ಯ ಬರಹಗಾರರು ಸಂಘಟನೆಯೊಂದರ ನೆರಳಿನಲ್ಲಿ ಒಂದೆಡೆಗೆ ಸೇರಿ ಕಲಾ ಸಾಹಿತ್ಯದ ಬಗ್ಗೆ ಹೆಚ್ಚು ಒಲವು ತೋರಿಸಿದ್ದಾರೆ.

ಹಾಲಭಾವಿಯವರ ಕಲಾ ಸಾಹಿತ್ಯದಲ್ಲಿ ಕಂಡುಬರುವ ಅಂಶವೆಂದರೆ ಚಿತ್ರಕಲೆಯ ಮಾಧ್ಯಮ ಗೋಚರ ಜಗತ್ತಿಗೆ ಸಂಬಂಧಿಸಿದೆ. ಒಂದು ಮಾಧ್ಯಮ ಇದಕ್ಕೆ ಭಾಷೆಗೆ ಇರುವ ಮಿತಿಗಳು ಇಲ್ಲಿ ಕಂಡು ಬರುವುದಿಲ್ಲ. ಒಂದು ಕಲಾ ಕೃತಿಯನ್ನು ಯಾವುದೆ ದೇಶದ ಸಹೃದಯನೊಬ್ಬ ಹೆಚ್ಚೇನೂ ಶ್ರಮವಿಲ್ಲದೆ ನಮಂತೆಯೇ ನೋಡಬಲ್ಲ ಅನುಭವಿಸಬಲ್ಲ. ಚಿತ್ರಕಲೆಗೆ ಇರುವ ವೈಶ್ಯಲ್ಯ ಇರುವುದು ಇಲ್ಲೀಯೆ, ಪಾಶ್ಚಿಮಾತ್ಯ ರೀತಿನೀತಿಗಳ ಜ್ಞಾನವಿಲ್ಲದಿದ್ದರೂ ಕಲಾ ಕೃತಿಯೊಂದನ್ನು ನೋಡಲು ನಿಲ್ಲುವ ಸಮರ್ಥವಾದ ಕಣ್ಣುಗಳಿದ್ದರೆ ಅದರ ಸಾಂಗತ್ಯ ರಸಿಕರನ್ನು ಹಿಡಿದು ನಿಲ್ಲುಸುತ್ತದೆ. ಉದಾಹರಣೆಗೆ ಪಿಕಾಸೋವಿನ "ಗೆರ್ನಿಕಾ" ಕೃತಿಯನ್ನು ಯುರೋಪಿನ ಜನರಂತೆ, ಅಮೇರಿಕಾದವರಂತೆ ನಾವು ಅನುಭವಿಸಬಹುದು ಅಂತೆಯೇ ಅವರು ನಮ್ಮ ಕಲಾಕೃತಿಗಳಗಳನ್ನು ನೋಡಬಹುದು, ಆದ್ದರಿಂದಲೆ ಕಲೆ ಭಾಷಾತೀತವಾದುದು ದೇಶಾತೀತವಾದದು ಎನ್ನುತ್ತಾರೆ.

ಆದರೆ ಸಾಹಿತ್ಯದಲ್ಲಿ ಇದು ಸಾಧ್ಯವಾಗುವುದಿಲ್ಲ ಅಲ್ಲಿ ಭಾಷೆಯ ಜ್ಞಾನ ಅನಿವಾರ್ಯ, ಸಾಹಿತ್ಯದಲ್ಲಿ ಭಾಷಾಂತರದಿಂದ ಯಾವುದೆ ಭಾಷೆಯ ಕೃತಿಯನ್ನು ಓದಬಹುದಾದರೂ ಅದಕ್ಕೆ ಮೂಲಕೃತಿಯ ಸತ್ವ ಬರುವದು. ಕಷ್ಟ ಎನ್ನುವುದನ್ನು ಅನೇಕರು ಒಪ್ಪುತ್ತಾರೆ. ಹೀಗೆ ಚಿತ್ರಕಲೆ, ಸಾಹಿತ್ಯಕ್ಕಿರುವ ಈ ಮಿತಿಯನ್ನು ಮೀರಿ ನಿಲ್ಲುತ್ತದೆ.

೧. ಹಾಲಭಾವಿಯವರು ರಚಿಸಿದ ಸಾಹಿತ್ಯ ಕೃಷಿಯಲ್ಲಿ ಮೊದಲಿಗೆ ಸಮಕಾಲೀನ ಕಲಾವಿದರ ಕುರಿತಾದ ಆಂಗ್ಲ ಬರವಣಿಗೆಯಾದ **ಮೈ ಕಾಂಟೆಂಪರರಿ ಆರ್ಟಿಸ್ಟ್ಸ್.(My contemporary artists)** ಹಾಲಭಾವಿಯವರ ಇಂಗ್ಲೀಷ ಕಲಾ ಸಾಹಿತ್ಯದಲ್ಲಿ ಅಂದರೆ,(My contemporary artists)ನಲ್ಲಿ ಭಾಷೆಯನ್ನು ಹೊಸದಾಗಿ ಸೃಷ್ಟಿಮಾಡಿಲ್ಲವಾದರೂ, ಆಗಲೆ ಸಿದ್ದವಿರುವ ಹಾಗೂ ಪ್ರಚಲಿತವಿರುವ ಭಾಷಾ ಸಾಮಾಗ್ರಿಯನ್ನು ತಮ್ಮ

ಮಾಧ್ಯಮವಾಗಿಸಿಕೊಂಡಿದ್ದಾರೆ. ಇಂಗ್ಲೀಷ ಭಾಷೆಯೊಳಗಿನ ಪ್ರತಿಯೊಂದು ಶಬ್ದಕ್ಕೂ ಒಂದು ಸ್ವತಂತ್ರ ಅರ್ಥವ್ಯತ್ಯಾಸ ಕಲ್ಪನೆ ನೀಡಿದ್ದಾರೆ, ಇಲ್ಲಿ ಕೇವಲ ಶಬ್ದಗಳಿಗೆ ಹಲವಾರು ಅರ್ಥಗಳಿರಬಹುದು, ಸಂದರ್ಭಆನುಸಾರ ಅರ್ಥಗಳು ಬದಲಾಗಬಹುದು. ಹೊಸ ಶಬ್ದಗಳ ಸೃಷ್ಟಿಯೂ ಕಡಿಮೆ, ಇಲ್ಲ ಚಿತ್ರಕಲೆಯ ಮಾಧ್ಯಮಗಳಾದ ರೇಖೆ ಬಣ್ಣಗಳಿಗೆ ನಿಶ್ಚಿತವಾದ ಅರ್ಥನೀಡಿದ್ದಾರೆ.

ಸಾಹಿತ್ಯ ಜನರನ್ನು ತಲುಪುವದಕ್ಕೆ ಸುಲಭವಾದ ಹಲವಾರು ಮಾರ್ಗಗಳೆವೆ. ಸಾಹಿತ್ಯ ಕೃತಿಯ ಸಹಸ್ರಾರು, ಪ್ರತಿಗಳನ್ನು ಮುದ್ರಿಸಿ ಕಡಿಮೆ ಬೆಲೆಯಲ್ಲಿ ಮಾರಾಟ ಮಾಡಿ ಜನತೆಗೆ ತಲುಪಿಸಿಬಹುದು. ನಮ್ಮ ಶಿಕ್ಷಣ ಕ್ರಮದಲ್ಲಿಯೇ ನಾವು ಅನೇಕ ಸಾಹಿತ್ಯಕ್ರಮಗಳನ್ನೂ ಅಭ್ಯಾಸ ಮಾಡಿರುತ್ತೇವೆ. ಸಾಹಿತ್ಯಕ್ಕಿರುವ ಸೌಲಭ್ಯ ಚಿತ್ರಕಲೆಗಳಲ್ಲಿ ಕಂಡುಬರುವುದಿಲ್ಲ ಸಾಹಿತ್ಯಕ್ಕಿರುವ ನಿಖರತೆ, ಸ್ಪಷ್ಟತೆ ಚಿತ್ರಕಲೆಯಲ್ಲಿ ಗೋಚರಿಸುವುದಿಲ್ಲ. ಚಿತ್ರಕಲೆಯನ್ನು ಸಾಹಿತ್ಯದಂತೆ ಮುದ್ರಿಸಿ ಕಡಿಮೆ ಬೆಲೆಯಲ್ಲಿ ಮಾರಾಟ ಮಾಡುವದು ಕಷ್ಟ. ಆಕಸ್ಮಾತ ಇದು ಸಾಧ್ಯವಾಗಬಹುದಾದರೂ ಕಲಾಕೃತಿಯ ಮೂಲ ಅಳತೆಯಲ್ಲಿ ಅದರ ಮೈವಳಿಕೆಯನ್ನು (Texture) ಅದರ ಮೂಲಸತ್ವವನ್ನು ಮುದ್ರಣಕ್ಕೆ ತರುವದು ಕಷ್ಟ. ಇನ್ನು ಕಲಾ ಶಿಕ್ಷಣಕ್ರಮದಲ್ಲಂತೂ ಕಲೆಗೆ ಪ್ರಾಧನ್ಯವೆ ಇಲ್ಲ ಹೀಗಾಗಿ ಈ ಎಲ್ಲ ಕಾರಣಗಳಿಂದ ಚಿತ್ರಕಲೆ ಸಂವಹನದ ದೃಷ್ಟಿಯಿಂದ ಜನರಿಂದ ದೂರವೇ ಸರಿದಂತಾಗಿದೆ.

೧೯೬೮ ರಲ್ಲಿಯೇ ಹಾಲಭಾವಿಯವರು ಅವರ ಆತ್ಮೀಯ ಗೆಳೆಯರಾದ ಶ್ರೀ ಎಂ. ವಿ. ಮಿಣಜಗಿ, ಶ್ರೀ ಡಿ.ಜಿ. ಬಡಿಗೇರ, ಶ್ರೀ ಸಿ. ಎಸ್. ದಂಡಾವತಿಮಠ, ಅಮಿನಸಾಬ ಕಮಡೊಳ್ಳಿ, ಶ್ರೀ ಎಮ್. ಎ. ಚಟ್ಟಿ. ಶ್ರೀ ಎ. ಎ. ಅಲಮೇಲಕರ ಅವರ ಜೀವನ ಮತ್ತು ಕಲಾಕೃತಿಗಳ ಬಗ್ಗೆ ಕಲಾಸಾಹಿತ್ಯ ರಚಿಸಿದ್ದಾರೆ. ಅವರ ರಚಿಸಿದ ಕಲಾ ಸಾಹಿತ್ಯ ಸಂಕ್ಷಿಪ್ತ ವಿವರಣೆಯನ್ನು ನೀಡಲಾಗಿದೆ.

ಹಾಲಭಾವಿಯವರು ರಚಿಸಿಧ ಕಲಾಸಾಹಿತ್ಯ

೨೦ ನೇಯ ಶತಮಾನದಲ್ಲಿ ಸೃಷ್ಟಿಗೊಂಡ ಅನೇಕ ಕಲಾವಿದರ ಪರಿಚಯವನ್ನು ಗುರುತಿಸಲು ಸಾಧ್ಯವಾಗದ ಸಂದರ್ಭದಲ್ಲಿ ಸ್ವತಃ ಹಾಲಭಾವಿಯವರೇ ಇಂತಹ ಕಲಾಸಾಹಿತ್ಯವನ್ನು, ಮತ್ತು ಕಲಾವಿಮರ್ಶೆಯನ್ನು ಪರಿಚಯ ಮಾಡುವುದರ ಮುಖಾಂತರ ಕರ್ನಾಟಕದಲ್ಲಿ ಮೊದಲ ಕಹಳೆಯನ್ನು ಊದಿದವರೆಂದರೆ ತಪ್ಪಾಗಲಿಕ್ಕಿಲ್ಲ.

ಹಾಲಭಾವಿಯವರು "ನನ್ನ ಸಮಕಾಲೀನರು" ಎಂಬ ಕಿರು ಗ್ರಂಥವನ್ನು ಪರಿಚಯಿಸಿದ ವಿವರಣೆಯನ್ನು ಗಮನಿಸಿದಾಗ ಹಾಲಭಾವಿಯವರಿಗಿಂತ ಈ ಆರು ಜನ ಕಲಾವಿದರು ಹಾಲಭಾವಿಯವರಕ್ಕಿಂತ ಉನ್ನತಮಟ್ಟದ ಕಲಾವಿದರೆಂದು ತಿಳಿದುಕೊಳ್ಳಬಹುದು. ಇದು ಹಾಲಭಾವಿಯವರಿಗೆ ಬಹುಶಃ ಗೊತ್ತಿರಬಹುದು. ಆದರೂ ಸಹಿತ ಅಂತಹ ಮಹಾನಕಲಾವಿದರ ಮೇಲೆ ಇಟ್ಟ ಪ್ರೀತಿ, ಆಭಿಮಾನ ಬಹು ಅನನ್ಯವಾಗಿದೆ ಎಂದು ಹೇಳಬಹುದಾಗಿದೆ.

ಒಬ್ಬ ಕಲಾವಿದ ಮತ್ತೊಬ್ಬ ಕಲಾವಿದನನ್ನು ಹೊಗಳಿ ಬರೆಯುವುದು ಸುಲಭದ ಮಾತಲ್ಲ. ಏಕೆಂದರೆ ಕಲಾವಿದರಲ್ಲಿ ಅಸೂಯೆ ಭಾವನೆ ಹೆಚ್ಚಾಗಿರುವುದರಿಂದ ಕಲಾವಿದನನ್ನು ಪರಿಚಯಿಸವುದು ಸಾಧ್ಯವಾಗದ ಮಾತು. ಅಂತಹುದರಲ್ಲಿ ಹಾಲಭಾವಿಯವರು ಇಂತಹ ಕಲಾವಿದರನ್ನು ಕಲಾಕ್ಷೇತ್ರಕ್ಕೆ ಕಲಾಸಾಹಿತ್ಯದ ಮುಖಾಂತರ ಪರಿಚಯಿಸಿದ್ದು ಸಂತೋಷದ ಸಂಗತಿ.

ಗ್ರಂಥಗಳು

೧೯೬೮ರಲ್ಲಿ ಹಾಲಭಾವಿಯವರು "ನನ್ನ ಸಮಕಾಲಿನರು"ಎಂಬ ಕಿರುಗ್ರಂಥವನ್ನು ೧೧ ಪುಟಗಳಲ್ಲಿ ಆಂಗ್ಲ ಮಾಧ್ಯಮದಲ್ಲಿ ರಚಿಸಿದ್ದಾರೆ. ಈ ಕಲಾವಿದರು ಶ್ರೀ ಎಂ. ವ್ಹಿ. ಮಿಣಜಗಿ, ಶ್ರೀ ಡಿ.ಜಿ.ಬಡಿಗೇರ, ಶ್ರೀ ಜಿ. ಎಸ್. ದಂಡಾವತಿಮಠ, ಶ್ರೀ ಅಮೀನಸಾಬ ಕಮಡೊಳ್ಳಿ, ಶ್ರೀ ಎಂ. ಎ. ಚೆಟ್ಟಿ, ಶ್ರೀ ಎ. ಎ. ಆಲಮೆಲ್ಕರ್ ಹೀಗೆ

ಈ ಆರು ಜನರ ಜನನ, ಕಲಾಶಿಕ್ಷಣ, ಅವರು ರಚಿಸಿದ ಕಲಾಕೃತಿಗಳು ಮತ್ತು ಅವರ ಉನ್ನತ ವ್ಯಾಸಂಗ, ಪ್ರಶಸ್ತಿಗಳು ಹಾಗೂ ಇತರ ಕಾರ್ಯಕ್ಷೇತ್ರಗಳ ಬಗ್ಗೆ ಪೂರ್ಣವಾದ ಮಾಹಿತಿಯನ್ನು ತಮ್ಮ ಕಲಾಸಾಹಿತ್ಯದ ಮುಖಾಂತರ ನಾಡಿನ ಕಲಾವಿದರಿಗೆ ತಿಳಿಯುವಂತೆ ಮಾಡಿದ್ದಾರೆ.

೧೯೬೮-೬೯ರಲ್ಲಿ ಹಾಲಭಾವಿಯವರು "ನನ್ನ ಶಿಲೋನ್ ಪ್ರವಾಸ" ಕುರಿತು ೨೧ ಪುಟಗಳಲ್ಲಿ ಕನ್ನಡದಲ್ಲಿ ಪ್ರಕಟಿಸಿದ್ದಾರೆ. ಅವುಗಳಲ್ಲಿ ಮುಖ್ಯವಾಗಿ ಶಿಲೋನ್ ಕಲೆಯ ಇತಿಹಾಸ ಮತ್ತು ಅಲ್ಲಿನ ಚಿತ್ರಕಲೆಯ ಕುರಿತು ತುಂಬಾ ಚಿಂತನಾತ್ಮಕವಾಗಿ ವಿವರಿಸಿದ್ದಾರೆ. ಹಾಗೆಯೇ ಜಾಫ್ನಾ, ಕ್ಯಾಂಡಿ, ಸಿಗೀರಿಯಾ, ಕೊಲೊಂಬೋ ಹೀಗೆ ಅಲ್ಲಿನ ವಾಸ್ತು ಶಿಲ್ಪ ಮತ್ತು ಚಿತ್ರಕಲೆಗಳನ್ನು ನಮ್ಮ ದೇಶದ ಅಜಂತ-ಎಲ್ಲೋರಗಳಿಗೆ ಹೋಲಿಸಿಕೊಂಡು ಸಂಕ್ಷಿಪ್ತವಾಗಿ ಈ ಗ್ರಂಥದಲ್ಲಿ ವಿವರಿಸಿದ್ದಾರೆ. ಹಾಗೆಯೇ ಅದೇ ಸಂದರ್ಭದಲ್ಲಿ ಜಮ್ಮು ಕಾಶ್ಮೀರಕ್ಕೆ ಭೇಟಿ ನೀಡಿ ಅಲ್ಲಿಯ ಚಿತ್ರಕಲೆ ಹಾಗೂ ನಿಸರ್ಗಮಯವಾದ ವಾತಾವರಣವನ್ನು "ಜಮ್ಮು ಕಾಶ್ಮೀರ"ಎಂಬ ಕಿರು ಗ್ರಂಥದಲ್ಲಿ ಪರಿಚಯಿಸಿದ್ದಾರೆ.

ಇದೇ ಸಂದರ್ಭದಲ್ಲಿ ಹಾಲಭಾವಿಯವರು ಜಮ್ಮು ಕಾಶ್ಮೀರ ಪರಿಸರದಲ್ಲಿ ಪ್ರವಾಸವನ್ನು ಕೈಗೊಂಡು ಅಲ್ಲಿ ಕಲೆ ಮತ್ತು ಸಂಸ್ಕೃತಿ ಕುರಿತಾದ ಅನುಭವಗಳನ್ನು "ಜಮ್ಮು ಕಾಶ್ಮೀರ" ಎಂಬ ಕಿರು ಗ್ರಂಥದಲ್ಲಿ ದಾಖಲಿಸಿದ್ದಾರೆ. ಆದರೆ ಅನಿವಾರ್ಯ ಕಾರಣಗಳಿಂದ ಈ ಗ್ರಂಥ ಪ್ರಕಟಗೊಳ್ಳಲಿಲ್ಲ.

**ಕಲಾ ಪತ್ರಿಕೆಗಳು**

ಅ. ೧೯೬೫ರಲ್ಲಿ ಹಾಲಭಾವಿಯವರು "ಆರ್ಟ ಗಿಲ್ಡ್" ಎಂಬ ಮಾಸಿಕ ಪತ್ರಿಕೆಯನ್ನು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ಪ್ರಾರಂಭಿಸಿದರು. ಈ ಲೇಖನದಲ್ಲಿದೇಶ ವಿದೇಶಗಳ ಮಹಾನ್ ಕಲಾವಿದರ ಪರಿಚಯವನ್ನು ಸಂಕ್ಷಿಪ್ತವಾಗಿ ಪರಿಚಯಿಸುತ್ತ ಬಂದರು. ಮುಂದೆ ಇದೇ ಪತ್ರಿಕೆಯಲ್ಲಿ ತಮ್ಮ ಶಿಲೋನ್ ಪ್ರವಾಸದ ಬಗ್ಗೆ ಮತ್ತು ಯುವಕಲಾವಿದರ ಬಗ್ಗೆ ಪ್ರಾಚೀನ ಕಲೆಯ ಕುರಿತಾದ ಲೇಖನಗಳು, ವಿಮರ್ಶಾತ್ಮಕ ಬರಹಗಳನ್ನು ಪರಿಚಯಿಸುತ್ತ ಬಂದರು. ಕಾರಣಾಂತರದಿಂದ ಮುಂದೆ ಈ ಪತ್ರಿಕೆಯು ಬಂದಾಯಿತು. ಈ ಪತ್ರಿಕೆಯಲ್ಲಿ ಹಾಲಭಾವಿಯವರ ಲೆಖನಗಳು ಅತ್ಯಂತ ಮೌಲಿಕವಾದವುಗಳಾಗಿರುತ್ತವೆ. "ಆರ್ಟ ಗಿಲ್ಡ್ " ಕಲಾಪತ್ರಿಕೆಯು ಉತ್ತಮಕೊಡುಗೆಯಾಗಿ ಬಂದಿರುವುದನ್ನು ಮರೆಯುವಂತಿಲ್ಲ. ಹಾಲಭಾವಿಯವರ ಕುರಿತು ಬಂದ ಕಲಾಸಾಹಿತ್ಯ, ಹಾಲಭಾವಿಯವರ ರಚಿಸಿದ ಕಲಾಸಾಹಿತ್ಯ ಒಂದೆಡೆಯಾದರೆ, ಅವರನ್ನು ಕುರಿತು ಬಂದಂತಹ ಕಲಾಸಾಹಿತ್ಯ ಬಹಳಷ್ಟು, ಅವುಗಳಲ್ಲಿ ಕೆಲವುಗಳನ್ನು ಹೆಸರಿಸಲಾಗಿದೆ. ಲಲಿತಕಲಾ ಅಕಾಡೆಮಿಯವರು ಕಲಾವಿದ ಡಿ.ವ್ಹಿ ಹಾಲಭಾವಿಯವರ ಜನನ ಮತ್ತು ಬಾಲ್ಯ ಕಲಾಶಿಕ್ಷಣ ಧಾರವಾಡ ಜಿಲ್ಲೆಗೆ ಅವರ ಅನುಪಮ ಕಾಣಿಕೆ, ಅವರ ಕಲಾಕೃತಿಗಳ ಸಂಗ್ರಹ, ಕಲಾಕೃತಿಗಳ ರಚನೆಯ ಬಗ್ಗೆ ಮತ್ತು ಅವರ ಇತರ ಕಾರ್ಯಕ್ಷೇತ್ರಗಳ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ಬ. 'ಕಲಾಮಾರ್ಗ' ಎಂಬ ಪತ್ರಿಕೆಯಲ್ಲಿ ಹಾಲಭಾವಿಯವರ ಕೆಲವು ಲೇಖನಗಳು ಪ್ರಕಟವಾಗಿವೆ. ಕೆಲವು ಕಾಲದ ನಂತರ ಆ ಪತ್ರಿಕೆ ಸ್ಥಗಿತಗೊಳ್ಳುತ್ತದೆ. ಈ ಪತ್ರಿಕೆಯಲ್ಲಿ ಕಲಾ ವಿದ್ಯಾರ್ಥಿಗಳಿಗೆ, ಕಲಾವಿದರಿಗೆ, ಕಲೆಯ ಬಗ್ಗೆ ಹೆಚ್ಚಿನ ಮಾಹಿತಿಯನ್ನು ನೀಡಲು ಪ್ರಯತ್ನಿಸುತ್ತಾ ಬಂದಿರುವರು. ಆಗಿನ ಸಂದರ್ಭದಲ್ಲಿ ಕಲಾಮಾರ್ಗ ಪತ್ರಿಕೆ ಕಲಾವಿದರಿಗೆ ಹೆಚ್ಚು ಉಪಯುಕ್ತವಾಗಿತ್ತು.

**೩. ಬಿಡಿ ಲೇಖನಗಳು**

**ನನ್ನ ಗುರುಗಳು** ಹಾಲಭಾವಿಯವರು ಜೆ.ಜೆ. ಸ್ಕೂಲ್ ಆಫ್ ಆರ್ಟ ದಲ್ಲಿನ ಗುರುಗಳು ಶ್ರೀ ಎಸ್ ಫರ್ನ್ಯಾಂಡಿಸ್, ಶ್ರೀ ಮೇಸ್ತ್ರಿ, ಬೋಂನ್ ಸುಲೆ, ಶ್ರೀ ನಗರಕರ್, ಶ್ರೀ ಕೆ.ಬಿ. ಚುಡೇಕರ್, ಎಂ.ವಿ.ದುರಂಧರ, ಹೀಗೆ ಇವರ ಕಲಾಭ್ಯಾಸ ಇವರ ನಡುವಳಿಕೆ, ಇವರ ಕಲಾಸಾಧನೆ ಕುರಿತು, ತಾವು ಬರೆದ ಲೇಖನದಲ್ಲಿ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

**ನನ್ನ ಸಮಕಾಲೀನ ವಿದ್ಯಾರ್ಥಿಗಳು** ಹಾಲಭಾವಿಯವರು ಇದೇ ಸಂದರ್ಭದಲ್ಲಿಯೇ ತಮ್ಮ ಸಹಪಾಠಿಗಳಾದ ಎಂ.ಆರ್.ಅಚರೇಕರ, ಡಿ.ಜಿ.ಬಡಿಗೇರ, ಎಂ.ವಿ.ಮಿಣಜಗಿ, ವಿ.ಆರ್.ರಾವ್, ವಿ.ಕೆ.ಪಾಟೀಲ್, ಕೆ.ಕೆ. ಹೆಬ್ಬಾರ, ಸಿ.ವಿ.ಕಾರಡಗಿ, ಎಸ್.ಪಿ. ಅಕ್ಕಿ, ಪಿ.ಕೆ.ಅಕ್ಕಿ, ಎಂ.ಎ.ಚಟ್ಟಿ, ಜಿ.ಎಸ್.ದಂಡಾವತಿಮಠ ಇವರೆಲ್ಲರ ಕಲಾಧ್ಯಯನ, ಕಲಾಸಾಧನೆ, ಅವರ ಪ್ರಶಸ್ತಿ ಬಹುಮಾನಗಳ ಕುರಿತು ಈ ಲೇಖನದಲ್ಲಿ ತುಂಬಾ ಮೌಲ್ಯಯುತವಾಗಿ ವಿಶ್ಲೇಷಿಸಿದ್ದಾರೆ.

**ವಿದ್ಯಾರ್ಥಿಗಳು** ಹಾಲಭಾವಿಯವರು ತಮ್ಮ ಕಲಾಶಾಲೆಯಲ್ಲಿ ಕಲಿತ ಶಿಷ್ಯವರ್ಗದವರಾದ ಸೋಮಶೇಖರ್ ಸಾಲಿ, ಎಸ್.ಜಿ.ಚಿನ್ನಣ್ಣವರ, ರವಿ ಪರಾಂಜಪೆ, ಎಂ.ಜಿ.ವಾಚೇದಮಠ, ಎಂ.ಆರ್.ಬಾಳಿಕಾಯಿ, ಸುರೇಶ ಹಾಲಭಾವಿ, ಈಶ್ವರ ಮುರಗೋಡ ಹೀಗೆ ತಮ್ಮ ಮಾರ್ಗದರ್ಶನದಲ್ಲಿ ವಿದ್ಯಾಭ್ಯಾಸ ಮಾಡಿದ ಅನೇಕ ವಿದ್ಯಾಥಿಗಳನ್ನು ಕುರಿತು ಈ ಲೇಖನದಲ್ಲಿ ವಿವರಿಸಿದ್ದಾರೆ.

**ನಮ್ಮ ನಮ್ಮವರು** ಹಾಲಭಾವಿಯವರು ತಮ್ಮ ಅಪ್ತೇಷ್ಟರಾದ ಎಸ್.ಎಸ್.ಮಾಳವಾಡ, ಎಂ. ಜಿ.ಹಂದ್ರಾಳ, ಡಾ.ಎಸ್.ಸಿ ಪಾಟೀಲ, ಸಿ.ಎನ್.ಪಾಟೀಲ ಶ್ರೀಮತಿ ಎನ್. ಶಕುಂತಲಾ, ಸದಾಶಿವ ಬಡಿಗೆನ್ನವರ, ಶ್ರೀ ಎಂ. ವಿಜಯ ಪಂಚಪ್ಪ, ಪಿ.ಆರ್.ತಿಪ್ಪೇಸ್ವಾಮಿ ಹೀಗೆ ಇವರ ಪರಿಚಯವನ್ನು ತಮ್ಮ ಲೇಖನದ ಮುಖಾಂತರ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

**ಕಲಾ ವಿಶ್ವವಿದ್ಯಾಲಯ ಹಂಪಿಯಲ್ಲಾಗಲಿ** ಬೇಲೂರಲ್ಲಿ ಕಲೆಯ ವಿಶ್ವವಿದ್ಯಾಲಯ ಸ್ಥಾಪಿಸುವ ರಾಜ್ಯ ಸರಕಾರದ ಯೋಜನೆ ಸಂತೋಷದ ವಿಷಯ. ಈ ಸಂದರ್ಭದಲ್ಲಿ ಆ ಅರವತ್ತು ವರ್ಷದ ಕಲಾಭ್ಯಾಸ ಮತ್ತು ಕಲಾ ಸೇವೆಯಿಂದ ಅನುಭವ ಪಡೆದ ನನ್ನ ವಿಚಾರ ಇಂತಿದೆ. ಬೇಲೂರು ವಿಷ್ಣುವರ್ಧನನ ಹೊಯ್ಸಳ ಹದಿಮೂರನೇ ಶತಮಾನದಲ್ಲಿ ಕಟ್ಟಿಸಿದ ಊರು ಅಲ್ಲಿ ಚನ್ನಕೇಶವ ದೇವಾಲಯವನ್ನು ಬಿಟ್ಟರೆ ಬೇರೆ ಹಿಂದಿನದು ಏನೂ ಈಗ ಉಳಿದಿಲ್ಲ ನೃತ್ಯ ರಾಣಿ ಶಕುಂತಲಾ ದೇವಿಯಿಂದ ಹೆಸರು ಪಡೆದಿದ್ದಷ್ಟೇ.

ಅದಕ್ಕಿಂತಲೂ ಕೊನೆಯ ಹಿಂದೂ ಸಾಮ್ರಾಜ್ಯವಾದ ವಿಜಯನಗರದಲ್ಲಿ (ಹಂಪಿ) ಸಂಕಲ್ಪಿತ ಈ ಕಲಾವಿಶ್ವವಿದ್ಯಾಲಯವನ್ನು ಮಾಡುವುದು ಒಳ್ಳೆಯದು ಎಂಬ ಅಭಿಪ್ರಾಯವನ್ನು ತಮ್ಮ ಲೇಖನವನ್ನು ಜನಮನ ಪತ್ರಿಕೆಯಲ್ಲಿ ೧೯೮೪ ರಂದು ಬರೆದಿದ್ದಾರೆ.

## II. ಹಾಲಭಾವಿಯವರ ಕುರಿತು ಬಂದ ಕಲಾಸಾಹಿತ್ಯ

ಕನ್ನಡದ ನೆಲದಲ್ಲಿ ಹುಟ್ಟಿ ಕನ್ನಡದ ಕಲಾವಿದನು ಸೀಮೋಲಂಘನ ಮಾಡಿರುವ ಎಲ್ಲರ ಪ್ರೀತಿಯ ಮೇಷ್ಟ್ರು ಹಾಲಭಾವಿಯವರು. ಯುವಕರಾಗಿದ್ದಾಗಲೆ ಕಲಾಸಂಘಟನೆಗೆ ಹೆಚ್ಚು ಮಹತ್ವವನ್ನು ಕೊಟ್ಟು ಕಲಾಸಂಪ್ರದಾಯವನ್ನು ಮೆಟ್ಟಿ ನಿಲ್ಲುವ ಛಲ, ಅಂತರ್ಗತವಾದ ಬಂಡಾಯಗಳಿಂದ ಯಾರ ಮುಲಾಜಿಗೂ ಒಳಗಾಗದೆ ಬದುಕಿ ಬಾಳಿದ ಹಾಲಭಾವಿಯವರ ಕುರಿತು ಪ್ರಕಟವಾದ ಸಾಹಿತ್ಯ ಕಡಿಮೆ. ಪ್ರಚಾರಕ್ಕಾಗಿ ಕಲಾಸೇವೆ ಮಾಡದೆ ಕಲಾವಿದರ, ಕಲಾವಿದ್ಯಾರ್ಥಿಗಳ ಒಳಿತಿಗಾಗಿ ಹಗಲಿರುಳೂ ದುಡಿದವರು ಹಾಲಭಾವಿಯವರು.

ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಪ್ರಕಟವಾದ ಎಸ್. ಕೆ. ಹೂಗಾರ ಅವರು ಬರೆದ "ಡಿ.ವ್ಹಿ. ಹಾಲಭಾವಿ" ಕಿರುಗ್ರಂಥ ಸಂಕ್ಷಿಪ್ತವಾದರೂ, ಹಾಲಭಾವಿಯವರು ಬೆಳೆದ ಪರಿಸರವನ್ನು ಕಣ್ಮುಂದೆ ಸಮರ್ಥನೀಯವಾಗಿ ಚಿತ್ರಿಸುತ್ತದೆ. ಹಾಲಭಾವಿಯವರಿಗೆ ೬೦ ತುಂಬಿದ ಸಂದರ್ಭದಲ್ಲಿ ಅವರ ಶಿಷ್ಯೋತ್ತಮರು "ಅರವತ್ತರರ ವಸೆಗೆ" ಎಂಬ ಕಿರು ಅಭಿನಂದನಾ ಗ್ರಂಥವನ್ನು ತಾರಾ ಪವಾರ ಇವರ ಸಂಪಾದಕತ್ವದಲ್ಲಿ ಪ್ರಕಟಿಸಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯವು "ಕನ್ನಡ ಭಾರತಿ" ಎಂಬ ಕಿರು ಸಂಚಿಕೆಯಲ್ಲಿ ಡಾ. ಎಸ್. ಸಿ. ಪಾಟೀಲರು ಹಾಲಭಾವಿಯವರ ಜೀವನ ಕುರಿತು ವಿಶ್ಲೇಷಿಸಿದ್ದಾರೆ.

ಡಾ.ಎಸ್. ಸಿ. ಪಾಟೀಲರು ಕಲಾಶಾಲೆಯ ಸುವರ್ಣಮಹೋತ್ಸವದ ಸಂದರ್ಭದಲ್ಲಿ ಹಾಲಭಾವಿಯವರ ಕುರಿತು ಅಭಿನಂದನಾ ಗ್ರಂಥವನ್ನು ಹೊರತಂದಿದ್ದು ಇಲ್ಲಿ ಹಾಲಭಾವಿಯವರ ಆಪ್ತೇಷ್ಟರು ಅವರ ಜೀವನ, ಕಲಾಕೃತಿಗಳ ಬಗ್ಗೆ ವಿಶ್ಲೇಷಿಸಿದ್ದಾರೆ.

ಹಾಲಭಾವಿಯವರ ಕಲಾಶಾಲೆಯ ವಜ್ರಮಹೋತ್ಸವದ ಸಂದರ್ಭದಲ್ಲಿ ಡಾ. ಎಸ್. ಸಿ. ಪಾಟೀಲರ ಸಂಪಾದಕತ್ವದಲ್ಲಿ 'ಚಿತ್ರಾಕ್ಷಿ' ಎಂಬ ಅಭಿನಂದನಾ ಗ್ರಂಥದಲ್ಲಿ ಅನೇಕ ಕಲಾವಿದರು, ಸಾಹಿತಿಗಳು ಹಾಲಭಾವಿಯವರ ಕುರಿತು ಬಂದ ಲೇಖನಗಳಿವೆ.

ಇದೇ ಸಂದರ್ಭದಲ್ಲಿ "ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು" ಎಂಬ ಗ್ರಂಥವನ್ನು ಡಾ.ಎಸ್.ಸಿ ಪಾಟೀಲರ ಸಂಪಾದಕತ್ವದಲ್ಲಿ ಹೊರತರಲಾಯಿತು. ಈ ಗ್ರಂಥದಲ್ಲಿ ಚಿತ್ರಕಲೆಯು ವಿವಿಧ ಆಯಾಮಗಳನ್ನು ಕುರಿತು ಇಲ್ಲಿ ವಿಶ್ಲೇಷಿಸಿದ್ದಾರೆ.

**ಗ್ರಂಥಗಳು**

**ಅ. ಡಿ. ವ್ಹಿ. ಹಾಲಭಾವಿ**

ಕರ್ನಾಟಕ ಲಲಿತಕಲಾ ಅಕಾಡಮಿಯು ೧೯೮೭ರಲ್ಲಿ ಪ್ರಕಟಿಸಿದ, ಎಸ್. ಕೆ. ಹೂಗಾರರವರು ಬರೆದ, ಡಿ.ವಿ.ಹಾಲಭಾವಿ ಎಂಬ ಕಿರು ಹೊತ್ತಿಗೆಯಲ್ಲಿ – ಜೀವನಕ್ಕೆ ಆಹ್ಲಾದಕರವಾಗಿ ಸಂಸ್ಕೃತಿಯ ಕುರುಹುವಾಗಿ ಬಾಳಿಗೆ ಬೆಳಕಾಗಿ, ಜೀವನ ವಿಕಾಸಗೊಳಿಸುವುದೇ ಕಲೆ. ಅದು ಕರಗತವಾಗಬೇಕಾದರೆ, ಕರುಣಾಕರನ ಕೃಪೆ ಬೇಕು. ಅಂತೆಯೇ ಕಲೆಯ ನೆಲೆ, ಬೆಲೆಗಳನ್ನು ಅರಿಯುವುದು ಅಸಾಧ್ಯ ಇಂತಹಕಲೆಯ ನೆಲೆಯನ್ನು ತಿಳಿದ ಹಾಲಭಾವಿ ತಮ್ಮ ಜೀವನವನ್ನು ಕಲಾಮಯವಾಗಿ ಮಾಡಿಕೊಂಡಿರುವರು ಎಂಬ ವಾಕ್ಯಗಳಿಂದ ಪ್ರಾರಂಭವಾಗಿರುವ ಈ ಗ್ರಂಥದಲ್ಲಿ ಹಾಲಭಾವಿಯವರ ಜನನ, ಬಾಲ್ಯ ಪರಿಸರ, ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ, ಮುಂಬೈ ಕಲಾಶಿಕ್ಷಣ, ಧಾರವಾಡಕ್ಕೆ ಬಂದು ನೆಲೆಸಿ ಕಲಾಶಾಲೆಯ ಸ್ಥಾಪನೆ, ಅವರಿಗೆ ಲಭಿಸಿದ ಪ್ರಶಸ್ತಿಗಳು, ಕಾರ್ಯಚಟುವಟಿಕೆಗಳು ಈ ಮುಂತಾದ ವಿವರಗಳನ್ನು ಎಸ್. ಕೆ. ಹೂಗಾರರವರು ಪ್ರಸ್ತಾಪಿಸಿದ್ದಾರೆ.

ಬ. **"ವೀರಭದ್ರಪ್ಪ ಹಾಲಭಾವಿ"** ಎಂಬ ಗ್ರಂಥದಲ್ಲಿ ಡಿ.ವಿ.ಹಾಲಭಾವಿಯವರ ಕುರಿತು ಅವರ ಕಲೆಯಲ್ಲಿ ಮಾಡಿದ ಸಾಧನೆ ಮತ್ತು ಕಲಾಶಾಲೆ ಪ್ರಾರಂಭಿಸಿದ ಮೊದಲಿಗರು ಎಂದು ಸಂಕ್ಷಿಪ್ತವಾದ ಮಾಹಿತಿಯು ಪ್ರಕಟವಾಗಿದೆ.

**ಕ. ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು**

ಡಾ.ಎಸ್.ಸಿ.ಪಾಟೀಲರವರು ಸ್ಕೂಲ ಆಫ್ ಆರ್ಟ ವಜ್ರಮಹೋತ್ಸವ ಸಂದರ್ಭದಲ್ಲಿ ಡಿ.ವಿ.ಹಾಲಭಾವಿಯವರ ಸವಿ ನೆನಪಿಗಾಗಿ ಈ ಕಿರು ಗ್ರಂಥದಲ್ಲಿ ಚಿತ್ರಕಲೆ ಮತ್ತು ವಾಣಿಜ್ಯೋದ್ಯಮ ಚಿತ್ರಕಲೆ ಮತ್ತು ಸಂಗೀತ, ಚಿತ್ರಕಲೆ ಮತ್ತು ಶಿಲ್ಪ, ಚಿತ್ರಕಲೆ ಮತ್ತು ಶಿಕ್ಷಣ ಹೀಗೆ ಹಲವಾರು ಕಲೆಗೆ ಸಂಬಂಧಪಟ್ಟ ವಿಷಯಗಳನ್ನು ಗ್ರಂಥರೂಪದಲ್ಲಿ ಸಂಗ್ರಹಿಸಿದ್ದಾರೆ.

**೨. ಸ್ಮರಣ ಸಂಚಿಕೆಗಳು**

**ಅ. "ಅರವತ್ತರ ಒಸಗೆ"** ಸಂ. ತಾರಾ ಪವಾರ

**"ಅರವತ್ತರ ಒಸಗೆ"** ತಾರಾ ಪವಾರ ಅವರು ಸಂಪಾದಿಸಿದ್ದು, ೧೯೬೮ರಲ್ಲಿ ಧಾರವಾಡದ ಸ್ಕೂಲ ಆಫ್ ಆರ್ಟನ ಸಂಸ್ಥಾಪಕರೂ, ಸುಪ್ರಸಿದ್ಧ ಕಲಾಕಾರರಾದ ಹಾಲಭಾವಿ ದಾನಪ್ಪನವರಿಗೆ ಷಷ್ಟಿಪೂರ್ತಿಯಾಯಿತು ( ೬೦ ತುಂಬಿದವು) ಎಂದು ತಿಳಿದುಬಂದಾಗ ನನಗೆ ಆಶ್ಚರ್ಯವಾಯಿತು. ದಾನಪ್ಪನವರ ಉತ್ಸಾಹ ಕಂಡಾಗಲೆಲ್ಲ ಅವರು ಚಿಕ್ಕ ತರುಣರೆಂದೇ ಅನುಭವವಾಗುವುದು. ಚಿತ್ರ, ಮೂರ್ತಿಗಳಿಗೆ ವಯಸ್ಸಾಗದು. ಹಾಗೆಯೇ ಚಿತ್ರ ಶಿಲ್ಪಿಗಳಿಗೆ ವಯೋವೃದ್ಧರಾದ ತಂದೆಗಳ ರಕ್ಷಣೆಯಲ್ಲಿ ಬೆಳೆದ ಅವರಲ್ಲಿ ಹಸುಳೆಯ ಮುಗ್ಧತೆಯು ಇದೆ ಎಂಬ ವಾಕ್ಯಗಳಿಂದ ಪ್ರಾರಂಭವಾಗಿರುವ ಈ ಕಿರುಗ್ರಂಥದಲ್ಲಿ ಹಾಲಭಾವಿಯವರನ್ನು ಕಲಾಚಾರ್ಯ, ಕಲಾಜೀವಿ,

ಕಲಾಕಮ್ಮಟ, ಕಲಾಪ್ರಸಾದಿ, ಕಲಾದಾನಿ, ಕಲಾರಂಗದಲ್ಲಿ ಗಂಧದ ಕೊರಡಿನಂತೆ ಸವೆಸಿದ ಹಾಲಭಾವಿ, ಕಲಾಕಲ್ಪತರು, ಹೀಗೆ ಅನೇಕ ಸಾಹಿತಿಗಳು, ಕಲಾವಿದರು "ಅರವತ್ತರ ಒಸಗೆ" ಕಿರುಸಂಚಿಕೆಯಲ್ಲಿ ಹಾಲಭಾವಿಯವರನ್ನು ಗುಣಗಾನಮಾಡಿದ್ದಾರೆ.

**ಬ. ಸುವರ್ಣ ಮಹೋತ್ಸವ**

ಹಾಲಭಾವಿಯವರು ಸಾಹಸ ಜೀವಿಗಳು. ಯಾವುದೇ ಪ್ರಸಂಗಕ್ಕೆ ಹೆದರದೆ ಮುನ್ನುಗ್ಗುತ್ತಿರುವುದು ಸಹಜ. ಇಂಥಹ ವ್ಯಕ್ತಿಗಳು ತಮ್ಮ ಜೀವನದ ಸಂಕಲ್ಪ ಸಾಧನಗಳಿಂದ ವ್ಯಕ್ತಿತ್ವವನ್ನು ರೂಪಿಸುವುದುಂಟು. ಇವರಿಗೆ ಜೀವನವು ಒಂದು ಹೋರಾಟದ ಕ್ಷೇತ್ರವಾಗುವುದು. ಸೋಲು ಗೆಲವುಗಳು ಅಂತಿಮವಾಗಿರುವುದಿಲ್ಲ. ಸಂಕಲ್ಪ ಸಾಧನಗಳು ಪ್ರಾಶಸ್ತ್ಯವಾಗಿರುವವು ಇಂತಹ ಸಾಹಸ ಜೀವಿಗಳ ಸಾಲಿನಲ್ಲಿ ಕಲಾವಿದ ಡಿ.ವ್ಹಿ. ಹಾಲಭಾವಿಯವರಿಗೆ ಒಂದು ವಿಶಿಷ್ಟ ಸ್ಥಾನವಿದೆ ಎಂಬ ವಾಕ್ಯಗಳಿಂದ ಈ ಗ್ರಂಥ ಹಾಲಭಾವಿಯವರ ಬಾಲ್ಯ, ಅವರ ಕಲಾಕೃತಿಗಳು, ಕಲಾ ಜೀವನ ಕುರಿತು ಮಾಹಿತಿಗಳಿವೆ.

ಧಾರವಾಡದ ಸ್ಕೂಲ್ ಆಫ್ ಆರ್ಟ್ ೧೯೮೫ರಲ್ಲಿ ಹೊರತಂದ ಹಾಲಭಾವಿಯವರ ಗೌರವ ಅಭಿನಂದನದ ಈ ಗ್ರಂಥದಲ್ಲಿ ಪ್ರೊ. ಸ.ಸ.ಮಾಳವಾಡವರು, ಶ್ರೀ ಮ.ಗು. ಹಂದರಾಳವರು, ಪ್ರೊ. ಡಾ.ಎಸ್. ಸಿ. ಪಾಟೀಲರು, ಎಂ.ಎ. ಚೆಟ್ಟಿಯವರು ಅನೇಕ ಮಹನೀಯರ ಲೇಖನಗಳಿವೆ.

**ಕ. ವಜ್ರ ಮಹೋತ್ಸವ ಚಿತ್ರಾಕ್ಷಿ**

೧೯೯೫ರಲ್ಲಿ ಸ್ಕೂಲ್ ಆಫ್ ಆರ್ಟ್‌ನವರು ಡಾ.ಎಸ್.ಸಿ.ಪಾಟೀಲ ಅವರ ಸಂಪಾದಕತ್ವದಲ್ಲಿ ಪ್ರಕಟಿಸಿದ 'ಚಿತ್ರಾಕ್ಷಿ' ಎಂಬ ಸ್ಮರಣ ಸಂಚಿಕೆಯಲ್ಲಿ ಸುಪ್ರಸಿದ್ಧ ಕಲಾಕಾರರಾದ ಹಾಲಭಾವಿ ದಾನಪ್ಪನವರ ಉತ್ಸಾಹ ಮೂರ್ತಿ ಕಂಡಾಗಲೆಲ್ಲ ಅವರು ಚಿಕ್ಕ ತರುಣರೆಂದು ಅನುಭವವಾಗುವುದು. ನನಗಿಂತ ಅವರು ಬಹಳ ಚಿಕ್ಕವರಲ್ಲ. ೧೯ನೇಯ ಶತಮಾನದ ಕೊನೆಯ ದಶಕದವರೆಗೂ ನಾನು ೨೦ ನೇ ಶತಮಾನದ ಪ್ರಥಮ ದಶಕದವರು ಅವರು ಎಂಬ ವಾಕ್ಯದಿಂದ ಪ್ರಾರಂಭವಾಗುವ ಈ ಗ್ರಂಥದಲ್ಲಿ ಡಾ. ದ.ರಾ. ಬೇಂದ್ರೆಯವರು, ಡಾ. ಪಾಟೀಲ ಪುಟ್ಟಪ್ಪನವರು, ಎನ್. ಕೆ. ಕುಲಕರ್ಣಿಯವರು, ಶ್ರೀ ಜಿ.ಎಸ್.ದಂಡಾವತಿಮಠರವರು ಶ್ರೀಮತಿ ಶಾಂತಾದೇವಿ ಮಾಳವಾಡ, ಡಾ.ಎಸ್.ಸಿ.ಪಾಟೀಲರವರು ಹೀಗೆ ಅನೇಕ ಸಾಹಿತಿಗಳು ಹಾಲಭಾವಿಯವರ ಬಾಲ್ಯ ಪರಿಸರ, ಕಲಾಶಿಕ್ಷಣ, ಕಲಾಕೃತಿಗಳು ಅವರ ಇತರ ಕಾರ್ಯಕ್ಷೇತ್ರಗಳ ಕುರಿತು ಸ್ಪಷ್ಟವಾದ ಮಾಹಿತಿಯನ್ನು ಈ ಗ್ರಂಥದಲ್ಲಿ ದಾಖಲಿಸಿದ್ದಾರೆ.

**ಬಿಡಿ ಲೇಖನಗಳು**

**೧. ಕಲಾವಿದ ಡಿ. ವ್ಹಿ. ಹಾಲಭಾವಿ** : ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಧಾರವಾಡಕ್ಕೊಂದು ವಿಶೇಷ ಪ್ರಾಮುಖ್ಯತೆ ಇದೆ. "ಕಣ್ಮನ ಸೆಳೆಯುವ ಹಸಿರು ಗಿಡಗಳ ಪೊದೆಯ ಮರೆಯಲ್ಲಿ ಕಾಜಾನಕೋಗಿಲೆಗಳ ಇಂಚರ" ಕವಿ ಹೃದಯ ಬಡಿದೆಬ್ಬಿಸಿ ನೂರಾರು ಸುಂದರ ಕಾವ್ಯ ಸೃಷ್ಟಿಗೆ ಕಾರಣವಾಗಿದ್ದಾರೆ. ಸಂಜೆಯ ಹೊಂಗಿರಣ ಮತ್ತು ಬರಿಸುವ ಕೆಂಬಣ್ಣ, ನೂರಾರು ಸುಂದರ ಕನಸುಗಳು ಕ್ಯಾನವಾಸಿನಲ್ಲಿ ರೂಪಗೊಳ್ಳುವಂತೆ ಮಾಡಿವೆ. ಈ ವಾತಾವರಣದಲ್ಲಿ ಕನಸುಗಾರ ಪ್ರಕೃತಿಯ ಪ್ರಿಯ ಹಾಲಭಾವಿಯವರ ಬದುಕು ಇಂದು ಹೆಮ್ಮರವಾಗಿ ಬೆಳೆದುನಿಂತಿವೆ-ಎಂಬ ವಾಕ್ಯದಿಂದ ಪ್ರಾರಂಭವಾಗಿ ಬಾಲ್ಯ, ಶಿಕ್ಷಣ, ಶಿಕ್ಷಕವೃತ್ತಿ, ಸಪ್ತವರ್ಣಗಳ ಗುಂಪು, ಆರ್ಟ್‌ಗಿಲ್ಡ್ ಪತ್ರಿಕೆ, ಇತರ ಕಾರ್ಯಕ್ಷೇತ್ರಗಳ ಬಗ್ಗೆ ಅತ್ಯಂತ ಮೌಲಿಕವಾಗಿ ಮೂಡಿಬಂದಿವೆ.[೧]

**೨. ಮೂವರು ಗಣ್ಯರಿಗೆ ಮೂರು ಪ್ರತಿಷ್ಠಿತ ಪ್ರಶಸ್ತಿಗಳು** : ಧಾರವಾಡ ಹಾಗೂ ಬೆಳಗಾಂವ ಜಿಲ್ಲೆಗಳ ಮೂವರಿಗೆ ಪ್ರತಿಷ್ಠಿತ ಮೂರು ಪ್ರಶಸ್ತಿಗಳು ಸಿಕ್ಕಿವೆ. ಡಿ.ವ್ಹಿ. ಹಾಲಭಾವಿಯವರು ಕಲಾಗುರುಗಳು. ೬೦ ವರ್ಷ

---
೧. ಪ. ಕನ್ನಡ ಭಾರತಿ, ಲೇ. ಡಾ.ಎಸ್.ಸಿ. ಪಾಟೀಲ, ಪ್ರ. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೮೭

ವಯಸ್ಸಿನವರು. ೬೦ ವರ್ಷದ ಹಿಂದೆ ಧಾರವಾಡದಲ್ಲಿ ಲಲಿತಕಲಾ ಶಾಲೆಯನ್ನು ಆರಂಭಿಸಿದರು. ಸಾಂಸ್ಕೃತಿಕ ರಾಜಧಾನಿ ಎನಿಸಿದ ಧಾರವಾಡದ ತಲೆಗೆ ಕಲೆಯ ತುರಾಯಿಯನ್ನು ಹಚ್ಚಿದರು. ಹಾಲಭಾವಿಯವರಿಗೆ ಈ ಸಲದ ಬಹು ಪ್ರತಿಷ್ಠಿತ "ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ" ಲಭಿಸಿದೆ- ಎಂಬ ವಾಕ್ಯದಿಂದ ಪ್ರಾರಂಭವಾಗುವ ಲೇಖನ, ಮುಂದೆ ಅವರ ಕಲಾಭ್ಯಾಸ, ಕಲಾಕ್ಷೇತ್ರಗಳಲ್ಲಿ ಹೆಸರು ಮಾಡಿರುವ ಕುರಿತು ಸಂಕ್ಷಿಪ್ತ ವಿವರಣೆಯಿದೆ.[೨]

**೩. ಸಂದೇಶ ವಾರಪತ್ರಿಕೆ** : ಹಾಲಭಾವಿಯವರು ರಚಿಸಿದ ರಾಜಾ ಲಖಮನಗೌಡರ ತೈಲವರ್ಣದ ಭಾವ ಚಿತ್ರ ಅನಾವರಣ ಸಮಾರಂಭವು ಮುಖ್ಯ ನ್ಯಾಯಾಧೀಶರಾದ ಸರ್ ಲಿಯೋನಾರ್ಡ್ ಸ್ಟೋನ್‌ರವರಿಂದ ಉದ್ಘಾಟನೆಯಾಯಿತು ಎಂಬ ವಾಕ್ಯದಿಂದ ಪ್ರಾರಂಭವಾದ ಈ ಲೇಖನ ಮುಂದೆ ಸಮಾರಂಭದಲ್ಲಿ ಭಾಗವಹಿಸಿದ ವ್ಯಕ್ತಿಗಳ ಕುರಿತು, ಮತ್ತು ಹಾಲಭಾವಿಯವರ ಕುರಿತು ಹೇಳಿದ ಮಾತುಗಳನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.[೩]

**ಕಲಾ ಶಿಕ್ಷಣಕ್ಕೆ ಜೀವನ ಮುಡುಪಾಗಿರಿಸಿದ ಶ್ರೀ ಹಾಲಭಾವಿಯವರು** : ಶಾಲೆಗೆ ಯಾಕೆ ಹೋಗುವುದಿಲ್ಲ ಎಂದು ತಂದೆಯವರಿಂದ ಬಡಿತ ತಿಂದರೆ. ಶಾಲೆಗೆ ನಿಯಮಿತವಾಗಿ ಏಕೆ ಬರುವುದಿಲ್ಲ ಎಂದು ಗುರುಗಳಿಂದ ಆ ಬಾಲಕ ಬಡಿತ ತಿನ್ನುತ್ತಿದ್ದ. ಶಾಲೆಯಲ್ಲಿ ಕಲಿಸುವ ಗಣಿತ, ಭಾಷೆ ಈ ವಿಷಯಗಳನ್ನು ತನ್ನ ತಲೆಗೆ ಹೋಗುವುದಿಲ್ಲವೆಂದಾಗ ಶಾಲೆಗೆ ಏಕೆ ಹೋಗಬೇಕು? ಎಂದು ಬಾಲಕ ಈ ಪೆಟ್ಟುಗಳನ್ನು ಮೌನವಾಗಿಯೇ ಸಹಿಸುತ್ತಿದ್ದ. ಆದರೆ ಡ್ರಾಯಿಂಗ್ ಎಂದ ಕೂಡಲೇ ಬಾಲಕ ಹುರುಪಿನಿಂದ ಕೆಲಸ ಮಾಡುತ್ತಿದ್ದ. ಬಹುಶಃ ಬಾಲಕ ಈ ವಿಷಯದಲ್ಲಿ ತುಂಬಾ ಆಸ್ಥೆ ತೋರಿಸುತ್ತಿದ್ದ. ತಂದೆ-ಗುರುಗಳಿಂದ ಈ ರೀತಿ ಪೆಟ್ಟು ತಿನ್ನಲು ಕಾರಣವಾಗಿರಬೇಕು ಎಂಬ ವಾಕ್ಯದಿಂದ ಪ್ರಾರಂಭವಾಗಿ ಅವರ ಮುಂಬೈ ಕಲಾಶಿಕ್ಷಣ, ಕಲಾಶಾಲೆ ಪ್ರಾರಂಭದ ಬಗ್ಗೆ ಲೇಖನದಲ್ಲಿ ಸಂಕ್ಷಿಪ್ತವಾದ ಮಾಹಿತಿ ನೀಡಿದ್ದಾರೆ.[೪]

**ಕಲಾವಿದ ಶ್ರೀ ಹಾಲಭಾವಿಯವರಿಗೆ ಆತ್ಮೀಯ ಸನ್ಮಾನ** : ಜನರು ಮೆಚ್ಚಲಿ ಬಿಡಲಿ, ಚಿತ್ರ ಬರೆಯುವುದು ನನ್ನ ಕೆಲಸ. ನಾನು ಬರೆಯುತ್ತಾ ಹೋಗುತ್ತೇನೆ ಎಂದು ಕಲಾವಿದ ಡಿ. ವ್ಹಿ. ಹಾಲಭಾವಿ ಅವರಿಗೆ ಅರವತ್ತು ತುಂಬಿದ ಸಂದರ್ಭದಲ್ಲಿ ಅವರಿಗೆ ಶುಭಕೋರಲು ಸೇರಿದ್ದ ಸಭೆಯಲ್ಲಿ ಹಾಲಭಾವಿಯವರು ಹೇಳಿದರು ಎಂಬ ವಾಕ್ಯದಿಂದ ಪ್ರಾರಂಭವಾಗಿ ಮುಂದೆ ಅನೇಕ ಕಲಾವಿದರ ಕುರಿತು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.[೫]

**ಚಿತ್ರಕಲಾ ನೈಪುಣ್ಯರಾದ ಶ್ರೀ ಡಿ,ವಿ. ಹಾಲಭಾವಿ** : ಕಲೆಗೆ ಭಾಷೆ ಪರಿಮಿತಿಯಿಲ್ಲ. ಧಾರ್ಮಿಕ ಪರಿಮಿತಿಯೂ ಇಲ್ಲ ಅಥವಾ ರಾಷ್ಟ್ರಬಂಧನವೂ ಇಲ್ಲ. ಕಲಾವಿದನು ತನ್ನ ಕುಂಚದಿಂದಲೂ, ಸೀಸದ ಕಡ್ಡಿಯಿಂದಲೂ ಗೆರೆಯನ್ನು ಎಳೆದಾಕ್ಷಣ ಪ್ರಕೃತಿಯ ದೇವಿ ಮೂರ್ತಗೊಳ್ಳುತ್ತಾಳೆ. ಕಲಾವಿದನ ಕುಂಚ ರೇಖೆ ರೋಮಾಂಚಕಾರಿ ಶಿಕ್ಷಣವನ್ನಿತ್ತು ಮನವನ್ನು ರಂಜಿಸುತ್ತದೆ. ಕಲಾಕೃತಿಯು ಚೇತೋಹಾರಿಯಾಗಿ ಮಾನವ ಪ್ರಜ್ಞೆಗೆ ಆಮಂತ್ರಣವಿತ್ತು ಹೊಸ ಸಮಾಜ, ಹೊಸ ಜೀವನಕ್ಕೆ ಹಾದಿ ಮಾಡಿಕೊಡುತ್ತದೆ. ಅಷ್ಟೇ ಅಲ್ಲ ಕಲೆಯು ವಿಶ್ವ ವ್ಯಾಪಿಯಾಗಿ ಕಲಾವಿದನನ್ನು ವಿಶ್ವ ಮಾನವನನ್ನಾಗಿಸುತ್ತದೆ. ಈ ಅಭಿಪ್ರಾಯ ಅಕ್ಷರಶಹ ಶ್ರೀ ಡಿ. ವಿ. ಹಾಲಭಾವಿಯವರಿಗೆ ಅನ್ವಯಿಸುತ್ತದೆ ಎಂಬ ವಾಕ್ಯದಿಂದ ಪ್ರಾರಂಭವಾಗಿ ಅವರ ಜನನ, ಕಲಾಶಿಕ್ಷಣ ಕಲಾಕೃತಿಗಳ ಬಗ್ಗೆ ಸಂಕ್ಷಿಪ್ತ ವಿವರಣೆಯಿದೆ.[೬]

**ಹಿರಿಯ ಕಲಾವಿದ ದಾನಪ್ಪ ವೀ. ಹಾಲಭಾವಿಯವರು** : ಧಾರವಾಡದಲ್ಲಿ ೧೯೦೭ರಲ್ಲಿ ಜನಿಸಿದ ಹಾಲಭಾವಿಯವರು, ಮುನುಸೂಫ್ ವೀರಭದ್ರಪ್ಪ, ತಾಯಿ ಧಾರ್ಮಿಕ ಮನೋವೃತ್ತಿಯವರು. ಚಿಕ್ಕಂದಿನಿಂದಲೇ ದಾನಪ್ಪ ಹಾಲಭಾವಿಯವರು ನಾಶಿಕದ ಬುದ್ಧ ಗವಿ, ಹೊಳಲ್ಕೇರಿ ಅರಮನೆ, ಓಂಕಾರೇಶ್ವರ ದೇವಸ್ಥಾನ, ನರ್ಮದಾ ನದಿತೀರದ ನಿಸರ್ಗ ಸೌಂದರ್ಯ ವೀಕ್ಷಿಸಿದರು ಎಂಬ ವಾಕ್ಯದಿಂದ ಪ್ರಾರಂಭವಾಗಿ ಮುಂದೆ

೨. ಪ್ರಪಂಚ ವಾರ ಪತ್ರಿಕೆ, ೧೯೯೬
೩. ಸಂ.ಚಿಕ್ಕೋಡಿ ಅನಂತರಾಯರು ೧೯೪೪
೪. ಪ. ಕರ್ಮವೀರ ಲೇ.ಎಸ್.ವಿ. ಪಾಟೀಲ ೧೯೬೮
೫. ಪ. ವಿಶ್ವವಾಣಿ ೧೯೭೭
೬. ಪ. ಕನ್ನಡಿಗ ೧೯೮೧

ಅವರ ಕಲಾಶಿಕ್ಷಣ, ಗ್ರಂಥಗಳು, ಕಲಾಶಾಲೆ ಸ್ಥಾಪನೆ ಹೀಗೆ ಹಾಲಭಾವಿಯವರ ಅನೇಕ ಆಯಾಮಗಳ ವಿಷಯಗಳನ್ನು ಸಂಕ್ಷಿಪ್ತವಾಗಿ ಈ ಲೇಖನಗಳಲ್ಲಿ ವಿವರಿಸಲಾಗಿದೆ.[೭]

**ಕನ್ನಡನಾಡಿನ ಹೆಮ್ಮೆಯ, ಶ್ರೇಷ್ಠ ಕಲಾವಿದ ಶ್ರೀ ಡಿ. ವಿ. ಹಾಲಭಾವಿ, ಕರ್ನಾಟಕ ವಿ. ವಿ. ಯಕ್ಕೆ ಯಾವ ಕಾಮಣಿಯಾಗಿದೆ? ಇಂತವರಿಗೆ ಡಾಕ್ಟರೇಟ್ ಗೌರವ ಪದವಿಕೊಡಲಿ :** ಕನ್ನಡ ನಾಡಿನ ಶ್ರೇಷ್ಠ ಚಿತ್ರಕಲಾವಿದರಾಗಿರುವ ೭೫ ವರ್ಷದ ಡಿ. ವಿ ಹಾಲಭಾವಿಯವರು ಈ ನಾಡಿನ ಬಹು ದೊಡ್ಡ ಸ್ವತ್ತಾಗಿದ್ದಾರೆ. ನಾಡಿನ ಸುಪುತ್ರರಲ್ಲಿ ಇವರೂ ಒಬ್ಬರು. ಮುಂಬೈ ಇಲಾಖೆಯ ವಿವಿಧ ಹುದ್ದೆಗಳಲ್ಲಿದ್ದ ಇವರ ತಂದೆಯವರ ಜೊತೆ ಶ್ರೀ ಡಿ.ವಿ. ಹಾಲಭಾವಿಯವರು ಆಗಾಗ ಸಂಚರಿಸುವುದರ ಫಲವಾಗಿ ಅನೇಕ ಐತಿಹಾಸಿಕ ಮಂದಿರಗಳನ್ನು, ಅರಮನೆಗಳನ್ನು, ಬುದ್ಧಗವಿಗಳನ್ನು, ಮುಂತಾದ ಸ್ಥಳಗಳನ್ನು ನೋಡಲು ಸಾಧ್ಯವಾಗಿತ್ತು ಎಂಬ ವಾಕ್ಯದಿಂದ ಪ್ರಾರಂಭವಾದ ಈ ಲೇಖನ ಅವರ ಕಲಾಭ್ಯಾಸ, ಕಲಾಕೃತಿಗಳು, ಕಲಾಶಾಲೆ ಪ್ರಾರಂಭ ಹೀಗೆ ಹಾಲಭಾವಿಯವರು ಮಾಡಿದ ಅಪೂರ್ವವಾದ ಸೇವೆಯನ್ನು ಕಂಡರೂ ಕರ್ನಾಟಕ ವಿಶ್ವವಿದ್ಯಾಲಯ ಡಾಕ್ಟರೇಟ್ ಪದವಿ ಏಕೆ ನೀಡಬಾರದೆಂದು ಪ್ರಶ್ನಿಸಿದ್ದಾರೆ.[೮]

**ವಿಭಿನ್ನ ಕ್ಷೇತ್ರಗಳಲ್ಲಿ ಸೇವೆಗೈದ ಇಬ್ಬರು ಪ್ರಾತಃಸ್ಮರಣೀಯರು :** ಡಿ. ವಿ. ಹಾಲಭಾವಿಯವರು ೧೯೩೫ ರಲ್ಲಿ ಚಿತ್ರಕಲಾ ಬೆಳವಣಿಗೆಗಾಗಿ ಚಿತ್ರಕಲಾ ಶಾಲೆಯನ್ನು ಧಾರವಾಡದಲ್ಲಿ ಸ್ಥಾಪಿಸಲಾಯಿತು. ಈ ಸಂಸ್ಥೆಯ ಸಂಸ್ಥಾಪಕರಾಗಿದ್ದ ಡಿ. ವಿ. ಹಾಲಭಾವಿ ೧೯೦೭ರಲ್ಲಿ ಧಾರವಾಡದಲ್ಲಿ ಜನಿಸಿದರು. ೧೯೧೭ರಲ್ಲಿ ಎಲಿಮೆಂಟರಿ ಇಂಟರ್ ಮಿಡಿಯೇಟ್ ಡ್ರಾಯಿಂಗ್ ಗ್ರೇಡ್ ಪರೀಕ್ಷೆ ಪಾಸಾದರು ಎಂಬ ವಾಕ್ಯದಿಂದ ಪ್ರಾರಂಭವಾದ ಈ ಲೇಖನ ಮುಂದೆ ಮುಂಬೈ ಕಲಾಶಿಕ್ಷಣ, ನಂತರ ಚಿತ್ರಕಲಾ ಶಿಕ್ಷಕರಾಗಿ ಸೇವೆ ಸಲ್ಲಿಸಿದ ಅವರ ಸೇವೆ, ಅವರ ಕಲಾಕೃತಿಗಳ ರಚನೆ ಹೀಗೆ ಕಲಾಕ್ಷೇತ್ರದಲ್ಲಿಯ ಸಾಧನೆಯ ಕುರಿತು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.[೯]

**ಕರ್ನಾಟಕಕ್ಕೊಂದು ಕಲಾದೇಗುಲವನ್ನು ಕಟ್ಟಿದ ರಸ ಶಿಲ್ಪಿ ಪೂಜ್ಯ ದಾನಪ್ಪ ಹಾಲಭಾವಿಯವರು :** ಸರಿಯಾಗಿ ತೊಂಬತ್ತು ವರ್ಷಗಳ ತುಂಬು ಜೀವನ ನಡೆಸಿ ತಮ್ಮ ಕಲಾಕೃತಿಗಳನ್ನು ಅಸಂಖ್ಯ ವರ್ಣಚಿತ್ರಗಳನ್ನು ನಿರ್ಮಿಸಿ ಕಲಾ ಜಗತ್ತಿಗೆ ನೀಡಿ ಇಹದಿಂದ ನಿರ್ಗಮಿಸಿದ ನಮ್ಮ ಚಿತ್ರಕಲಾಕ್ಷೇತ್ರದ ಜಕ್ಕಣ್ಣರು ಲಿಂಗೈಕರಾಗಿ ಸರಿಯಾಗಿ ಒಂದು ವರ್ಷವಾಯಿತು ಎಂಬ ವಾಕ್ಯದಿಂದ ಪ್ರಾರಂಭವಾಗಿ ಹಾಲಭಾವಿಯವರ ಬದುಕು ಮತ್ತು ಕಲಾಜೀವನ, ಕಲಾಶಿಕ್ಷಕ, ಕಲಾಶಾಲೆ ಹೀಗೆ ಅವರ ಸಾಧನೆ ಕುರಿತು ಸಂಕ್ಷಿಪ್ತವಾಗಿ ವಿವರಣೆ ನೀಡಿದ್ದಾರೆ.[೧೦]

**Dharwad Art School a quiet success :** Dharwar is a capital of culture It has porduced meny top level musicians like Bhimsen Joshi, Basavaraj Rajguru, Mallikarjun Mansoor, Balagandharva, Gangubai Hangal, famous poets, like Dr. Da.Ra.Bendre, Shamba Joshi, Betageri Krishna Sharma and D.V.Halbhavi, Dandavathimath, Minijagi etc. in the field of art ಎಂಬ ವಾಕ್ಯದಿಂದ ಪ್ರಾರಂಭವಾದ ಈ ಲೇಖನದಲ್ಲಿ ಅವರ ಜನನ, ಸಂಸ್ಕೃತಿ, ಮುಂಬೈಯಲ್ಲಿಯ ಕಲಾಶಿಕ್ಷಣ, ಅವರ ಅಸಂಖ್ಯ ಕಲಾಕೃತಿಗಳ ವಿಶ್ಲೇಷಣೆ, ಅವರ ಕಲಾ ಶಾಲೆಯ ಬಗ್ಗೆ ಹಾಗೂ ಅವರು ಇತರ ಕಾರ್ಯಕ್ಷೇತ್ರಗಳಲ್ಲಿ ಸಾಧನೆಯ ಕುರಿತು ಈ ಲೇಖನದಲ್ಲಿ ಮಾಹಿತಿ ನೀಡಿದ್ದಾರೆ.[೧೧]

**ಚಿತ್ರಕಲಾ ಪ್ರಪಂಚದ ರಸಋಷಿ ಡಿ.ವಿ.ಹಾಲಭಾವಿ :** ಸಾಂಸ್ಕೃತಿಕ ಕೇಂದ್ರವಾದ ಧಾರವಾಡ ಸಾಹಿತ್ಯ ಹಾಗೂ ಸಂಗೀತ ಕ್ಷೇತ್ರಗಳಲ್ಲಿ ಹೆಸರು ಮಾಡಿರುವುದಕ್ಕೆ ಹಲವಾರು ವ್ಯಕ್ತಿಗಳನ್ನು ಉಲ್ಲೇಖಿಸಬಹುದು. ಸಾಹಿತಿಗಳನ್ನು ಕುರಿತು, "ಧಾರವಾಡದ ಬಸ್ ನಿಲ್ದಾಣದಲ್ಲಿ ನಿಂತು ಕಲ್ಲು ಹೊಡೆದರೆ ಅದು ಸಾಹಿತಿಗೆ ತಗಲುತ್ತದೆ" ಎಂದು

೭. ವಿಶಾಲ ಕರ್ನಾಟಕ ೧೯೮೧ ಲೇ. ಕಲಾಪ್ರಿಯ ಹುಬ್ಬಳ್ಳಿ
೮. ಪ. ಪ್ರಜಾಜ್ಯೋತಿ, ವಾರ ಪತ್ರಿಕೆ ೧೯೮೧, ಸಂ. ಜಿ.ಎಸ್. ಉಮದಿ
೯. ಪ. ಸಂಯುಕ್ತ ಕರ್ನಾಟಕ, ಲೇ. ವಿಜಯಾನಂದ ಕಾಲವಾಡ
೧೦. ಮಲ್ಲಿಗೆ(ವಾರ ಪತ್ರಿಕೆ) ಲೇ. ಎನ್. ಕೆ. ಕುಲಕರ್ಣಿ ೧೯೯೯
೧೧.By. Pramila B. Kunnur, Deccan Herald, 1986

ಹಿರಿಯ ಸಾಹಿತಿಯೊಬ್ಬರು ತಮಾಷೆ ಮಾಡುತ್ತಿದ್ದರು. ಸಂಗೀತ ಕ್ಷೇತ್ರದಲ್ಲಿ ಧಾರವಾಡ ಜಿಲ್ಲೆ ಸವಾಯಿ ಗಂಧರ್ವರು, ಡಾ. ಮಲ್ಲಿಕಾರ್ಜುನ ಮನ್ಸೂರ, ಬಸವರಾಜ ರಾಜಗುರು ಹಾಗೂ ಡಾ. ಶ್ರೀಮತಿ ಗಂಗೂಬಾಯಿ ಹಾನಗಲ್ ಮತ್ತು ಹಲವರು ತಮ್ಮ ಸಾಧನೆಗೆ ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಮಟ್ಟದಲ್ಲಿ ಪರಿಚಿತರಾಗಿದ್ದಾರೆ. ಈ ಪ್ರತಿಭಾವಂತ ವ್ಯಕ್ತಿಗಳ ಸಾಲಿನಲ್ಲಿ ಚಿತ್ರಕಲೆಯ ಕ್ಷೇತ್ರದಲ್ಲಿ ಕಲಾಚಾರ್ಯ ಶ್ರೀ ದಾನಪ್ಪ ವೀರಭದ್ರಪ್ಪ ಹಾಲಭಾವಿ ಹಾಗೂ ಅವರ ಸ್ಕೂಲ್ ಆಫ್ ಆರ್ಟ್‌ನ್ನು ಸೇರಿಸುವುದು ಸಮಂಜಸವಾಗುತ್ತದೆ ಎಂಬ ವಾಕ್ಯದಿಂದ ಪ್ರಾರಂಭವಾಗಿ, ಹಾಲಭಾವಿಯವರ ಕಲಾಕ್ಷೇತ್ರದಲ್ಲಿ ಸಾಧನೆ ಕುರಿತು, ಮತ್ತು ಅವುಗಳ ಸಂಗ್ರಹ ಕುರಿತು ಈ ಲೇಖನದಲ್ಲಿ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.[೧೨]

---

೧೨.ಪ. ಜನಪದ ಮಾಸಿಕ ಲೇ. ಮೋಹನ ಭದ್ರಾಪುರ ೧೯೯೬



ಧಾರವಾಡದ ಪರಿಸರ ಅನೇಕ ಸೃಜನಶೀಲರಿಗೆ ನೆಲೆ ಒದಗಿಸಿಕೊಟ್ಟ, ಸೃಜನಶೀಲತೆಗೆ ಪ್ರೇರಣೆ ನೀಡಿದ ನೆಲ. ಈ ನೆಲದಲ್ಲಿ ಬೆಳೆದವರು ಡಿ.ವಿ.ಹಾಲಭಾವಿಯವರು. ಹಾಲಭಾವಿಯವರ ಸಾಧನೆಯ ಪರ್ವ ಈ ನೆಲದಲ್ಲಿ ಹುಟ್ಟಿ ಈ ನೆಲದಲ್ಲಿ ಅಂತ್ಯಗೊಳ್ಳುವ ಬಗೆಯನ್ನು ಇಂದು ನಾವು ನೋಡಬಹುದಾಗಿದೆ. ಅಂತ್ಯ ಎಂಬುದಕ್ಕೆ ಹಲವು ಬಗೆಯ ಅರ್ಥವನ್ನು ನೀಡಬಹುದಾಗಿದೆ. ಹಾಲಭಾವಿಯವರು ಸೃಷ್ಟಿಸಿದ್ದು ಸಾಕಷ್ಟು, ಆದರೆ.... ಲಭ್ಯವಾಗುವುದು ಎಳ್ಳಷ್ಟು. ಅವರ ಬದುಕಿನ ಸಾಹಸಗಾಥೆಯನ್ನು ಹೇಳುವ ಕಲಾಶಾಲೆ ಬೇರೆ ಕಾರಣಗಳಿಗಾಗಿ ತನ್ನ ನಿಜ ಸ್ವರೂಪವನ್ನು ಬದಲಿಸಿಕೊಂಡಿದೆ. ಇನ್ನು... ಅವರ ಎಷ್ಟೋ ಕಲಾಕೃತಿಗಳು ಮಣ್ಣಲ್ಲಿ ಒಂದಾಗಿವೆ. ಉಳಿದಿದ್ದು ಕೆಲವು ಮಾತ್ರ ! ಅವೇ ಈ ಅಧ್ಯಯನದ ಆಹಾರ.

ಕನ್ನಡದ ನೆಲದಲ್ಲಿ ಆಗಿಹೋದ ಕಲಾವಿದರೋ ಸಾವಿರಾರು ಜನ. ಚಿರಸ್ಥಾಯಿಯಾದವರು ಕೆಲವು ಜನ! ಅವರಲ್ಲಿ ಡಿ.ವಿ.ಹಾಲಭಾವಿಯವರೂ ಕೂಡ ಒಬ್ಬರು. ಹಾಲಭಾವಿ ಕೇವಲ ಒಬ್ಬ ವ್ಯಕ್ತಿಯಾಗಿ ಗೋಚರವಾಗಲಿಲ್ಲ. ಶಕ್ತಿಯಾಗಿ ಗೋಚರವಾದದ್ದು ಅವರ ಸೃಜನಶೀಲತೆಯಲ್ಲಿ, ಸಂಘಟನೆಯ ಚಾತುರ್ಯದಲ್ಲಿ. ಕಲೆಯ ಗಂಧ ಗಾಳಿ ಇಲ್ಲದ ಸ್ವಾತಂತ್ರ್ಯೋತ್ತರ ಕಾಲದ ಧಾರವಾಡಲ್ಲಿ ಕಲಾಶಾಲೆಯನ್ನು ಹುಟ್ಟು ಹಾಕಿದ ಹಾಲಭಾವಿ ಸಾಹಸಕ್ಕೆ "ಹಾಳುಭಾವಿಗೆ ಬಿದ್ದ" ಎಂದು ಮೂಗು ಮುರಿದವರು ಬಹಳಷ್ಟು. ಮೂಗು ಮುರಿಯುವವರ ಮಧ್ಯೆಯೇ ಹೆಮ್ಮರವಾಗಿ ಬೆಳೆದು ನಿಂತಿತು "ಸ್ಕೂಲ ಆಫ್ ಆರ್ಟ್".

ಕನ್ನಡದ ನೆಲದ ದುರಂತವೋ ಏನೋ.. ಈ ನೆಲದ ಕಲಾವಿದರು ಎಷ್ಟೇ ಪ್ರತಿಭಾವಂತರಾಗಿದ್ದರೂ ಕೂಡ ಅವರನ್ನು ಚಿರಸ್ಥಾಯಿಯನ್ನಾಗಿಸುವ ಕಾರ್ಯ ಕನ್ನಡಿಗರಿಂದ ಆಗಿಲ್ಲವೆಂದು ದಿಟ್ಟತನದಿಂದ ಹೇಳಬಹುದು. ಹಿಂದಿನ ಶತಮಾನದ ಸುಮಾರು ೭೦ರದಶಕದಲ್ಲಿ ಕಲಾವಿದರ ಕುರಿತು ಪರಿಚಯಾತ್ಮಕ ಗ್ರಂಥಗಳನ್ನು ಲಲಿತಕಲಾ ಅಕಾಡೆಮಿ ಪ್ರಕಟಿಸಿದ್ದೇ ಅದ್ಭುತ ಸಾಧನೆಯಾಯಿತು. ಪಾಶ್ಚಾತ್ಯರಲ್ಲಿಯಂತೆ ಸಮಗ್ರವಾಗಿ ಕಲಾವಿದರ ಕಲಾಕೃತಿಗಳನ್ನು ದಾಖಲಿಸುವ ಕಾರ್ಯ ನಮ್ಮಲ್ಲಿ ನಡೆದದ್ದು ತುಂಬ ಅಪರೂಪ.

ಆದರೆ ೯೦ ರದಶಕದ ಆರಂಭದಲ್ಲಿ ಕಲೆಯ ಕುರಿತಾದ ಸಂಶೋಧನಾತ್ಮಕ ಪ್ರಬಂಧಗಳು ಮೆಲ್ಲ ಮೆಲ್ಲಗೆ ಬೆಳಕಿಗೆ ಬರುತ್ತಲಿವೆ. ಕಾರಣ ಕನ್ನಡ ವಿಶ್ವವಿದ್ಯಾಲಯದಲ್ಲಿ ಲಲಿತಕಲೆಯ ಕುರಿತು ಸ್ನಾತಕೋತ್ತರ ಪದವಿ ತರಗತಿಗಳು ಪ್ರಾರಂಭವಾಗಿ, ಪಿಹೆಚ್.ಡಿ. ಅಧ್ಯಯನಕ್ಕೆ ತಾತ್ವಿಕವಾಗಿ ಒಪ್ಪಿಗೆ ದೊರೆತ ಮೇಲೆ ಸಂಪ್ರಬಂಧಗಳು,

ಮಹಾಪ್ರಬಂಧಗಳು ಗೋಚರವಾಗುತ್ತಲಿವೆ. ಹೀಗೆ ಗೋಚರವಾಗುತ್ತಿರುವ ಪ್ರಬಂಧಗಳಲ್ಲಿ ಡಿ.ವಿ.ಹಾಲಭಾವಿಯವರ ಪ್ರಬಂಧವೂ ಒಂದು.

ಹಾಲಭಾವಿಯವರು ತಮ್ಮ ವೃತ್ತಿಯೊಂದಿಗೆ ಹಲವಾರು ಪ್ರವೃತ್ತಿಗಳನ್ನು ಮೈಗೂಡಿಸಿಕೊಂಡುವರು. ಕೇವಲ ಒಬ್ಬ ಕಲಾಶಿಕ್ಷಕನಾಗದೇ ಜೊತೆಗೆ ಕಲಾವಿದರಾಗಿ, ಕಲಾವಿಮರ್ಶಕರಾಗಿ, ಸಂಘಟಕರಾಗಿ ಮತ್ತು ಶಾಲೆಯೊಂದರ ಸ್ಥಾಪಕರಾಗಿ ನಮ್ಮ ನಡುವೆ ಬಾಳಿದವರು. ಚಿತ್ರಕಲೆಯ ಬೆಳವಣಿಗೆಗೆ ಅವರು 'ಆರ್ಟ್‌ಗಿಲ್ಡ್' ಎಂಬ ಮಾಸ ಪತ್ರಿಕೆಯನ್ನು ಕನ್ನಡ ಮತ್ತು ಆಂಗ್ಲ ಭಾಷೆಗಳಲ್ಲಿ ಪ್ರಕಟಿಸುತ್ತಿದ್ದರು. 'ಕಾಂಟೆಂಪರರಿ ಆರ್ಟಿಸ್ಟ್' ಎಂಬ ಗ್ರಂಥವನ್ನು ಬರೆದರು.ಇಂತಹ ಹತ್ತು ಹಲವು ಕ್ಷೇತ್ರಗಳೊಂದಿಗೆ ತೊಡಗಿಸಿಕೊಂಡು ಚಿತ್ರಕಲಾ ಕ್ಷೇತ್ರದಲ್ಲಿ ಅತ್ಯಂತ ಉನ್ನತ ಮಟ್ಟದ ಸಾಧನೆಗೈದ ಹಿರಿಯ ಕಲಾವಿದ ಡಿ.ವಿ.ಹಾಲಭಾವಿಯವರ ಜೀವನ, ಸಾಧನೆಯ ಹಾದಿ, ಚಿತ್ರಕಲಾಕ್ಷೇತ್ರಕ್ಕೆ ಅವರು ನೀಡಿದ ಕೊಡುಗೆಯನ್ನು ದಾಖಲೀಕರಣ ಮಾಡುವ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ಎರಡು : ಡಿ.ವಿ.ಹಾಲಭಾವಿಯವರ ಬದುಕು ಮತ್ತು ಕಲಾಜೀವನ** ಈ ಅಧ್ಯಾಯದಲ್ಲಿ ಹಾಲಭಾವಿಯವರ ಬಾಲ್ಯಜೀವನ, ಅವರ ಜನ್ಮಸ್ಥಳದ ಸಾಂಸ್ಕೃತಿಕ ಪರಿಸರ ತಂದೆ ತಾಯಿಯ ಕೌಟುಂಬಿಕ ಹಿನ್ನೆಲೆ,ಪ್ರಾಥಮಿಕ ಮತ್ತು ಪ್ರೌಢಶಿಕ್ಷಣದ ಹಂತಗಳ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ. ೧೯೧೭ರಲ್ಲಿ ಪೋ ಖಾನಾದೇಶ ಜಳಗಾವದಿಂದ ಎಲಿಮೆಂಟರಿ ಡ್ರಾಯಿಂಗ್ ಗ್ರೇಡ್ ಪರೀಕ್ಷೆಯನ್ನು ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದರು. ನಂತರ ಉನ್ನತ ವ್ಯಾಸಂಗಕ್ಕಾಗಿ ಮುಂಬೈನ ಸರ್.ಜೆ.ಜೆ.ಸ್ಕೂಲ್ ಆಫ್ ಆರ್ಟ್ ಕಲಾಶಾಲೆಯನ್ನು ಸೇರಿ ಡ್ರಾಯಿಂಗ್ ಮತ್ತು ಪೇಂಟಿಂಗ್ ವಿಷಯ ಆರಿಸಿಕೊಂಡು ಅಧ್ಯಯನ ಮಾಡಿದರು. ಅಲ್ಲಿ ಖ್ಯಾತ ಚಿತ್ರ ಕಲಾವಿದರಾದ ಶ್ರೀಕೆ.ಬಿ.ತಾಸ್ಕರ್, ಶ್ರೀಎಮ್.ವಿ.ಧುರಂಧರ್ ಇವರು ಹಾಲಭಾವಿಯವರ ಕಲಾಗುರುಗಳಾಗಿದ್ದರು. ಯುರೋಪಿಯನ್ ಡೈರೆಕ್ಟರ್‌ರಾದ ಕ್ಯಾಪ್ಟನ್ ಗ್ಲ್ಯಾಡಸನ್ ಸಾಲೋಮನ್‌ರವರು ಪ್ರಾಚಾರ್ಯರಾಗಿದ್ದು ಅವರ ಮಾರ್ಗದರ್ಶನದಲ್ಲಿ ಯಾವ ರೀತಿ ಚಿತ್ರಕಲಾ ಅಭ್ಯಾಸವನ್ನು ಕಟ್ಟುನಿಟ್ಟಾಗಿ ಮಾಡಿದರು ಎಂಬುದರ ಬಗ್ಗೆ ಹೇಳುವುದರ ಜೊತೆಗೆ ಆಗಿನ ಕಾಲದ ಪಠ್ಯಕ್ರಮ, ಅಧ್ಯಾಪಕ ವರ್ಗ ಅವರು ಚಿತ್ರಗಳನ್ನು ರಚಿಸುವ ಶೈಲಿ ಅಲ್ಲಿಯ ಕಲಾವಾತಾವರಣ, ಚಿತ್ರಪ್ರದರ್ಶನದ ರೀತಿ, ಮುಂತಾದ ವಿವರಣೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅಲ್ಲದೆ ಆಗ ಅಲ್ಲಿ ಕರ್ನಾಟಕದ ಏಳು ಜನ ಕಲಾವಿದರು ಶ್ರೇಷ್ಠ ದರ್ಜೆಯ ಕಲಾವಿದರೆಂದು ಹೆಸರುವಾಸಿಯಾಗಿದ್ದರು. ಅವರಲ್ಲಿ ಹಾಲಭಾವಿಯವರು ಒಬ್ಬರು.ಇಲ್ಲಿಸಪ್ತವರ್ಣ ಕಲಾವಿದರ ಬಗ್ಗೆ ವಿವರಣೆ ನೀಡಲಾಗಿದೆ.

**ಅಧ್ಯಾಯ ಮೂರು : ಹಾಲಭಾವಿಯವರು ಮತ್ತು ಕಲಾಶಾಲೆ (ಸ್ಕೂಲ್ ಆಫ್ ಆರ್ಟ್)** ಈ ಅಧ್ಯಾಯದಲ್ಲಿ ಹಾಲಭಾವಿಯವರು ಮುಂಬೈನ ಸರ್.ಜೆ.ಜೆ.ಸ್ಕೂಲ್ ಆಫ್ ಆರ್ಟ್‌ನಲ್ಲಿ ಡಿಪ್ಲೋಮಾ ಮುಗಿಸಿಕೊಂಡು ಧಾರವಾಡಕ್ಕೆ ಬಂದು ಮೊಟ್ಟ ಮೊದಲು ಕರ್ನಾಟಕದಲ್ಲಿ ಚಿತ್ರಕಲಾಶಾಲೆಯನ್ನು ಪ್ರಾರಂಭಿಸಿದ ವಿವರಣೆಯನ್ನು ನೀಡಲಾಗಿದೆ. ಕಲಾಶಾಲೆಯನ್ನು ಸ್ಥಾಪಿಸುವುದರ ಜೊತೆಗೆ ಕಲೆಯ ಬೆಳವಣಿಗೆಗೆ ಹಾಗೂ ಪುರೋಭಿವೃದ್ಧಿಗೋಸ್ಕರ ಶ್ರಮಿಸಿದ ವಿವರಗಳನ್ನು ಇಲ್ಲಿ ದಾಖಲಿಸಲಾಗಿದೆ. ಇಲ್ಲಿ ಹಾಲಭಾವಿಯವರ ಚಿತ್ರಕಲಾ ವಿದ್ಯಾರ್ಜನೆಯಿಂದ ವಿದ್ಯಾರ್ಥಿಗಳ ಮೇಲಾದ ಪ್ರಭಾವದ ಬಗ್ಗೆ ವಿವರಣೆ ನೀಡಲಾಗಿದೆ. ಹಾಲಭಾವಿಯವರ ವೃತ್ತಿ ಹಾಗೂ ಕಲಾ ಬದುಕಿನ ಮಹತ್ವದ ವಿವರಗಳನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ನಾಲ್ಕು : ಡಿ.ವಿ ಹಾಲಭಾವಿಯವರ ಕಲಾಕೃತಿಗಳ ಹರವು** ಪ್ರಸ್ತುತ ಅಧ್ಯಾಯದಲ್ಲಿ ಹಾಲಭಾವಿಯವರು ತಮ್ಮ ಶೈಕ್ಷಣಿಕ ಬದುಕಿನ ಮಧ್ಯದಲ್ಲಿ ರಚಿಸಿದ ರೇಖಾಚಿತ್ರಗಳ ಮತ್ತು ವರ್ಣಚಿತ್ರಗಳ ಕುರಿತಾದ ವಿಶ್ಲೇಷಣೆ ಮಾಡಲಾಗಿದೆ. ಇದರಲ್ಲಿ ಅವರ ಕಲಾಕೃತಿಗಳನ್ನು ಈ ಕೆಳಗಿನಂತೆ ವರ್ಗೀಕರಿಸಿಕೊಂಡು ಇಲ್ಲಿ ಚರ್ಚಿಸಲಾಗಿದೆ.

**ಕಲಾಕೃತಿಗಳ ವರ್ಗೀಕರಣ**

**ಭಾಗ I : ರೇಖಾಚಿತ್ರಗಳು**

೧. ಶಿರಭಾವ ರೇಖಾಚಿತ್ರಗಳು

೨. ಪೂರ್ಣ ಶಿರಭಾವ ರೇಖಾಚಿತ್ರಗಳು

೩. ಸಂಯೋಜನಾ ರೇಖಾಚಿತ್ರಗಳು

**ಭಾಗ II : ವರ್ಣಚಿತ್ರಗಳು**

೧. ತೈಲವರ್ಣ ಚಿತ್ರಗಳು

೨. ಜಲವರ್ಣ ಚಿತ್ರಗಳು

**ಭಾಗ III : ಛಾಯಾಚಿತ್ರಗಳು**

೧. ಶಿರಭಾವ ಛಾಯಾಚಿತ್ರಗಳು

೨. ಪೂರ್ಣ ಶಿರಭಾವ ಛಾಯಾಚಿತ್ರಗಳು

೩. ಪ್ರಕೃತಿ ಛಾಯಾಚಿತ್ರಗಳು

ಹೀಗೆ ಈ ಮೇಲಿನ ವರ್ಗೀಕರಣದಂತೆ ಚಿತ್ರಗಳನ್ನು ವರ್ಗೀಕರಿಸಿಕೊಂಡು ಕಲಾಕೃತಿಗಳನ್ನು ವಿಶ್ಲೇಷಣೆ ಮಾಡುತ್ತಾ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ಐದು : ಡಿ.ವಿ ಹಾಲಭಾವಿಯವರ ಕಲಾಕೃತಿಗಳ ಶೈಲಿ, ಪ್ರಭಾವ, ಪ್ರೇರಣೆ ಹಾಗೂ ತಂತ್ರಗಾರಿಕೆ** ಈ ಅಧ್ಯಾಯದಲ್ಲಿ ಹಾಲಭಾವಿಯವರು ತಮ್ಮ ಬದುಕಿನುದ್ದಕ್ಕೂ ರಚಿಸಿದ ಸಾವಿರಾರು ಕಲಾಕೃತಿಗಳಲ್ಲಿ ತಮ್ಮ ಸುತ್ತಲಿನ ಪರಿಸರದ ಪ್ರಭಾವ ಪಡೆಯುವುದರ ಮೂಲಕ ತಮ್ಮ ಅಭಿವ್ಯಕ್ತಿಗೆ ಒಂದು ನಿರ್ದಿಷ್ಟ ರೂಪವನ್ನು ನೀಡಿದ್ದಾರೆ. ಅಂತಹ ಪ್ರಭಾವ, ಪ್ರೇರಣೆ, ತಂತ್ರಗಾರಿಕೆಗಳ ಕುರಿತಾದ ಚರ್ಚೆಯನ್ನು ಪ್ರಸ್ತುತ ಅಧ್ಯಾಯದಲ್ಲಿ ಕೈಗೊಳ್ಳಲಾಗಿದೆ. ಕಲಾಕೃತಿ ನಿರ್ಮಾಣದ ಹಿಂದೆ ಅನುಭವ, ಪ್ರಭಾವ-ಪ್ರೇರಣೆಗಳು ಇದ್ದೇ ಇರುತ್ತವೆ. ಹಾಲಭಾವಿಯವರ ಬಹುತೇಕ ಕಲಾಕೃತಿಗಳಲ್ಲಿ ಪ್ರಭಾವಗಳು ಮೂಡಿವೆ. ಹಾಲಭಾವಿಯವರು ಹಲವಾರು ಶೈಲಿಯಲ್ಲಿ ಕೃತಿ ರಚಿಸಿದವರು.ಕಾಲ ಕಾಲಕ್ಕೆ ಅವರ ಕಲಾಕೃತಿಗಳ ಶೈಲಿ ಬದಲಾಗುತ್ತಾ ಹೋಗಿದೆ. ಆದರೂ ಇವರದೇ ಕೃತಿ ಎಂದು ಗುರುತಿಸುವ ಅಂಶಗಳು ಎಲ್ಲಾ ಕಲಾಕೃತಿಗಳಲ್ಲಿ ಎದ್ದು ಕಾಣುತ್ತದೆ ಎಂಬುದನ್ನು ಕುರಿತು ಈ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ಆರು : ಡಿ.ವಿ ಹಾಲಭಾವಿಯವರ ಕಲಾಸಾಹಿತ್ಯ** ಈ ಅಧ್ಯಾಯದಲ್ಲಿ ಡಿ.ವಿ ಹಾಲಭಾವಿಯವರು ಕರ್ನಾಟಕ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿ ಪಡೆದ ಪ್ರಮುಖ ಕಲಾವಿದರು ಮತ್ತು ವೆಂಕಟಪ್ಪ ಪ್ರಶಸ್ತಿ ಪಡೆದ ಮೊಟ್ಟಮೊದಲ ಕಲಾವಿದರು. ಇವರು ಅನೇಕ ಏಕವ್ಯಕ್ತಿ ಕಲಾಪ್ರದರ್ಶನವನ್ನು ಮಾಡಿದ್ದಾರೆ. ಸ್ವತಃ ತಾವೇ ಬರೆದ 'ಆರ್ಟ್‌ಗಿಲ್ಡ್' ಎಂಬ ಮಾಸ ಪತ್ರಿಕೆಯನ್ನು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ಪ್ರಕಟಿಸಿದ್ದ ಬಗ್ಗೆ ಮಾಹಿತಿ ನೀಡಲಾಗಿದೆ. 'ಕಂಟೆಂಪರರಿ ಆರ್ಟಿಸ್ಟ್' ಎಂಬ ಗ್ರಂಥದ ಬಗ್ಗೆ ವಿವರಣೆ ನೀಡಲಾಗಿದೆ. ಇಲ್ಲಿ ಹಾಲಭಾವಿಯವರ ಕುರಿತು ಬಂದ ಕಲಾಸಾಹಿತ್ಯದ ವಿವರಣೆಗಳನ್ನು ನೀಡಲಾಗಿದೆ. ಹಾಲಭಾವಿಯವರ ಕುರಿತು ಬಿಡಿ ಲೇಖನಗಳು, ಪತ್ರಿಕಾ ವರದಿಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಅಧ್ಯಾಯ ಏಳು : ಸಮಾರೋಪ** ಈ ಅಧ್ಯಾಯದ ಪ್ರಸ್ತುತ ಸಂಶೋಧನಾ ಲಘುಪ್ರಬಂಧದ ಆರೂ ಅಧ್ಯಾಯಗಳಲ್ಲಿ ಚರ್ಚಿತವಾದ ಫಲಿತಗಳ ವಿಶ್ಲೇಷಣೆಯನ್ನು ಮಾಡಲಾಗುವುದು.

**ಅಧ್ಯಯನದ ಫಲಿತಗಳು**

* ಹಾಲಭಾವಿಯವರು ತಮ್ಮ ಮನಸ್ಸಿನ ಪಕ್ವತೆಯ ಭಾವನೆಗಳಿಗೆ ತಕ್ಕಂತೆ ಬಣ್ಣಗಳನ್ನು ಆಯ್ದುಕೊಂಡಿದ್ದು, ಜಲವರ್ಣ, ತೈಲವರ್ಣ ಹಾಗೂ ಪೇಸ್ಟಲ್ ವರ್ಣಗಳಲ್ಲಿ ಚಿತ್ರಗಳನ್ನು ರಚಿಸಿದ್ದಾರೆ. ಈ ಚಿತ್ರಗಳು ಸಹೃದಯನ

ಮನಸ್ಸನ್ನು ಸುರೆಗೊಳ್ಳುವಂತೆ ವರ್ಣಸಂಯೋಜನೆ, ರೇಖೆಗಳ ಲಯಾತ್ಮಕತೆ, ರಂಗುಗಳ ಘನತ್ವ, ಕುಂಚಗಳ ಹರಿದಾಟವಿದೆ. ಹಾಗೂ ಅದ್ಭುತ ಆಳ ಆಕರ್ಷಣೆ ಮತ್ತು ಅರ್ಥವಂತಿಕೆಯನ್ನು ಹೊಂದಿದೆ.

* ಅಕಾಡೆಮಿಕ್ ಶೈಲಿಯನ್ನು ರೂಢಿಸಿಕೊಂಡ ಹಾಲಭಾವಿಯವರು ಜಲವರ್ಣಗಳನ್ನು ಪ್ರಯೋಗಿಸಿ ಅಭಿವ್ಯಕ್ತಿಸಿದ ಚಿತ್ರಗಳು ಅನೇಕ ಪಾರದರ್ಶಕ ಚಿತ್ರಗಳಲ್ಲಿ ವರ್ಣದ ಬಿಳುಪನ್ನು ಕುಂಚದಿಂದಲೇ ನಿಯಂತ್ರಿಸಿರುವದನ್ನು ಕಾಣುತ್ತೇವೆ. ಇದರಿಂದ ಜಲವರ್ಣಗಳ ಮೇಲಿನ ಅವರ ಹಿಡಿತ ಪ್ರೌಢಿಮೆಯ ಅರಿವಾಗುತ್ತದೆ. ಭಾವಚಿತ್ರಗಳಲ್ಲಿ ಬಳಸಿದ ಜಲವರ್ಣಗಳು ಚರ್ಮದ ನೈಜ ಅನುಭವ ನೀಡುವದರೊಂದಿಗೆ ಮಾಸದಂತೆ ತಾಜಾತನವನ್ನು ಹೊಂದಿದೆ.

* ಹಾಲಭಾವಿಯವರು ಚಿತ್ರಗಳನ್ನು ಸ್ವತಂತ್ರವಾಗಿ ರಚಿಸುವುದರ ಜೊತೆಗೆ, ಸಂಯೋಜನಾ ಚಿತ್ರಗಳಲ್ಲಿ ಹಿನ್ನಲೆಯಾಗಿ ಸಾಕಷ್ಟು ದುಡಿಸಿಕೊಂಡಿದ್ದಾರೆ. ನಮ್ಮ ಭಾರತೀಯ ಶೈಲಿಯ ಸೊಗಡು ಅದರಲ್ಲಿದೆ. ಗಿಡ, ಮರ, ಬಳ್ಳಿ, ಪಕ್ಷಿಗಳು ಎಲ್ಲವನ್ನೂ ವಿವರವಾಗಿ ನೈಜವಾಗಿ ನೈಜ ವರ್ಣಗಳ ಲೇಪನವನ್ನು ಹೊಂದಿ ನಮ್ಮನ್ನು ಭ್ರಮಾಲೋಕಕ್ಕೆ ಕರೆದೊಯ್ಯುತ್ತವೆ.

* ಜಲವರ್ಣದ ನಿಸರ್ಗ ಚಿತ್ರಗಳಲ್ಲಿ ಅನೇಕ ವಸ್ತು ವೈವಿದ್ಯತೆಯನ್ನು ಕಾಣುತ್ತೇವೆ, ಜೊತೆಗೆ ನೀರು ಆಕಾಶ, ಪ್ರತಿಬಿಂಬ ಅದರಂತೆ ಬಣ್ಣಗಳ ವೈವಿಧ್ಯತೆಯ ಛಾಯಾ ಮೌಲ್ಯ, ದೃಶ್ಯಾಂತರದ ಅನುಭವ ಸ್ಪಷ್ಟವಾಗಿ ಚಿತ್ರಿತವಾಗಿದೆ. ಬಣ್ಣಗಳ ಪಾರದರ್ಶಿಕೆ ವಸ್ತುಗಳ ಗುಣಧರ್ಮಕ್ಕೆ ಮೆರಗು ತಂದಿದೆ.

* ತಮ್ಮ ವ್ಯಕ್ತಿತ್ವದಂತೆಯೇ ಧಾರ್ಮಿಕ ವಸ್ತು ವಿಷಯಗಳನ್ನು ಆಯ್ಕೆಮಾಡಿಕೊಂಡಿದ್ದಾರೆ. ಉತ್ತಮ ಸಂಪ್ರದಾಯದ ನಡತೆಯಂತೆ ಚಿತ್ರ ವಿಷಯಗಳನ್ನು ಕಂಡುಕೊಂಡಿರುವ ಅದನ್ನು ಆ ದೃಷ್ಟಿಕೋನಕ್ಕೆ ಸರಿಯಾಗಿ ಚಿತ್ರಿಸಿರುವ ರೀತಿಗಳ ನಡುವೆ ಅವಿನಾಭಾವ ಸಂಬಂಧವನ್ನು ಕಾಣುತ್ತೇವೆ.

* ಇವರ ಚಿತ್ರಗಳ ಮುಖಾಂತರ ನಮ್ಮ ಆ ಕಾಲದ ನಾಡಿನ ಸಂಸ್ಕೃತಿ, ಜನಜೀವನದ ಚಿತ್ರಣದ ಜೊತೆಗೆ ಆನಂದವನ್ನು ನೀಡುವ ಸನ್ನಿವೇಶಗಳನ್ನು ನಮ್ಮ ಕಣ್ಣಮುಂದೆ ನಿಲ್ಲಿಸುವ ಶಕ್ತಿ ಪಡೆದಿರುವುದನ್ನು ಕಾಣುತ್ತೇವೆ.

* ಭಾರತೀಯ ಸಂವೇದನೆಗಳಿಗೆ ಅನುಗುಣವಾಗಿ, ವೈಯಕ್ತಿಕವಾದ ತಂತ್ರ ಶೈಲಿ ಕಲಾ ನೈಪುಣ್ಯತೆಗಳಿಂದ, ನೈಜ ಕಲೆಯ ಮೂಲಭೂತ ಸತ್ವಗಳನ್ನು ರಕ್ತಗತ ಮಾಡಿಕೊಂಡು, ಭಾರತೀಯ ಕಾವ್ಯ, ನಾಡಿನ ಪುರಾಣ ಇತಿಹಾಸಗಳ ಸತ್ವಭರಿತ ಸನ್ನಿವೇಶಗಳ ಭಾಷಿಕ ರೂಪದಲ್ಲಿನ ವಿವರವಾದ ನಿರೂಪಣೆಯನ್ನು ಕೊಟ್ಟಿದ್ದಾರೆ. ತಮ್ಮದೇ ಆದ ದೇಶಿಯ ಸಂಸ್ಕೃತಿಯ ಆಧ್ಯಾತ್ಮಿಕ ನಿಲುವು, ಭಾವಲಾವಣ್ಯ, ಆಳವಾದ ಅನುಭವ, ವಿವರವಾದ ನಿರೂಪಣೆಯನ್ನು ಹೊಂದಿರುವ ವಿಶಿಷ್ಟತೆ ಇವರ ಕಲಾಕೃತಿಗಳ ಮೂಲಗುಣವಾಗಿದೆ.

* ಸಂಯೋಜನಾ ಚಿತ್ರಗಳಲ್ಲಿ ಕಾನನದ ರಮ್ಯತೆಯ ಸೊಬಗು, ಹಾರಾಡುವ ಪಕ್ಷಿಯಿಂದ ಹಿಡಿದು ನೆಲದ ಮೇಲಿನ ಹುಲ್ಲಿಗೂ ಅಷ್ಟೇ ಪ್ರಾಮುಖ್ಯತೆಯನ್ನು ನೀಡಿದ್ದಾರೆ. ಲಯ, ಭಾವ ಅವುಗಳ ಸಂಗತಿಯ ಹಿಂದಿರುವ ಸತ್ಯದ ಅರಿವನ್ನು ಕಾಣುತ್ತೇವೆ.

* ಭಕ್ತ ಪ್ರಧಾನವಾದ ಚಿತ್ರಗಳೇ ಹೆಚ್ಚಾಗಿರುದರಿಂದ ಅಂತಹ ವಾತವರಣವನ್ನು ನಿರ್ಮಿಸಲು ನೀಲವರ್ಣವನ್ನು ಬಳಸಿ ಚಿತ್ರದಲ್ಲಿ ಸೌಮ್ಯತೆಯನ್ನು ತರುವುದು ವಿಶೇಷವಾಗಿದೆ. ಕೆಲವು ಚಿತ್ರಗಳು ಭಿತ್ತಿಚಿತ್ರಗಳನ್ನು ನೆನಪಿಗೆ ತರುವ ಗುಣಗಳನ್ನು ಹೊಂದಿದ್ದು ಸೌಮ್ಯ ಹಾಗೂ ಪ್ರಖರ ವರ್ಣಗಳ ಹದವರಿತ ಮೇಳವಾಗಿ ಸಂಭ್ರಮ ಹಾಗೂ ವೈಭವಯುತ ಪರಿಣಾಮ ಬೀರಿವೆ.

* ಸಂಯೋಜನೆಯಲ್ಲಿಯ ಆಕೃತಿಗಳ ವಸ್ತ್ರವಿನ್ಯಾಸಗಳಲ್ಲಿ ತೆಳುವಾಗಿ ಕುಂಚ ಪ್ರಯೋಗಿಸಿ ನೀಡುವ ವರ್ಣಲೇಪನ ಕಲಾಕೃತಿಯ ಮೌಲ್ಯವನ್ನು ಹೆಚ್ಚಿಸುತ್ತವೆ. ತೈಲವರ್ಣ ಚಿತ್ರಗಳನ್ನು ರಚಿಸುವಲ್ಲಿಯೂ ಅಷ್ಟೇ

ಪ್ರಭುತ್ವವನ್ನು ಸಾಧಿಸಿದ್ದಾರೆ. ಭಾವಚಿತ್ರಗಳಲ್ಲಿ ಜೀವಂತಿಕೆಯನ್ನು ಮೂಡಿಸಿದ್ದಾರೆ, ಒಟ್ಟಾರೆ ವ್ಯಕ್ತಿತ್ವದ ಭಾವನೆಗಳು ಮೂಡಿಸುವುದರೊಂದಿಗೆ ತಾದ್ರೂಪ್ಯತೆಯನ್ನು ಹೊಂದಿವೆ.

* ಭಾವಚಿತ್ರಗಳಲ್ಲಿ ಕಣ್ಣಿನಲ್ಲಿ ಜೀವ ಚೈತನ್ಯ ತುಂಬಿದ್ದಾರೆ, ಕೂದಲೆಳೆಗಳನ್ನು ಎಳೆಎಳೆಯಾಗಿ ಚಿತ್ರಿಸಿದ್ದಾರಲ್ಲದೆ ಬಟ್ಟೆಗಳ ಮೈವಳಿಕೆಯನ್ನು ನೈಜತೆಯನ್ನು ಮೆರೆದಿದ್ದಾರೆ. ಅನೇಕ ಚಿತ್ರಗಳಲ್ಲಿ ಕುಂಚದ ನೇರ ಹೊಡೆತಗಳಲ್ಲದೇ ಬಣ್ಣಗಳನ್ನು ಬೆರಸಿ ಮೃದುವಾಗಿ ಲೇಪಿಸಿರುವುದನ್ನು ಕಾಣುತ್ತೇವೆ. ಹಾಗೆಯೇ ತೈಲವರ್ಣಗಳ ಸಂಯೋಜನಾ ಚಿತ್ರಗಳ ಪರಿಣಾಮವನ್ನು ಕಾಣುತ್ತೇವೆ. ಇವರ ಚಿತ್ರಗಳು ವಿದೇಶಿ ಪದ್ಧತಿಯ ಕಲಾ ಶಿಕ್ಷಣದ ರೀತಿಯನ್ನು ಹೊಂದಿದ್ದರೂ ಭಾವನೆಗಳು, ಅನುಭವಗಳು ಭಾರತೀಯತೆಯನ್ನು ಪ್ರತಿಬಿಂಬಿಸುತ್ತವೆ.

ಹೀಗೆ ಹಾಲಭಾವಿಯವರ ವೈವಿಧ್ಯಮಯವಾದ ಚಿತ್ರಗಳು ಅವರ ವೈಯಕ್ತಿಕ ಮನೋಧರ್ಮದ ಮೇಲೆ ನೈಜ ಕಲಾ ಶೈಲಿಯಲ್ಲಿ ಕಲಾಕೃತಿಗಳ ರಚನೆಯನ್ನು ಮಾಡಿದ್ದಾರೆ. ತಮ್ಮ ಕಣ್ಣಲ್ಲಿ ಮನಸ್ಸಿನ ಭಾವನೆಗಳಲ್ಲಿ ಜೀವನದ ಕಣ ಕಣದಲ್ಲಿ ಆವರಿಸಕೊಂಡಿರುವ ಕಲೆಗೆ ತಮ್ಮದೇ ಆದ ವಿಶಿಷ್ಟ ಮೆರಗನ್ನು ಕೊಟ್ಟು ಆಹ್ಲಾದಕರ ರೀತಿಯಲ್ಲಿ ಮನಸ್ಸಿಗೆ ಆನಂದವನ್ನು ನೀಡುವಂಥ ಜನಮನ ಸೂರೆಗೊಳ್ಳುವ ರೀತಿಯಲ್ಲಿ ಚಿತ್ರಿಸಿರುವುದನ್ನು ಅವರು ಈ ಎಲ್ಲ ವರ್ಣ ಚಿತ್ರಗಳ ಅಧ್ಯಯನದಿಂದ ತಿಳಿದು ಬರುತ್ತದೆ.

ಧಾರವಾಡ ಸಾಂಸ್ಕೃತಿಕ ಪರಿಸರ ಮತ್ತು ಕಲಾವಿದರಾದ ಹಾಲಭಾವಿಯವರ ಮೇಲೆ ಪ್ರಭಾವ ಬೀರಿ ಅವರೊಬ್ಬ ದೊಡ್ಡ ಕಲಾವಿದರಾಗಿ ರೂಪಗೊಳ್ಳಲು ಕಾರಣವಾಗಿದೆ ಎಂಬ ವಿಷಯವನ್ನು ಇಲ್ಲಿ ಕಂಡುಕೊಳ್ಳಲಾಗಿದೆ. ಅಲ್ಲದೇ ಕಲಾಶಿಕ್ಷಣ ಕಲಾಗುರುಗಳು ಅವರ ಸಹಪಾಠಿಗಳ ಬಗ್ಗೆ ಚರ್ಚಿಸಲಾಗಿದೆ.

ಮುಂಬೈ ಜೆ.ಜೆ.ಕಲಾಶಾಲೆಯಲ್ಲಿ ಚಿತ್ರಕಲೆಯನ್ನು ನೈಜಶೈಲಿಯಲ್ಲಿ ಕಲಿತ ಇವರು ನಂತರದಲ್ಲಿ ತಮ್ಮದೇ ಆದ ಶೈಲಿಯನ್ನು ರೂಪಿಸಿಕೊಂಡು ನಾಡಿನ ಕಲಾರಂಗದಲ್ಲಿ ಗುರುತಿಸುವಂತಾದರು. ಯಾವ ಯಾವ ಅಂಶಗಳು ಸಹಕಾರಿಯಾದವು ಎಂಬುದನ್ನು ಇಲ್ಲಿ ವಿವೇಚಿಸಲಾಗಿದೆ.

ಹಾಲಭಾವಿಯವರ ಕಲಾಶಾಲೆ ಸ್ಥಾಪನೆ ಕಲಾಶಾಲೆಯ ಕಲಾಕ್ಷೇತ್ರಕ್ಕೆ ಕೊಟ್ಟ ಕೊಡುಗೆಯನ್ನು, ಸುಧಾರಣೆಯನ್ನು ಇಲ್ಲಿ ಚರ್ಚಿಸಲಾಗಿದೆ. ಮತ್ತು ಈ ಸಂದರ್ಭದಲ್ಲಿ ಅವರ ಇತರ ಕಾರ್ಯಕ್ಷೇತ್ರಗಳ ಬಗ್ಗೆ ಕಲಾ ಅಧ್ಯಯನ ಕಲಾವಿದ್ಯಾರ್ಥಿಗಳ ಕುರಿತು ಹೀಗೆ ಅನೇಕ ಆಯಾಮಗಳ ಕುರಿತು ಇಲ್ಲಿ ಚರ್ಚಿಸಲಾಗಿದೆ.

ಹಾಲಭಾವಿಯವರ ಒಟ್ಟು ಕಲಾಕೃತಿಗಳನ್ನು ಸಮೀಕ್ಷಿಸಿದಾಗ ರೇಖಾಚಿತ್ರ, ವರ್ಣಚಿತ್ರ, ಛಾಯಾಚಿತ್ರಗಳಲ್ಲಿ ಕುತೂಹಲಕರ ಅಂಶಗಳು ಕಂಡು ಬರುತ್ತವೆ ಎಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

**ಪ್ರಸ್ತುತ ಅಧ್ಯಯನದ ಪ್ರಮುಖ ಫಲಿತಗಳು**

ಹಾಲಭಾವಿಯವರ ರೇಖಾಚಿತ್ರಗಳು ಭಾವಚಿತ್ರಗಳು ಮತ್ತು ಪೂರ್ಣಭಾವ ಚಿತ್ರಗಳು ಜೀವಂತಿಕೆಯಿಂದ ಕೂಡಿದ್ದು, ಭಾವನೆಗಳ ಜೊತೆಗೆ ಸ್ಪಂದಿಸುತ್ತವೆ. ಇವರ ಕೆಲವು ರೇಖಾಚಿತ್ರಗಳು ವರ್ಣದಲ್ಲಿ ಇದ್ದರೆ, ಇನ್ನು ಕೆಲವು ಕಲಾಕೃತಿಗಳು ಪೆನ್ಸಿಲ್ ಚಾರಕೋಲ ಮಾಧ್ಯಮದಲ್ಲಿ ನೈಜತೆಯನ್ನು ಮೂಡಿಸಿವೆ. ದಿನನಿತ್ಯದ ರೇಖಾಚಿತ್ರಗಳು ಒಂದು ಬಗೆಯಾದರೆ, ನಿಸರ್ಗ ಚಿತ್ರ ಸಂಯೋಜನಾ ಚಿತ್ರಗಳ ಕೆಲವು ರೇಖಾಚಿತ್ರಗಳು ವಿಶಷ್ಟವಾದ ಶೈಲಿಯಲ್ಲಿವೆ.

ಇವರ ಕೆಲವು ಸಂಯೋಜನಾ ಕೃತಿಗಳು ಪೂರ್ಣತಃ ಚಿತ್ರಗಳು ಸೆಮಿ ಮಾಡರ್ನ ಶೈಲಿಯಲ್ಲಿವೆ. ಹಾಲಭಾವಿಯವರ ವರ್ಣಚಿತ್ರಗಳಲ್ಲಿ ಬೇರೆ ಬೇರೆ ವಿಧಾನ ಮತ್ತು ಶೈಲಿಗಳನ್ನು ಗುರತಿಸಲಾಗಿದೆ. ಸಂಯೋಜನಾ ಚಿತ್ರದಲ್ಲಯೂ ಇವರು ಹೆಚ್ಚು ನಿಸರ್ಗವನ್ನು ಚಿತ್ರಿಸಿದ್ದು ಕಂಡು ಬರುವುದು.

ಭಾವಚಿತ್ರಗಳಲ್ಲಿನ ವೇಗವಾದ ಚಲನೆಯಿಂದ ಕೂಡಿದ ಕುಂಚದ ಸೆಳೆತಗಳು ವರ್ಣವೈಖರಿ, ಹಿನ್ನೆಲೆ ಮುನ್ನೆಲೆಯಲ್ಲಿ ಅಳವಡಿಸುವ ಸ್ಥಳಾವಕಾಶ ವಿಶಿಷ್ಟ ಅಂಶಗಳಾಗಿವೆ. ಕಲಾಕೃತಿಗಳಲ್ಲಿ ಇವರು ಅಳವಡಿಸಿರುವ ವರ್ಣವೈವಿಧ್ಯತೆ ಕಣ್ಣಿಗೆ ಆನಂದವನ್ನು ಉಂಟುಮಾಡುವ ಬಣ್ಣಗಳಾಗಿವೆ.

ಸಂಯೋಜನಾ ಚಿತ್ರಗಳಲ್ಲಿ ಸುತ್ತಮುತ್ತಲಿನ ಪರಿಸರ ಹಾಗೂ ಪೌರಾಣಿಕ ವಿಷಯಗಳು ಇಲ್ಲಿ ಹೆಚ್ಚು ಪ್ರತಿನಿಧಿಸಿವೆ. ಹೀಗೆ ಚಿತ್ರಕಲೆಯೊಂದಿಗೆ ಬೆಳೆದು ಬಂದಿರುವುದು ಈ ಅಧ್ಯಯನದುದ್ದಕ್ಕೂ ಕಂಡು ಬರುವುದು.

ಹೀಗೆ ಹಾಲಭಾವಿಯವರ ಅಧ್ಯಯನ ವೈವಿಧ್ಯತೆಯಿಂದ ಕೂಡಿರುವುದು.

......................

## ೦೧. ಹಾಲಭಾವಿಯವರಿಗೆ ಸಂದ ಪ್ರಶಸ್ತಿಗಳು

ಕರ್ನಾಟಕ ಲಲಿತಕಲಾ ಅಕಾಡೆಮಿಯ ಗೌರವ ಪ್ರಶಸ್ತಿ ೧೯೬೮

ರಾಜ್ಯೋತ್ಸವ ಪ್ರಶಸ್ತಿ ೧೯೯೪

ಐದನೇ ಧಾರವಾಡ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ ೧೯೯೪

ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ ೧೯೯೫




೧೯೯೫ನೇಯ ಸಾಲಿನ "ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ"ಯನ್ನು
ಅಂದಿನ ಮುಖ್ಯಮಂತ್ರಿ ಶ್ರೀ ಎಚ್.ಡಿ.ದೇವೇಗೌಡ ಅವರು ಶ್ರೀ ಡಿ.ವಿ.ಹಾಲಭಾವಿಯವರಿಗೆ
ಪ್ರದಾನ ಮಾಡುತ್ತಿರುವ ಸಂದರ್ಭ.



೧೯೭೮ನೇಯ ಸಾಲಿನ ಲಲಿತಕಲಾ ಅಕಾಡೆಮಿ ಗೌರವ ಪ್ರಶಸ್ತಿ ಪುರಸ್ಕೃತ ಶ್ರೀ ಡಿ.ವಿ.ಹಾಲಭಾವಿಯವರೊಂದಿಗೆ
ಶ್ರೀ ಎ.ಸಿ.ಹನುಮಂತಾಚಾರ್ ಮತ್ತು ಶ್ರೀ ಎಫ್.ಡಿ.ಯಲವಟ್ಟಿ

## ೦೨. ಹಾಲಭಾವಿಯವರ ಕಲಾಕೃತಿಗಳ ಸಂಗ್ರಹದ ನೆಲೆಗಳು

೧. ಮುರಘಾಮಠ, ಮರಾಠ ಮಂಡಳ, ರೋಟರಿ ಕ್ಲಬ್, ಉಳುವಿ ಚನ್ನಬಸವಣ್ಣನ ಗುಡಿ, ಧಾರವಾಡ

೨. ಕಾನೂನು ಮಹಾವಿದ್ಯಾಲಯ, ಬೆಳಗಾಂ

೩. ಮುನ್ಸಿಪಲ್ ಹೈಸ್ಕೂಲ್, ನಿಪ್ಪಾಣಿ

೪. ಆರ್.ಡಿ.ವಿ ಸ್ಕೂಲ್, ಚಿಕ್ಕೋಡಿ

೫. ಕಲಾಶಾಲೆ, ಗೋಕಾಕ

೬. ಯಾಂಟಿ ಫ್ಯಾಮಿನ್ ಇನ್ಸ್‌ಟಿಟ್ಯೂಟ್, ಬಿಜಾಪುರ

೭. ಮುಂಬೈ ಆರ್ಟ್ ಸೊಸೈಟಿ, ಮುಂಬೈ

೮. ಲಲಿತಕಲಾ ಅಕಾಡೆಮಿ, ಬೆಂಗಳೂರು

೯. ಡಾ. ಬೆಳಗಾಂವ್‌ಕರ, ಕೆನಡಾ

೧೦. ಸ್ಲೇ ಕಲಾವಿದ, ಇಂಗ್ಲೆಂಡ್

೧೧. ಚಂದಾ ಹಾಸ್ಪಿಟಲ್, ಅಮೇರಿಕಾ

ರಾಜ್ಯದಲ್ಲಿ ಹಾಲಭಾವಿಯವರ ಕಲಾಕೃತಿಗಳ ಸಂಗ್ರಹದ ನೆಲೆಗಳು



## ೦೩. ಗ್ರಂಥಋಣ


| | | |
|---|---|---|
| ೧. | ಅರವತ್ತರ ಒಸಗೆ<br>ಪ್ರ. ಸ್ಕೂಲ ಆಫ್ ಆರ್ಟ್,ಧಾರವಾಡ, ೧೯೬೮ | ಸಂ. ತಾರಾ ಪವಾರ |
| ೨. | ಎಂ.ಎ.ಚೆಟ್ಟಿ, ೧೯೮೫ | ಲೇ. ಅನ್ನದಾನಿ ಹಿರೇಮಠ |
| ೩. | ಕಲಾವಿದ ಆರ್.ಎಂ.ಹಡಪದ ಒಂದು ಅಧ್ಯಯನ<br>ಪಿಹೆಚ್.ಡಿ.ಮಹಾಪ್ರಬಂಧ, ಕ.ವಿ.ವಿ. ಹಂಪಿ, ೨೦೦೪ | ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ |
| ೪. | ಕಲಾವಿದ ಎಂ.ಎ.ಚೆಟ್ಟಿಯವರ ಜೀವನ ಕಲಾಕೃತಿಗಳು<br>ಪ್ರ. ವೀರಶೈವ ಅಧ್ಯಯನ ಅಕಾಡೆಮಿ,<br>ಶ್ರೀ ನಾಗನೂರು ರುದ್ರಾಕ್ಷಿ ಮಠ ಬೆಳಗಾಂ, ೨೦೦೩ | ಡಾ. ಲಕ್ಷ್ಮೀ ಗವಾಯಿ |
| ೫. | ಕಲಾಸಂವೇದನೆಯ ಒಳನೋಟಗಳು<br>ಪ್ರ.ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೭ | ಕೆ.ವಿ.ಸುಬ್ರಮಣ್ಯಂ |
| ೬. | ಕಲಾವಿದನ ನೆನಪುಗಳು<br>ಪ್ರ. ಉದಯರವಿ ಪ್ರಿಂಟರ್ಸ್, ಮೈಸೂರು | ಪಿ.ಆರ್.ತಿಪ್ಪೇಸ್ವಾಮಿ |
| ೭. | ಕರ್ನಾಟಕ ಭಾರತಿ<br>ಪ್ರ. ಪ್ರಸಾರಾಂಗ, ಕವಿ.ವಿ.ಧಾರವಾಡ ೧೯೮೭ | ಡಾ.ವಿಲ್ಯಂ ಮಾಡ್ತಾ |
| ೮. | ಕರ್ನಾಟಕ ಭಿತ್ತಿ ಚಿತ್ರ ಪರಂಪರೆ<br>ಪ್ರ. ಕ.ಲ.ಅ. ಬೆಂಗಳೂರು ೧೯೮೮ | ಡಾ.ಅ.ಲ.ನರಸಿಂಹನ್ |
| ೯. | ಕಲೆ ಮತ್ತು ನಾನು<br>ಪ್ರ. ಆಚಾರ್ಯ ಚಿತ್ರಕಲಾ ಭವನ, ಬೆಂಗಳೂರು ೧೯೮೫ | ಎಂ.ಟಿ.ವಿ.ಆಚಾರ್ಯ |
| ೯. | ವರ್ಣಸಂಚಯ<br>ಪ್ರ. ವಿಜಯ ಚಿತ್ರಕಲಾ ಮ.ವಿದ್ಯಾಲಯ, ಇಲಕಲ್, ೨೦೦೧ | ಡಾ.ಎಸ್.ಸಿ.ಪಾಟೀಲ |
| ೧೦. | ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು<br>ಪ್ರ. ಸ್ಕೂಲ್ ಆಫ್ ಆರ್ಟ್ ವಜ್ರ ಮಹೋತ್ಸವ ಸಮಿತಿ<br>ಧಾರವಾಡ, ೧೯೯೫ | ಡಾ.ಎಸ್.ಸಿ.ಪಾಟೀಲ |
| ೧೧. | ಸುವರ್ಣ ಮಹೋತ್ಸವ ಸಂಚಿಕೆ<br>ಪ್ರ. ಸ್ಕೂಲ್ ಆಫ್ ಆರ್ಟ್, ಧಾರವಾಡ,೧೯೮೫ | ಸಂ.ಎಚ್.ಜೆ.ಮುಲ್ಲಾ |
| ೧೨. | ಚಿತ್ರಾಕ್ಷಿ<br>ಪ್ರ. ಸ್ಕೂಲ್ ಆಫ್ ಆರ್ಟ್ ವಜ್ರ ಮಹೋತ್ಸವ ಸಮಿತಿ<br>ಧಾರವಾಡ, ೧೯೯೫ | ಸಂ. ಡಾ.ಎಸ್.ಸಿ.ಪಾಟೀಲ |
| ೧೩. | ಡಿ.ವಿ.ಹಾಲಭಾವಿ<br>ಪ್ರ. ಕ.ಲ.ಅ. ಬೆಂಗಳೂರು, ೧೯೮೭ | ಎಸ್.ಕೆ.ಹೂಗಾರ |

| | | |
|---|---|---|
| ೧೪. | ನನ್ನ ಶಿಲೋನ ಪ್ರವಾಸ<br>ಸ್ಕೂಲ್ ಆಫ್ ಆರ್ಟ್, ಧಾರವಾಡ, ೧೯೮೫ | ಡಿ.ವಿ.ಹಾಲಭಾವಿ |
| ೧೫. | ಚಿತ್ರಕಲಾವಿದ ಜೆ.ಎಸ್. ಖಂಡೇರಾವ್–ಒಂದು ಅಧ್ಯಯನ<br>ಎಂ.ಫಿಲ್. ಪ್ರಬಂಧ, ಕ.ವಿ.ವಿ., ಹಂಪಿ, ೨೦೦೨ | ಎಂ.ಸಿ.ಬಾಗೋಡಿ |
| ೧೬. | ಹಾಲಭಾವಿ ವೀರಭದ್ರಪ್ಪನವರು<br>ಪ್ರ. ವೀರಶೈವ ಅಧ್ಯಯನ ಸಂಸ್ಥೆ<br>ಜಗದ್ಗುರು ತೋಂಟದಾರ್ಯಮಠ, ಡಂಬಳ–ಗದಗ, ೧೯೮೨ | ಡಾ. ವೀರಣ್ಣ ರಾಜೂರು |
| ೧೭. | ಅಲ್ಲಮ ಪ್ರಭುದೇವರ ವಚನ ಸಂಪುಟ–೨<br>ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂ, ೧೯೯೫ | ಸಂ. ಡಾ.ಬಿ.ವಿ.ಮಲ್ಲಾಪುರ |
| ೧೮. | ಕಲೆ ಮತ್ತು ರಸಸ್ವಾದನೆ<br>ಕ.ಲ.ಕ.ಅ.ಬೆಂ, ೧೯೮೯ | ಸಂ. ಎಂ.ಎಚ್.ಕೃಷ್ಣಯ್ಯ |
| ೧೯. | ಮೈ ಕಂಟೆಪರರಿ ಆರ್ಟಿಸ್ಟ್<br>ಸ್ಕೂಲ್ ಆಫ್ ಆರ್ಟ್, ೧೯೬೮ | ಡಿ.ವಿ.ಹಾಲಭಾವಿ |
| ೨೦. | ನನ್ನ ಶಿಲೋನ ಪ್ರವಾಸ<br>ಸ್ಕೂಲ್ ಆಫ್ ಆರ್ಟ್, ೧೯೬೮ | ಡಿ.ವಿ.ಹಾಲಭಾವಿ |
| ೨೨. | ಎ ಸ್ಟಡಿ ಆಫ್ ಹಿಸ್ಟರಿ ಆಫ್ ದಿ ಸ್ಕೂಲ್ ಆಫ್ ಆರ್ಟ್<br>ಸಂಪ್ರಬಂಧ, ಕ.ವಿ.ವಿ.ಧಾರವಾಡ, ೧೯೭೦ | ಎನ್.ಪಿ. ಬಸವರಾಜ |


.........................

